ಪ್ರಾಞ್ಚಮಗ್ನಿಂ ಪ್ರಹರಂತ್ಯುತ್ಪತ್ನೀಮಾನಯಂತ್ಯನ್ವನಾಗ್ಂಸಿ

ಪ್ರವರ್ತಯಂತ್ಯ-

---

ಪ್ರಾಞ್ಚಮ್ । ಅಗ್ನಿಮ್ । ಪ್ರೇತಿ । ಹರಂತಿ । ಉದಿತಿ । ಪತ್ನೀಮ್ । ಏತಿ ।

ನಯಂತಿ । ಅನ್ವಿತಿ । ಅನಾಗ್ಂಸಿ । ಪ್ರೇತಿ । ವರ್ತಯಂತಿ ।

---

ಅಗ್ನಿಹರಣಾದಿವಿಧಿಗಳು

| | |
|---|---|
| ಅಗ್ನಿಮ್ ಪ್ರಾಞ್ಚಮ್ ಪ್ರಹರಂತಿ | *ಆಹವನೀಯಾಗ್ನಿಯ ಏಕದೇಶವನ್ನು ಪೂರ್ವಕ್ಕೆ ಒಯ್ಯುತ್ತಾರೆ. |
| ಪತ್ನೀಮ್ ಉದಾನಯಂತಿ | [ಪತ್ನೀಶಾಲಾಮಂಟಪದಲ್ಲಿ ಇರುವ] ಯಜಮಾನಪತ್ನಿಯನ್ನು ಪೂರ್ವದಿಕ್ಕಿನ ಕಡೆಗೆ] ಕರೆದುಕೊಂಡು ಹೋಗಬೇಕು. |
| ಅನಾಗ್ಂಸಿ ಅನು ಪ್ರವರ್ತಯಂತಿ | ಹವಿರ್ಧಾನಶಕಟಗಳನ್ನು ಪೂರ್ವದಿಕ್ಕಿನ ಕಡೆ ಹೊರಡಿಸಬೇಕು. |

---

ಹವಿರ್ಧಾನಶಕಟಗಳನ್ನು ಪೂರ್ವಾಭಿಮುಖವಾಗಿ ಚಲಿಸುವಂತೆ ಮಾಡಬೇಕು. ಈ ಹವಿರ್ಧಾನಗಳ ಚಲನೆಯು ಯಜ್ಞದ ಪ್ರಾರಂಭವಿದ್ದಂತೆ. ಪತ್ನಿಯು ಗೋಪಾದ ಧೂಳಿಯಿಂದ ಹವಿರ್ಧಾನಶಕಟದ ಅಚ್ಚನ್ನು ಗಾಡಿಗೆ ಎಣ್ಣೆ ಹಾಕುವಂತೆ ಲೇಪಿಸಬೇಕು. ಇದು ಯಜ್ಞರೂಪದಿಂದ ಮತ್ತೊಂದು ಯಜ್ಞರೂಪವನ್ನು ಸೇರಿಸಿದಂತಾಗುತ್ತದೆ.

ಅಗ್ನಿಪ್ರಣಯನದ ಅನಂತರ ಮೊದಲಿನ ಆಹವನೀಯವು ಗಾರ್ಹಪತ್ಯವಾಗುತ್ತದೆ. ಇದರಿಂದ ಮೊದಲಿನ ಗಾರ್ಹಪತ್ಯಸ್ಥಾನವು ಶೂನ್ಯವಾಗುತ್ತದೆ. ಆಗಲೇ ಯಜಮಾನಪತ್ನಿಯನ್ನೂ ಕರೆತರಬೇಕು.

---

*ಮೊದಲಿನ ಗಾರ್ಹಪತ್ಯವು ಮೊದಲಿನ ಆಹವನೀಯದಲ್ಲಿ ಇಡಲ್ಪಟ್ಟಿತು. ಆಗ ಗಾರ್ಹಪತ್ಯವು ಪುರಾಣಗಾರ್ಹಪತ್ಯವೆನಿಸಿಕೊಳ್ಳುವುದು. ಆ ಆಹವನೀಯವು ಯಜ್ಞಶಾಲೆಯ ಮುಂಭಾಗದಲ್ಲಿ ಇರುವುದರಿಂದ ಅದು ಶಾಲಾಮುಖೀಯವೆನಿಸಿಕೊಳ್ಳುತ್ತದೆ. ಅನಂತರ ಆ ಅಗ್ನಿಯ ಏಕದೇಶವು/ ಒಂದು ಭಾಗವು ಪ್ರಾಙ್ಮುಖವಾಗಿ ಪಶುಶ್ರಪಣಕ್ಕಾಗಿ ಒಯ್ಯಲ್ಪಡುತ್ತದೆ. ಹೀಗಾಗಿ ಆ ಅಗ್ನಿಯು ಪ್ರಾಚೀನಗಾರ್ಹಪತ್ಯಾಗ್ನಿಯ ಏಕದೇಶವಾಗಿರುತ್ತದೆ.

ಥ ವಾ ಅಸ್ಯೈಷ ಧಿಷ್ಣಿಯೋ ಹೀಯತೇ ಸೋಽನು

ಧ್ಯಾಯತಿ ಸ ಈಶ್ವರೋ ರುದ್ರೋ ಭೂತ್ವಾ[(೯)]ಪ್ರಜಾಂ

ಪಶೂನ್, ಯಜಮಾನಸ್ಯ ಶಮಯಿತೋರ್ಯರ್‌ಹಿ

ಪಶುಮಾಪ್ರೀತಮುದಂಚಂ ನಯಂತಿ

---

ಅಥ । ವೈ । ಅಸ್ಯ । ಏಷಃ । ಧಿಷ್ಣಿಯಃ । ಹೀಯತೇ । ಸಃ । ಅನ್ವಿತಿ । ಧ್ಯಾಯತಿ । ಸಃ । ಈಶ್ವರಃ । ರುದ್ರಃ । ಭೂತ್ವಾ ।(೯)। ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಯಜಮಾನಸ್ಯ । ಶಮಯಿತೋಃ । ಯರ್‌ಹಿ । ಪಶುಮ್ । ಆಪ್ರೀತಮಿತ್ಯಾ-ಪ್ರೀತಮ್ । ಉದಂಚಮ್ । ನಯಂತಿ ।

---

## ಅಗ್ನಿಯ ಕೋಪದ ಶಮನಪ್ರಕಾರ

| | |
|---|---|
| ಅಥ ವೈ | ಆಗ |
| ಅಸ್ಯ ಏಷಃ ಧಿಷ್ಣಿಯಃ | ಪುರಾತನಗಾರ್ಹಪತ್ಯಾಗ್ನಿಯ ಈ |
| ಹೀಯತೇ | ಸ್ಥಾನವಿಶೇಷವು ಶೂನ್ಯವಾಗುತ್ತದೆ. |
| ಸಃ ಅನುಧ್ಯಾಯತಿ | ಆ ಅಗ್ನಿಯು ಮತ್ತೆ ಮತ್ತೆ ಸ್ಥಾನಶೂನ್ಯತೆಯನ್ನು ಚಿಂತಿಸುವನು. |
| ಸಃ ರುದ್ರಃ ಭೂತ್ವಾ | ಅವನು ಕೋಪಗೊಂಡು ರುದ್ರನಾಗಿ |
| ಯಜಮಾನಸ್ಯ ಪ್ರಜಾಮ್ ಪಶೂನ್ ಶಮಯಿತೋಃ | ಯಜಮಾನನ ಪ್ರಜೆಗಳನ್ನೂ ಪಶುಗಳನ್ನೂ |
| ಈಶ್ವರಃ | ನಾಶಗೊಳಿಸಲು ಸಮರ್ಥನಾಗುತ್ತಾನೆ. |
| ಯರ್‌ಹಿ ಆಪ್ರೀತಮ್ | ಯಾವಾಗ ಪ್ರಯಾಜಯಾಜ್ಯೆಗಳಿಂದ ಸಂತೋಷ |
| ಪಶುಮ್ | ಗೊಳಿಸಲ್ಪಟ್ಟ/ಸ್ವಲ್ಪ ಸಂತೋಷವುಳ್ಳ ಪಶುವನ್ನು |
| ಉದಂಚಮ್ ನಯಂತಿ | ಉತ್ತರದಿಕ್ಕಿಗೆ ಕರೆದೊಯ್ಯುತ್ತಾರೆಯೋ |

ತರ್ಹಿ ತಸ್ಯ ಪಶುಶ್ರಪಣಗ್ಂ ಹರೇತ್ತೇನೈವೈನಂ ಭಾಗಿನಂ ಕರೋತಿ ಯಜಮಾನೋ ವಾ ಆಹವನೀಯೋ

---

ತರ್ಹಿ । ತಸ್ಯ । ಪಶುಶ್ರಪಣಮಿತಿ ಪಶು-ಶ್ರಪಣಮ್ । ಹರೇತ್ । ತೇನ । ಏವ । ಏನಮ್ । ಭಾಗಿನಮ್ । ಕರೋತಿ । ಯಜಮಾನಃ । ವೈ । ಆಹವನೀಯ ಇತ್ಯಾ-ಹವನೀಯಃ ।

---

| | |
|---|---|
| ತರ್ಹಿ | ಆಗ |
| ತಸ್ಯ ಪಶುಶ್ರಪಣಮ್ ಹರೇತ್ | ಆ ಪ್ರತೀಚೀನಗಾರ್ಹಪತ್ಯಾಗ್ನಿಯ ಏಕದೇಶ ರೂಪವಾದ ಪಶುಶ್ರಪಣಾಗ್ನಿಯನ್ನು ತೆಗೆದು ಕೊಂಡು ಹೋಗಬೇಕು. |
| ತೇನ ಏವ ಏನಮ್ ಭಾಗಿನಮ್ ಕರೋತಿ | ಆದರಿಂದಲೇ ಈ ಅಗ್ನಿಯನ್ನು ತನ್ನ ಭಾಗವನ್ನು ಹೊಂದಿದವನನ್ನಾಗಿ ಮಾಡುತ್ತಾನೆ. |

**ಆಹವನೀಯದಿಂದ ಪಶುಶ್ರಪಣಕ್ಕಾಗಿ ಅಗ್ನಿಯನ್ನು ಒಯ್ದರೆ ಉಂಟಾಗುವ ದೋಷ;ಪರಿಹಾರ**

| | |
|---|---|
| ಯಜಮಾನಃ ಆಹವನೀಯಃ ವೈ | ಯಜಮಾನನು ಯಾಗದಲ್ಲಿ ಮುಖ್ಯವಾದ ಆಹವನೀಯಸ್ವರೂಪನಷ್ಟೆ. |

---

ಪುರಾತನಗಾರ್ಹಪತ್ಯಾಗ್ನಿಯ ಸ್ಥಾನವು ಶೂನ್ಯವಾದುದರಿಂದ ಅವನು ಯಜಮಾನನ ಪ್ರಜೆಗಳನ್ನೂ, ಪಶುಗಳನ್ನೂ ನಾಶ ಮಾಡಿಯಾನು. ಪಶುಶ್ರಪಣಾಗ್ನಿಯನ್ನು ಮುಂದೆ ಒಯ್ದರೆ ಅವನು ತನ್ನ ಭಾಗವನ್ನು ಹೊಂದಿದವನಾಗುತ್ತಾನೆ. ಅದರ ಕ್ರಮವು ಹೀಗಿದೆ; ಆಹವನೀಯಾಗ್ನಿಯ (ಮೊದಲಿನ ಗಾರ್ಹಪತ್ಯಾಗ್ನಿಯ) ಒಂದು ಕೊಳ್ಳಿಯನ್ನು ಮುಂದೆ ಒಯ್ಯಬೇಕು. ಬಳಿಕ ಅರಣಿಗಳನ್ನು ಒಯ್ಯಬೇಕು. ಅವುಗಳ ಹಿಂದೆ ಆಗ್ನೀಧ್ರನೂ ಪಶುಶಮಿತನೂ ಪಶುವನ್ನು ಒಯ್ಯಬೇಕು. ಹೀಗಿರುವ ಅನುಷ್ಠಾನದಿಂದ ತೃಪ್ತನಾದ ಪ್ರತೀಚೀನಗಾರ್ಹಪತ್ಯಾಗ್ನಿಯು ಶಾಂತನಾಗುತ್ತಾನೆ.

ಯಜಮಾನಂ ವಾ ಏತದ್ವಿಕರ್ಷಂತೇ ಯದಾಹವನೀಯಾ

ತ್ಪಶುಶ್ರಪಣಗ್ಂ ಹರಂತಿ ಸ ವೈವ ಸ್ಯಾನ್ನಿರ್ಮಂಥ್ಯಂ ವಾ

ಕುರ್ಯಾದ್ಯಜಮಾನಸ್ಯ ಸಾತ್ಮತ್ವಾಯ

---

ಯಜಮಾನಮ್ । ವೈ । ಏತತ್ । ವೀತಿ । ಕರ್ಷಂತೇ । ಯತ್ ।

ಆಹವನೀಯಾದಿತ್ಯಾ-ಹವನೀಯಾತ್ । ಪಶುಶ್ರಪಣಮಿತಿ ಪಶು-ಶ್ರಪಣಮ್ ।

ಹರಂತಿ । ಸಃ । ವಾ । ಏವ । ಸ್ಯಾತ್ । ನಿರ್ಮಂಥ್ಯಮಿತಿ ನಿಃ-ಮಂಥ್ಯಮ್ । ವಾ ।

ಕುರ್ಯಾತ್ । ಯಜಮಾನಸ್ಯ । ಸಾತ್ಮತ್ವಾಯೇತಿ ಸಾತ್ಮ-ತ್ವಾಯ ।

---

| | |
|---|---|
| ಯತ್ ಆಹವನೀಯಾತ್ ಪಶುಶ್ರಪಣಮ್ ಹರಂತಿ | ಆಹವನೀಯಾಗ್ನಿಯಿಂದ [ಏಕದೇಶವನ್ನು ಪ್ರತ್ಯೇಕಿಸಿ ತೆಗೆದುಕೊಂಡು] ಪಶುಶ್ರಪಣಾರ್ಥವಾಗಿ ಒಯ್ದರೆ |
| ಏತತ್ ಯಜಮಾನಮ್ ವಿಕರ್ಷಂತೇ ವೈ | ಯಜಮಾನನನ್ನೇ ಎಳೆದುಕೊಂಡು ಹೋದಂತಾಗುತ್ತದೆಯಷ್ಟೆ. |
| ಸಃ ವಾ ಏವ ಸ್ಯಾತ್ | [ಆ ದೋಷಪರಿಹಾರಕ್ಕಾಗಿ] ಪ್ರಾಚೀನ ಗಾರ್ಹಪತ್ಯಾಗ್ನಿಯಾದರೂ ಶ್ರಪಣಾಗ್ನಿಯಾಗಬಹುದು. |
| ನಿರ್ಮಂಥ್ಯಮ್ ವಾ ಕುರ್ಯಾತ್ | ಮಂಥನದಿಂದ ಉತ್ಪಾದಿಸಿದ ಲೌಕಿಕಾಗ್ನಿಯಾದರೂ ಆಗಬಹುದು |
| ಯಜಮಾನಸ್ಯ ಸಾತ್ಮತ್ವಾಯ | [ಇದು] ವಿಕರ್ಷಣವಿಲ್ಲದೆ ಯಜಮಾನನು ಪೂರ್ಣಸ್ವರೂಪನಾಗಿರುವುದಕ್ಕೆ ಕಾರಣವಾಗುತ್ತದೆ. |

---

ಆಹವನೀಯಾಗ್ನಿಯಿಂದ ಸ್ವಲ್ಪ ಭಾಗವನ್ನು ಪ್ರತ್ಯೇಕಿಸಿ ಪಶುಶ್ರಪಣಕ್ಕಾಗಿ ಒಯ್ದರೆ ಯಜಮಾನನನ್ನೇ ಎಳೆದುಕೊಂಡುಹೋದಂತಾಗುತ್ತದೆ.

ಯದಿ ಪಶೋರವದಾನಂ ನಶ್ಯೇದಾಜ್ಯಸ್ಯ ಪ್ರತ್ಯಾಖ್ಯಾಯಮ

ವದ್ಯೇತ್ಸೈವ ತತಃ ಪ್ರಾಯಶ್ಚಿತ್ತಿರ್ಯೇ ಪಶುಂ

ವಿಮಥ್ನೀರನ್, ಯಸ್ತಾನ್ಕಾಮಯೇತಾರ್ತಿಮಾರ್ಚ್ಛೇಯುರಿತಿ

---

ಯದಿ । ಪಶೋಃ । ಅವದಾನಮಿತ್ಯವ-ದಾನಮ್ । ನಶ್ಯೇತ್ । ಆಜ್ಯಸ್ಯ । ಪ್ರತ್ಯಾಖ್ಯಾಯಮಿತಿ ಪ್ರತಿ-ಆಖ್ಯಾಯಮ್ । ಅವೇತಿ । ದ್ಯೇತ್ । ಸಾ । ಏವ । ತತಃ । ಪ್ರಾಯಶ್ಚಿತ್ತಿಃ । ಯೇ । ಪಶುಮ್ । ವಿಮಥ್ನೀರನ್ನಿತಿ ವಿ-ಮಥ್ನೀರನ್ನ್ । ಯಃ । ತಾನ್ । ಕಾಮಯೇತ । ಆರ್ತಿಮ್ । ಏತಿ । ಋಚ್ಛೇಯುಃ । ಇತಿ ।

---

### ಪ್ರಾಯಶ್ಚಿತ್ತವಾಗಿ ಪ್ರಾಸಂಗಿಕವಾದ ಪ್ರಾಯಶ್ಚಿತ್ತವಿಧಿ

| | |
|---|---|
| ಪಶೋಃ ಅವದಾನಮ್ ಯದಿ ನಶ್ಯೇತ್ | ಪಶುವಿಗೆ ಸಂಬಂಧಿಸಿದ ಹೃದಯಾದಿ ಅವದಾನಗಳು ನಷ್ಟವಾದರೆ |
| ಆಜ್ಯಸ್ಯ ಪ್ರತ್ಯಾಖ್ಯಾಯಮ್ ಅವದ್ಯೇತ್ | ಲೆಕ್ಕ ಮಾಡಿ, ನಷ್ಟವಾದ ಅವದಾನಗಳಿಗೆ ಪ್ರತಿಯಾದ ಆಜ್ಯದ ಅವದಾನವನ್ನು ಮಾಡಬೇಕು. |
| ಸಾ ಏವ ತತಃ ಪ್ರಾಯಶ್ಚಿತ್ತಿಃ | ಇದೇ ದೋಷಪರಿಹಾರಕಾರಕವಾದ ಪ್ರಾಯಶ್ಚಿತ್ತವಾಗುತ್ತದೆ. |

### ಪ್ರಾಸಂಗಿಕವಾದ ಕಾಮ್ಯವಿಧಿ

| | |
|---|---|
| ಯೇ ಪಶುಮ್ ವಿಮಥ್ನೀರನ್ | ಯಾವ ಹಗೆಗಳು ಪಶುವಿನ ವಿಷಯದಲ್ಲಿ ಜಗಳವಾಡಿ ಪಶುವನ್ನು ಅಪಹರಿಸುತ್ತಾರೆಯೋ |
| ಯಃ ತಾನ್ ಆರ್ತಿಮ್ ಆರ್ಚ್ಛೇಯುಃ ಇತಿ ಕಾಮಯೇತ | ಯಾವ ಯಜಮಾನನು/ಅಧ್ವರ್ಯುವು ಅವರನ್ನು ನಾಶಪಡಿಸಲು ಬಯಸುತ್ತಾನೆಯೋ |

ಕುವಿದಙ್ಗೇತಿ ನಮೋವೃಕ್ತಿವತ್ಯರ್ಚಾಽಽಗ್ನೀಧ್ರೇ

ಜುಹುಯಾನ್ನಮೋವೃಕ್ತಿಮೇವೈಷಾಂ ವೃಙ್ಕ್ತೇ

ತಾಜಗಾರ್ತಿಮಾರ್ಚ್ಛಂತಿ ॥೧೦-3॥

[ಭೂತ್ವಾ ತತಷ್ಷಡ್ವಿಗ್ಂಶತಿಶ್ಚ ॥]

---

ಕುವಿತ್ । ಅಂಗ । ಇತಿ । ನಮೋವೃಕ್ತಿವತ್ಯೇತಿ ನಮೋವೃಕ್ತಿ-ವತ್ಯಾ । ಋಚಾ । ಆಗ್ನೀಧ್ರ ಇತ್ಯಾಗ್ನಿ-ಇಧ್ರೇ । ಜುಹುಯಾತ್ । ನಮೋವೃಕ್ತಿಮಿತಿ ನಮಃ-ವೃಕ್ತಿಮ್ । ಏವ । ಏಷಾಮ್ । ವೃಙ್ಕ್ತೇ । ತಾಜಕ್ । ಆರ್ತಿಮ್ । ಏತಿ । ಋಚ್ಛಂತಿ ॥೧೦॥

---

| | |
|---|---|
| ಕುವಿದಂಗ ಇತಿ | 'ಕುವಿದಂಗ' ಎಂದು ಆರಂಭವಾಗುವ |
| ನಮೋವೃಕ್ತಿವತ್ಯಾ ಋಚಾ | 'ನಮೋವೃಕ್ತಿಂ ನ ಜಗ್ಮುಃ' ಎಂಬ ಶಬ್ದವುಳ್ಳ ಋಕ್ಕಿನಿಂದ |
| ಆಗ್ನೀಧ್ರೇ ಜುಹುಯಾತ್ | ಆಗ್ನೀಧ್ರಧಿಷ್ಣಿಯದ ಅಗ್ನಿಯಲ್ಲಿ [ತುಪ್ಪದಿಂದ] ಹೋಮವನ್ನು ಮಾಡಬೇಕು. |
| ಏಷಾಮ್ ನಮೋವೃಕ್ತಿಮ್ ಏವ ವೃಙ್ಕ್ತೇ | ಈ ಪಶ್ವಪಹಾರಿಗಳ ನಮಸ್ಕಾರಾರ್ಹತೆಯನ್ನೇ ಈ ಹೋಮದಿಂದ ನಾಶಪಡಿಸುತ್ತಾನೆ/ಅವರು ಅನ್ನಹೀನರಾಗುತ್ತಾರೆ. |
| ತಾಜಕ್ ಆರ್ತಿಮ್ ಆರ್ಚ್ಛಂತಿ | ಒಡನೆಯೇ ಆ ಹಗೆಗಳು ನಾಶವನ್ನು ಹೊಂದುತ್ತಾರೆ. |

---

ಆದುದರಿಂದ ಪ್ರತೀಚೀನಗಾರ್ಹಪತ್ಯಾಗ್ನಿಯ ಏಕದೇಶವಾದರೂ ಪಶುಶ್ರಪಣಾಗ್ನಿಯಾಗಬಹುದು. ಅಥವಾ ಮಂಥನದಿಂದ ಉತ್ಪಾದಿಸಿದ ಲೌಕಿಕಾಗ್ನಿಯಾದರೂ ಆಗಬಹುದು. ಇದರಿಂದ ಯಜಮಾನನು ಕ್ಷೇಮವಾಗಿ ಇರುತ್ತಾನೆ.

'ಪ್ರಾಯಶ್ಚಿತ್ತ' ಎಂಬ ಪದದ ವಿವರಣೆಯು ಹೀಗೆ ಇದೆ. 'ಪ್ರಾಯಃ ಪಾಪಂ ವಿಜಾನೀಯಾತ್ ಚಿತ್ತಂ ತಸ್ಯ ವಿನಿಷ್ಕೃತಿಃ' ದೋಷವನ್ನು ದೂರ ಮಾಡುವ ಕರ್ಮವೇ ಪ್ರಾಯಶ್ಚಿತ್ತ. ಯಾಗಕ್ಕಾಗಿ ಹವಿಸ್ಸನ್ನಾಗಿ ಇಟ್ಟುಕೊಂಡಿರುವ ಪಶುವಿನ ಅಂಗಗಳ ಅವದಾನವು ನಷ್ಟವಾದರೆ ಅದು ದೋಷಕಾರಿ. ಅದಕ್ಕಾಗಿ ಆಜ್ಯದ ಅವ ದಾನವು ಪರಿಹಾರಕ. ಇದು ಪ್ರಾಸಂಗಿಕವಾದ ಪಶುಯಾಗಕ್ಕೆ ಸಂಬಂಧಿಸಿದ ಪ್ರಾಯಶ್ಚಿತ್ತವಾಗಿದೆ.

ವಿರಾಟರಾಜನ ಗೋವುಗಳನ್ನು ಕೌರವರು ಅಪಹರಿಸಿದಂತೆ ಯಾಗಪಶುವನ್ನು ಯಾರಾದರೂ ಅಪಹರಿಸಬಹುದು. ಯಜಮಾನನು ಅವರ ನಾಶವನ್ನು ಬಯಸಿದರೆ ಅಧ್ವರ್ಯುವು **'ಕುವಿದಂಗ'** ಎಂದು ಪ್ರಾರಂಭವಾಗುವ **'ನಮೋವೃಕ್ತಿಂ ನ ಜಗ್ಮುಃ'** [ನಮಸ್ಕಾರಾರ್ಹತೆಯನ್ನು ಕಳೆದುಕೊಂಡು ಬಹಿಷ್ಕೃತರಾಗುತ್ತಾರೆ] ಎಂಬುದಾಗಿ **'ನಮೋವೃಕ್ತಿ'** ಎಂಬ ಶಬ್ದವುಳ್ಳ ಋಕ್ಕಿನಿಂದ ಆಗ್ನೀಧ್ರಧಿಷ್ಣಿಯದ ಅಗ್ನಿಯಲ್ಲಿ ಹೋಮ ಮಾಡಬೇಕು. ಈ ಹೋಮವು ಆ ಹಗೆಗಳನ್ನು ಲೋಕದಲ್ಲಿ ಯಾರೂ ಗೌರವಿಸದಂತೆ ಮಾಡುತ್ತದೆ. ಅವರಿಗೆ ಅನ್ನವು ಸಿಕ್ಕದಂತೆ ಮಾಡುತ್ತದೆ. ಆ ಶತ್ರುಗಳು ಒಡನೆಯೇ ನಾಶವನ್ನು ಹೊಂದುತ್ತಾರೆ. ಇದೂ ಪ್ರಾಸಂಗಿಕವಾದ ಕಾಮ್ಯವಿಧಿ ಯಾಗಿದೆ.

## ॥ ಚತುರ್ಥೋಽನುವಾಕಃ ॥

ಪ್ರಜಾಪತೇರ್ಜಾಯಮಾನಾಃ ಪ್ರಜಾ ಜಾತಾಶ್ಚ ಯಾ ಇಮಾಃ ।
ತಸ್ಮೈ ಪ್ರತಿ ಪ್ರವೇದಯ ಚಿಕಿತ್ವಾಗ್ಂ ಅನುಮನ್ಯತಾಮ್ ॥

---

ಪ್ರಜಾಪತೇರಿತಿ ಪ್ರಜಾ–ಪತೇಃ । ಜಾಯಮಾನಾಃ । ಪ್ರಜಾ ಇತಿ ಪ್ರ–ಜಾಃ । ಜಾತಾಃ ।
ಚ । ಯಾಃ । ಇಮಾಃ ॥ ತಸ್ಮೈ । ಪ್ರತಿ । ಪ್ರೇತಿ । ವೇದಯ । ಚಿಕಿತ್ವಾನ್ । ಅನ್ವಿತಿ ।
ಮನ್ಯತಾಮ್ ॥

---

ಮೂರನೆಯ ಅನುವಾಕದಲ್ಲಿ ಪದಾಂಜನವೂ,ಪಶುಶ್ರಪಣಾಗ್ನಿವಿಚಾರವೂ ಹೇಳಲ್ಪಟ್ಟಿತು. ಈ ನಾಲ್ಕನೆಯ ಅನುವಾಕದಲ್ಲಿ ಪಶೂಪಾಕರಣಾದಿಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| 1ಪ್ರಜಾಪತೇಃ...ಮನ್ಯತಾಮ್ ॥ | 2ಉಪಾಕರಣವನ್ನು ಮಾಡಲು |

---

✦ಯಾಃ ಪ್ರಜಾಃ ಜಾಯಮಾನಾಃ=ಯಾವ ಪ್ರಾಣಿಗಳು ಹುಟ್ಟುತ್ತಿವೆಯೋ; ಯಾಃ ಪ್ರಜಾಃ ಜಾತಾಃ ಚ =ಯಾವ ಪ್ರಜೆಗಳೂ ಪ್ರಾಣಿಗಳೂ ಹುಟ್ಟಿವೆಯೋ; ಇಮಾಃ=ಈ ಪ್ರಾಣಿಗಳು; ಪ್ರಜಾಪತೇಃ=ಪ್ರಜಾಪತಿಯ ಸೃಷ್ಟಿಯಾಗಿವೆ. [ಪಶುವೇ!] ತಸ್ಮೈ= ಆ ಪ್ರಜಾಪತಿಗೆ; ಪ್ರತಿ ಪ್ರವೇದಯ=[ನೀನು ದೇವತೆಗಳಿಗೆ ಅರ್ಪಿಸಲ್ಪಡುವುದನ್ನು] ಗುಟ್ಟಾಗಿ ತಿಳಿಸು; ಚಿಕಿತ್ವಾನ್=ಸರ್ವಜ್ಞನಾದ ಆ ಪ್ರಜಾಪತಿಯು; ಅನು ಮನ್ಯತಾಮ್=ಅನುಮತಿಸಲಿ.

---

1ಉಪಾಕರಣದಲ್ಲಿ ಈ ಮಂತ್ರವನ್ನು 'ಉಪೋ ದೇವಾನ್...'ಎಂಬ ಮಂತ್ರದೊಡನೆ ಹೇಳಬೇಕು.
2ದರ್ಭಗಳಿಂದ ಮತ್ತು ಬಸರೀಮರದ ಕೊನೆಯಿಂದ ಪಶುವನ್ನು ದೇವತೆಗಾಗಿ ಒಪ್ಪಿಸುವುದು.

ಇಮಂ ಪಶುಂ ಪಶುಪತೇ ತೇ ಅದ್ಯ ಬಧ್ನಾಮ್ಯಗ್ನೇ ಸುಕೃತಸ್ಯ ಮಧ್ಯೇ । ಅನುಮನ್ಯಸ್ವ ಸುಯಜಾ ಯಜಾಮ ಜುಷ್ಟಂ ದೇವಾನಾಮಿದಮಸ್ತು ಹವ್ಯಮ್ ॥

---

ಇಮಮ್ । ಪಶುಮ್ । ಪಶುಪತ ಇತಿ ಪಶು-ಪತೇ । ತೇ । ಅದ್ಯ । ಬಧ್ನಾಮಿ । ಅಗ್ನೇ । ಸುಕೃತಸ್ಯೇತಿ ಸು-ಕೃತಸ್ಯ । ಮಧ್ಯೇ ॥ ಅನ್ವಿತಿ । ಮನ್ಯಸ್ವ । ಸುಯಜೇತಿ ಸು-ಯಜಾ । ಯಜಾಮ । ಜುಷ್ಟಮ್ । ದೇವಾನಾಮ್ । ಇದಮ್ । ಅಸ್ತು । ಹವ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| ಇಮಂ...ಹವ್ಯಮ್ ॥ | ಉಪಾಕರಣದ ಎರಡನೆಯ ಮಂತ್ರ |

---

✦ಪಶುಪತೇ ಅಗ್ನೇ=ರುದ್ರರೂಪದಿಂದ ಪಶುಗಳಿಗೆ ಅಧಿಪತಿಯಾದ ಅಗ್ನಿದೇವನೇ ! ಸುಕೃತಸ್ಯ ಮಧ್ಯೇ=ಸತ್ಕರ್ಮವಾದ ಈ ಜ್ಯೋತಿಷ್ಟೋಮದ ಮಧ್ಯದಲ್ಲಿ, ಇಮಮ್ ಪಶುಮ್=ಈ ಪಶುವನ್ನು; ತೇ=ನಿನಗಾಗಿ; ಅದ್ಯ ಬಧ್ನಾಮಿ=ಈಗ ಕಟ್ಟಿಹಾಕುತ್ತೇನೆ. ಅನುಮನ್ಯಸ್ವ=[ಪಶುಪತಿಯಾದ ನೀನು ಇದಕ್ಕೆ] ಅನುಮತಿಸು. ಸುಯಜಾ ಯಜಾಮ =ಒಳ್ಳೆಯ ಪಶುಯಾಗದಿಂದ/ಅಗ್ನಿಷ್ಟೋಮಸಾಧನವಾದ ಪಶುವಿನಿಂದ ದೇವತೆಗಳನ್ನು ಆರಾಧಿಸೋಣ. ಇದಮ್=ಈ ಪಶುವು; ದೇವಾನಾಮ್=ದೇವತೆಗಳಿಗೆ; ಜುಷ್ಟಮ್=ಪ್ರಿಯವಾದ; ಹವ್ಯಮ್ ಅಸ್ತು=ಹವಿಸ್ಸಾಗಲಿ.

---

'ಪ್ರಾಜಾಪತ್ಯಾ ವೈ ಪಶವಃ' ಎಂಬ ಶ್ರುತಿವಾಕ್ಯದಂತೆ ಹುಟ್ಟುತ್ತಿರುವ ಮತ್ತು ಹುಟ್ಟಿರುವ ಎಲ್ಲ ಪ್ರಾಣಿಗಳೂ ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟಿವೆ. ಎಲೈ! ಪಶುವೇ! ನೀನು ದೇವತೆಗಳಿಗೆ ಆಹುತಿಯಾಗುವುದನ್ನು ಆ ಪ್ರಜಾಪತಿಗೆ ಗುಟ್ಟಾಗಿ ತಿಳಿಸು. ಎಲ್ಲವನ್ನೂ ತಿಳಿದ ಆ ಪ್ರಜಾಪತಿದೇವನು ನಿನಗೆ ಅನುಮತಿಯನ್ನು ಕೊಡಲಿ.

'ರುದ್ರಃ ಪಶೂನಾಮ್ ಅಧಿಪತಿಃ' ಎಂದು ರುದ್ರನೇ ಪ್ರಾಣಿಗಳಿಗೆ ಒಡೆಯನೆಂದು ಹೇಳಿದೆ. 'ರುದ್ರೋ ವಾ ಏಷ ಯದಗ್ನಿಃ' ಎಂಬುದಾಗಿ ಅಗ್ನಿಯೇ ಆ ರುದ್ರದೇವನೆಂದೂ

ಪ್ರಜಾನಂತಃ ಪ್ರತಿಗೃಹ್ಣಂತಿ ಪೂರ್ವೇ ಪ್ರಾಣಮಂಗೇಭ್ಯಃ ಪರ್ಯಾಚರಂತಮ್। ಸುವರ್ಗಂ ಯಾಹಿ ಪಥಿಭಿರ್ದೇವಯಾನ್ಯೈರೋಷಧೀಷು ಪ್ರತಿತಿಷ್ಠಾ ಶರೀರೈಃ॥

---

ಪ್ರಜಾನಂತ ಇತಿ ಪ್ರ-ಜಾನಂತಃ। ಪ್ರತೀತಿ। ಗೃಹ್ಣಂತಿ। ಪೂರ್ವೇ। ಪ್ರಾಣಮಿತಿ ಪ್ರ-ಅನಮ್। ಅಂಗೇಭ್ಯಃ। ಪರೀತಿ। ಆಚರಂತಮಿತ್ಯಾ-ಚರಂತಮ್॥ ಸುವರ್ಗಮಿತಿ ಸುವಃ-ಗಮ್। ಯಾಹಿ। ಪಥಿಭಿರಿತಿ ಪಥಿ-ಭಿಃ। ದೇವಯಾನ್ಯೈರಿತಿ ದೇವ-ಯಾನ್ಯೈಃ। ಓಷಧೀಷು। ಪ್ರತೀತಿ। ತಿಷ್ಠ। ಶರೀರೈಃ॥

---

| ಮಂತ್ರ | ವಿನಿಯೋಗ |
| --- | --- |
| ಪ್ರಜಾನಂತಃ...ಶರೀರೈಃ॥ | ಆಜ್ಯಹೋಮದ ಮೊದಲ ಮಂತ್ರ. |

---

✦[ಎಲೈ ಪಶುವೇ!]**ಪೂರ್ವೇ**=ಹಿಂದಿನವರಾದ ದೇವತೆಗಳು; **ಪ್ರಜಾನಂತಃ**=ನಿನ್ನ ವಿಷಯಗಳನ್ನು ಚೆನ್ನಾಗಿ ತಿಳಿದವರಾಗಿ; **ಅಂಗೇಭ್ಯಃ ಪರ್ಯಾಚರಂತಮ್**=ಅವಯವಗಳ ಮೇಲ್ಭಾಗದಲ್ಲಿ ಸುತ್ತಲೂ ಸಂಚರಿಸುವ; **ಪ್ರಾಣಮ್**=ಪ್ರಾಣವನ್ನು **ಪ್ರತಿಗೃಹ್ಣಂತಿ**=ತಮ್ಮದನ್ನಾಗಿ ಸ್ವೀಕರಿಸುತ್ತಾರೆ. **ದೇವಯಾನ್ಯೈಃ ಪಥಿಭಿಃ**=ನೀನು ದೇವತೆಗಳು ಸಂಚರಿಸುವ ಮಾರ್ಗಗಳಿಂದ; **ಸುವರ್ಗಮ್ ಯಾಹಿ**=ಸ್ವರ್ಗಲೋಕಕ್ಕೆ ಹೋಗು; **ಶರೀರೈಃ**=ನಿನ್ನ ಅವಯವಗಳಿಂದ; **ಓಷಧೀಷು ಪ್ರತಿತಿಷ್ಠ**=ಓಷಧಿರೂಪವಾಗಿ ಬೆಳೆದು ಹವಿಸ್ಸಾಗು/ಪುರೋಡಾಶಾದಿಗಳಂತೆ ದೇವತೆಗಳ ಹವಿಸ್ಸು ಆಗು.

---

ಹೇಳಿದೆ. ಅಂತಹ ಅಗ್ನಿದೇವನೇ! ನಿನಗಾಗಿ ಈ ಪಶುವನ್ನು ಯಾಗದ ಮಧ್ಯದಲ್ಲಿ ಕಟ್ಟುತ್ತೇನೆ. ಇದನ್ನು ನೀನು ಅನುಮತಿಸು. ನಿನ್ನ ಅನುಜ್ಞೆಯನ್ನು ಪಡೆದು ನಾವು ಒಳ್ಳೆಯ ಯಾಗವನ್ನು ಅನುಷ್ಠಾನ ಮಾಡೋಣ.

ಈ ಪಶುವು ದೇವತೆಗಳಿಗೆ ಪ್ರಿಯವಾದ ಹಪಿಸ್ಸಾಗಿ ಅವರಿಂದ ಸ್ವೀಕೃತವಾಗಲಿ.

**ಯೇಷಾಮೀಶೇ [..ಮೀಶೇ(೧೧)ಪಶು..] ಪಶುಪತಿಃ ಪಶೂನಾಂ ಚತುಷ್ಪದಾಮುತ ಚ ದ್ವಿಪದಾಮ್ । ನಿಷ್ಕ್ರೀತೋಽಯಂ ಯಜ್ಞಿಯಂ ಭಾಗಮೇತು ರಾಯಸ್ಪೋಷಾ ಯಜಮಾನಸ್ಯ ಸಂತು॥**

---

ಯೇಷಾಮ್ । ಈಶೇ ।(೧೧)। ಪಶುಪತಿರಿತಿ ಪಶು-ಪತಿಃ । ಪಶೂನಾಮ್ । ಚತುಷ್ಪದಾಮಿತಿ ಚತುಃ-ಪದಾಮ್ । ಉತ । ಚ । ದ್ವಿಪದಾಮಿತಿ ದ್ವಿ-ಪದಾಮ್ । ನಿಷ್ಕ್ರೀತ ಇತಿ ನಿಃ-ಕ್ರೀತಃ । ಅಯಮ್ । ಯಜ್ಞಿಯಮ್ । ಭಾಗಮ್। ಏತು । ರಾಯಃ। ಪೋಷಾಃ । ಯಜಮಾನಸ್ಯ । ಸಂತು ॥

---

| ಮಂತ್ರ | ವಿನಿಯೋಗ |
|---|---|
| ಯೇಷಾಮೀಶೇ...ಸಂತು ॥ | ಆಜ್ಯಹೋಮದ ಎರಡನೆಯ ಮಂತ್ರ |

---

✦**ಪಶುಪತಿಃ**=ಪಶುಗಳಿಗೆ ಒಡೆಯನಾದ ರುದ್ರನು; **ಯೇಷಾಮ್**=ಯಾವ; **ದ್ವಿಪದಾಮ್ ಉತ ಚ ಚತುಷ್ಪದಾಮ್**=ಎರಡು ಕಾಲಿನ ಮತ್ತು ನಾಲ್ಕು ಕಾಲುಗಳುಳ್ಳ; **ಪಶೂನಾಮ್**=ಪ್ರಾಣಿಗಳಿಗೆ; **ಈಶೇ**=ಅಧಿಪತಿಯಾಗಿರುತ್ತಾನೆಯೋ. [ಅವುಗಳಲ್ಲಿ] **ನಿಷ್ಕ್ರೀತಃ**=ಕೊಂಡುಕೊಂಡಿರುವ; **ಅಯಮ್**=ಈ ಪಶುವು, **ಯಜ್ಞಿಯಮ್ ಭಾಗಮ್ ಏತು**=ಯಜ್ಞದ ಹವಿರ್ಭಾಗವಾಗಿ ಪರಿಣಮಿಸಲಿ. **ಯಜಮಾನಸ್ಯ ರಾಯಃ ಪೋಷಾಃ ಸಂತು**=ಯಜಮಾನನಿಗೆ ಧನಸಂಪತ್ತಿಯುಂಟಾಗಲಿ.

---

ಎಲೈ ಪಶುವೇ! ಪ್ರಾಚೀನರಾದ ದೇವತೆಗಳು ನಿನ್ನ ವಿಷಯವನ್ನು ಚೆನ್ನಾಗಿ ತಿಳಿದಿರುತ್ತಾರೆ. ಅವರು ನಿನ್ನ ಅವಯವಗಳ ಮೇಲೆ ಸಂಚರಿಸುವ ಪ್ರಾಣವನ್ನು ಸ್ವೀಕರಿಸುತ್ತಾರೆ. ನೀನು ದೇವತೆಗಳ ಮಾರ್ಗದಿಂದಲೇ ಸ್ವರ್ಗಕ್ಕೆ ಹೋಗು. ನಿನ್ನ ಅವಯವಗಳಿಂದ ಪುರೋಡಾಶಾದಿಗಳಂತೆ ಹವಿಸ್ಸಾಗು. ದೇವತೆಗಳನ್ನು ತೃಪ್ತಿಪಡಿಸು.

**ಯೇ ಬಧ್ಯಮಾನಮನು ಬಧ್ಯಮಾನಾ ಅಭ್ಯೈಕ್ಷಂತ ಮನಸಾ ಚಕ್ಷುಷಾ ಚ। ಅಗ್ನಿಸ್ತಾಗ್ಂ ಅಗ್ರೇ ಪ್ರಮುಮೋಕ್ತು ದೇವಃ ಪ್ರಜಾಪತಿಃ ಪ್ರಜಯಾ ಸಂವಿದಾನಃ॥**

---

ಯೇ । ಬಧ್ಯಮಾನಮ್ । ಅನ್ವಿತಿ । ಬಧ್ಯಮಾನಾಃ । ಅಭ್ಯೈಕ್ಷಂತೇತ್ಯಭಿ-ಐಕ್ಷಂತ । ಮನಸಾ । ಚಕ್ಷುಷಾ । ಚ ॥ ಅಗ್ನಿಃ । ತಾನ್ । ಅಗ್ರೇ । ಪ್ರೇತಿ । ಮುಮೋಕ್ತು । ದೇವಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಯೇತಿ ಪ್ರ-ಜಯಾ । ಸಂವಿದಾನ ಇತಿ ಸಂ-ವಿದಾನಃ ॥

---

| ಮಂತ್ರ | ವಿನಿಯೋಗ |
|---|---|
| ಯೇ ಬಧ್ಯಮಾನಂ...ಸಂವಿದಾನಃ॥ | ಆಜ್ಯಹೋಮದ ಮೂರನೆಯ ಮಂತ್ರ |

---

✦**ಯೇ**=ಯಾವ [ಪಶುವಿನ] ಮಾತಾಪಿತ್ರಾದಿಗಳು; **ಬಧ್ಯಮಾನಮ್**=ಯಾಗಕ್ಕಾಗಿ ಕಟ್ಟಲ್ಪಟ್ಟಿರುವ ಈ ಪಶುವನ್ನು; **ಅನುಬಧ್ಯಮಾನಾಃ**=ಅನುಸರಿಸಿ, ಸ್ನೇಹಪಾಶದಿಂದ ಬದ್ಧವಾಗಿ; **ಮನಸಾ ಚಕ್ಷುಷಾ ಚ**=ಮನಸ್ಸಿನಿಂದಲೂ, ಕಣ್ಣಿನಿಂದಲೂ, **ಅಭ್ಯೈಕ್ಷಂತ**=ಎದುರಾಗಿ ನೋಡುತ್ತಿವೆಯೋ; **ತಾನ್**=ಆ ಪಶುಗಳನ್ನು; **ಅಗ್ನಿಃ ದೇವಃ**=ಅಗ್ನಿದೇವನು; **ಅಗ್ರೇ ಪ್ರಮುಮೋಕ್ತು**= ಮೊದಲು ಚೆನ್ನಾಗಿ ಬಿಟ್ಟು ಬಿಡಲಿ. **ಪ್ರಜಾಪತಿಃ**=ಸೃಷ್ಟಿಯನ್ನು ಮಾಡುವ ಪ್ರಜಾಪತಿದೇವನು; **ಪ್ರಜಯಾ**=ತನ್ನಿಂದ ಉತ್ಪನ್ನವಾದ ಪ್ರಾಣಿಗಳೊಡನೆ; **ಸಂವಿದಾನಃ** [ಭವತು]= ಐಕಮತ್ಯವನ್ನು ಹೊಂದಿದವನಾಗಲಿ; ಪ್ರಮುಮೋಕ್ತು=ವಿಯೋಗದುಃಖದಿಂದ ದೂರ ಮಾಡಲಿ.

---

ರುದ್ರನು ಸ್ವಾಮಿಯಾಗಿರುವ ನಾಲ್ಕು ಕಾಲಿನ ಹಾಗೂ ಎರಡು ಕಾಲಿನ ಎಲ್ಲ ಪ್ರಾಣಿಗಳಲ್ಲಿ ಈ ಪಶುವು ನಮ್ಮಿಂದ ಕ್ರೀತವಾಗಿದೆ. ಇದು ಯಜ್ಞದ ಹವಿರ್ಭಾಗವಾಗಿ ದೇವತೆಗಳನ್ನು ತೃಪ್ತಿಪಡಿಸಲಿ. ಅವರ ಅನುಗ್ರಹದಿಂದ ಯಜಮಾನನಿಗೆ ಧನಸಮೃದ್ಧಿಯುಂಟಾಗಲಿ.

ಯ ಆರಣ್ಯಾಃ ಪಶವೋ ವಿಶ್ವರೂಪಾ ವಿರೂಪಾಸ್ಸಂತೋ ಬಹುಧೈಕರೂಪಾಃ। ವಾಯುಸ್ತಾಗ್ಂ ಅಗ್ರೇ ಪ್ರಮುಮೋಕ್ತು ದೇವಃ ಪ್ರಜಾಪತಿಃ ಪ್ರಜಯಾ ಸಂವಿದಾನಃ॥

---

ಯೇ। ಆರಣ್ಯಾಃ। ಪಶವಃ। ವಿಶ್ವರೂಪಾ ಇತಿ ವಿಶ್ವ-ರೂಪಾಃ। ವಿರೂಪಾ ಇತಿ ವಿ-ರೂಪಾಃ। ಸಂತಃ। ಬಹುಧೇತಿ ಬಹು-ಧಾ। ಏಕರೂಪಾ ಇತ್ಯೇಕ-ರೂಪಾಃ॥ ವಾಯುಃ। ತಾನ್। ಅಗ್ರೇ। ಪ್ರೇತಿ। ಮುಮೋಕ್ತು। ದೇವಃ। ಪ್ರಜಾಪತಿರಿತಿ ಪ್ರಜಾ-ಪತಿಃ। ಪ್ರಜಯೇತಿ ಪ್ರ-ಜಯಾ। ಸಂವಿದಾನ ಇತಿ ಸಂ-ವಿದಾನಃ॥

---

| ಮಂತ್ರ | ವಿನಿಯೋಗ |
|---|---|
| ಯ ಆರಣ್ಯಾಃ...ಸಂವಿದಾನಃ॥ | ಆಜ್ಯಹೋಮದ ನಾಲ್ಕನೆಯ ಮಂತ್ರ |

---

✦**ಯೇ**=ಯಾವ; **ಆರಣ್ಯಾಃ ಪಶವಃ**=ಕಾಡಿನ ಪ್ರಾಣಿಗಳು; **ವಿಶ್ವರೂಪಾಃ**=[ಹಲವು ಜಾತಿಗಳಾಗಿ] ಸಮಸ್ತರೂಪವನ್ನು ಹೊಂದಿವೆಯೋ; **ವಿರೂಪಾಃ ಸಂತಃ ಬಹುಧಾ**= ಉಚ್ಚ-ನೀಚಾದಿಭೇದಗಳಿಂದ ವಿವಿಧರೂಪಗಳಾಗಿದ್ದೂ; **ಏಕರೂಪಾಃ**=ಪಶುತ್ವ ಜಾತಿಯಿಂದ ಒಂದೇ ರೂಪವಾಗಿವೆಯೋ; **ತಾನ್**=ಆ ಕಾಡಿನ ಪ್ರಾಣಿಗಳನ್ನು; **ವಾಯುಃ ದೇವಃ**=ಕಾಡಿನ ಪ್ರಾಣಿಗಳಿಗೆ ಅಧಿಪತಿಯಾದ ವಾಯುದೇವನು; **ಅಗ್ರೇ**= ಮೊದಲು; **ಪ್ರಮುಮೋಕ್ತು**=ಈ ಪಶುಯಾಗದಿಂದ ಬಿಡಿಸಲಿ; **ಪ್ರಜಾಪತಿಃ**= ಪ್ರಜಾಪತಿಯು; **ಪ್ರಜಯಾ ಸಂವಿದಾನಃ** [ಭವತು]=ತಾನು ಸೃಷ್ಟಿಸಿರುವ ಪ್ರಾಣಿಗಳೊಡನೆ ಐಕಮತ್ಯವನ್ನು ಹೊಂದಲಿ.

---

ಯಾಗಕ್ಕಾಗಿ ಈ ಪಶುವು ಬಂಧಿಸಲ್ಪಟ್ಟಿದೆ. ಇದರ ಮಾತಾಪಿತ್ರಾದಿಗಳು ಬಂಧು ಸ್ನೇಹದಿಂದ ಬದ್ಧವಾಗಿ ಮನಸ್ಸಿನಿಂದಲೂ, ಕಣ್ಣಿನಿಂದಲೂ ಇದನ್ನೇ ನೋಡುತ್ತಿವೆ. ಅಗ್ನಿದೇವನು ಮೊದಲು ಆ ಪ್ರಾಣಿಗಳ ದುಃಖವನ್ನು ದೂರ ಮಾಡಲಿ.

ಪ್ರಮುಂಚಮಾನಾ [..ಮಾನಾಃ(೧೨)] ಭುವನಸ್ಯ ರೇತೋ ಗಾತುಂ ಧತ್ತ ಯಜಮಾನಾಯ ದೇವಾಃ । ಉಪಾಕೃತಗ್‌ಂ ಶಶಮಾನಂ ಯದಸ್ಥಾಜ್ಜೀವಂ ದೇವಾನಾಮಪ್ಯೇತು ಪಾಥಃ ॥

---

ಪ್ರಮುಂಚಮಾನಾ ಇತಿ ಪ್ರ-ಮುಂಚಮಾನಾಃ।(೧೨)।ಭುವನಸ್ಯ । ರೇತಃ । ಗಾತುಮ್। ಧತ್ತ । ಯಜಮಾನಾಯ । ದೇವಾಃ ॥ ಉಪಾಕೃತಮಿತ್ಯುಪ-ಆಕೃತಮ್ । ಶಶಮಾನಮ್ । ಯತ್ । ಅಸ್ಥಾತ್ । ಜೀವಮ್ । ದೇವಾನಾಮ್ । ಅಪೀತಿ । ಏತು । ಪಾಥಃ ॥

---

| ಮಂತ್ರ | ವಿನಿಯೋಗ |
|---|---|
| ಪ್ರಮುಂಚಮಾನಾಃ...ಪಾಥಃ ॥ | ಆಜ್ಯಹೋಮದ ಐದನೆಯ ಮಂತ್ರ |

---

✦**ದೇವಾಃ**=ಎಲೈ ದೇವತೆಗಳೇ! **ಭುವನಸ್ಯ ರೇತಃ**=[ದೇವತೆಗಳನ್ನು ತೃಪ್ತಿಪಡಿಸಿ ಆ ಮೂಲಕ] ವಿಶ್ವದ ಉತ್ಪತ್ತಿಗೆ ಕಾರಣವಾದ ಈ ಪಶುವನ್ನು; **ಪ್ರಮುಂಚಮಾನಾಃ**= ಮಾತಾಪಿತ್ರಾದಿಗಳಿಂದ ಬಿಡಿಸಿದವರಾಗಿ; **ಯಜಮಾನಾಯ** =ಯಜಮಾನನಿಗೆ; **ಗಾತುಮ್ ಧತ್ತ**=ಸ್ವರ್ಗಗಮನವನ್ನು ಕೊಡಿರಿ; **ಯತ್**=ಯಾವ ಪಶುವಿನ ಅವಯವವು; **ಉಪಾಕೃತಮ್**=[ದೇವತೆಗಳಿಗೆ] ಉಪಾಕರಣದಿಂದ ನಿರ್ದಿಷ್ಟವಾಗಿ; **ಶಶಮಾನಮ್**= ದೇವತೆಗಳಿಗೆ ಪ್ರಾಪ್ತವಾಗುವುದಾಗಿ; **ಅಸ್ಥಾತ್**=ಇದೆಯೋ; **ಯತ್**=ಯಾವುದು; **ದೇವಾನಾಮ್ ಜೀವಮ್**=ದೇವತೆಗಳ ಅನ್ನರೂಪವಾಗಿ ಜೀವನಹೇತುವಾಗಿದೆಯೋ; [ಅದು] [ದೇವತೆಗಳಿಗೆ;] **ಪಾಥಃ ಅಪಿ ಏತು**=ಅನ್ನವೂ ಆಗಲಿ. ಯಜಮಾನನ ಸ್ವರ್ಗಪ್ರಾಪ್ತಿಗೆ ಕಾರಣವೂ ಆಗಲಿ.

---

ಉತ್ಪಾದಕನಾದ ಪ್ರಜಾಪತಿಯೂ ಆ ಪ್ರಾಣಿಗಳೊಡನೆ ಐಕಮತ್ಯವನ್ನು ಹೊಂದಲಿ. ಅವುಗಳ ದುಃಖವನ್ನು ಹೋಗಲಾಡಿಸಲಿ.

ಕಾಡಿನ ಪ್ರಾಣಿಗಳು ಜಾತಿಭೇದದಿಂದ ಹಲವಾಗಿವೆ. ಉಚ್ಚನೀಚಭೇದದಿಂದ, ಆಕಾರಭೇದದಿಂದ ಬಗೆಬಗೆಯಾಗಿವೆ. ಕಾಡಿನ ಪ್ರಾಣಿಗಳ ಒಡೆಯನಾದ ವಾಯುವು

ನಾನಾ ಪ್ರಾಣೋ ಯಜಮಾನಸ್ಯ ಪಶುನಾ ಯಜ್ಞೋ ದೇವೇಭಿಸ್ಸಹ ದೇವಯಾನಃ । ಜೀವಂ ದೇವಾನಾಮಪ್ಯೇತು ಪಾಥಸ್ಸತ್ಯಾಸ್ಸಂತು ಯಜಮಾನಸ್ಯ ಕಾಮಾಃ ॥

---

ನಾನಾ । ಪ್ರಾಣ ಇತಿ ಪ್ರ–ಅನಃ । ಯಜಮಾನಸ್ಯ । ಪಶುನಾ । ಯಜ್ಞಃ । ದೇವೇಭಿಃ । ಸಹ । ದೇವಯಾನ ಇತಿ ದೇವ–ಯಾನಃ ॥ ಜೀವಮ್ । ದೇವಾನಾಮ್ । ಅಪೀತಿ । ಏತು । ಪಾಥಃ । ಸತ್ಯಾಃ । ಸಂತು । ಯಜಮಾನಸ್ಯ । ಕಾಮಾಃ ॥

---

| ಮಂತ್ರ | ವಿನಿಯೋಗ |
|---|---|
| ನಾನಾ ಪ್ರಾಣೋ...ಕಾಮಾಃ ॥ | ಅಧ್ವರ್ಯುವು ಜಪಿಸಲು |

---

✦ಯಜಮಾನಸ್ಯ ಪ್ರಾಣಃ=ಯಜಮಾನನ ಪ್ರಾಣವು; ಪಶುನಾ[ಸಹ]=ಪಶುವಿನೊಡನೆ; ನಾನಾ=ಬೇರೆಯಾಗಿ; [ಭವತು=ಆಗಲಿ]; ಯಜ್ಞಃ=ಈ ಯಜ್ಞವು; ದೇವೇಭಿಃ ಸಹ=ಪ್ರಕಾಶಮಾನವಾದ ಪಶುವಿನ ಪ್ರಾಣಗಳೊಡನೆ; ದೇವಯಾನಃ [ಭವತು]=ಹವಿಸ್ಸನ್ನು ಭುಜಿಸುವ ದೇವತೆಗಳನ್ನು ಹೊಂದಲಿ; ಪಾಥಃ =ಪಶುರೂಪವಾದ ಅನ್ನವು; ದೇವಾನಾಮ್ ಜೀವಮ್ ಅಪಿ ಏತು=ದೇವತೆಗಳ ಜೀವನಸಾಧನವಾಗಲಿ; ಯಜಮಾನಸ್ಯ=ಯಜಮಾನನ; ಕಾಮಾಃ ಸತ್ಯಾಃ ಸಂತು=ಕಾಮನೆಗಳು ಸಂಪೂರ್ಣವಾಗಿ ಕೈಗೂಡಲಿ.

---

ಅವುಗಳಿಗೆ ಪ್ರಾಣಭಯವಿಲ್ಲದಂತೆ ಬಿಡಿಸಲಿ. ಪ್ರಜಾಪತಿದೇವನು ಆ ಪ್ರಾಣಿಗಳೊಡನೆ ಸಂತೋಷವಾಗಿರಲಿ. ಅವುಗಳಿಗೆ ದುಃಖವುಂಟಾಗದಿರುವಂತೆ ಮಾಡಲಿ.

'ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ' [ಅಗ್ನಿಯಲ್ಲಿ ವಿಧಿವತ್ತಾಗಿ ಅರ್ಪಿಸಿರುವ ಹವಿಸ್ಸು ರಸಗ್ರಾಹಿಯಾದ ಆದಿತ್ಯನಿಗೆ ಸೇರಿ ಬಳಿಕ ವೃಷ್ಟಿಯಾಗಿ ಅದರಿಂದ ಅನ್ನವೂ, ಪ್ರಜೆಗಳೂ ಆಗುತ್ತಾರೆ][ಮನುಸ್ಮೃತಿ.3.76] ಎಂಬ ವಚನದಂತೆ

**ಯತ್ಪಶುರ್ಮಾಯುಮಕೃತೋರೋ ವಾ ಪದ್ಭಿರಾಹತೇ ।**

**ಅಗ್ನಿರ್ಮಾ ತಸ್ಮಾದೇನಸೋ ವಿಶ್ವಾನ್ಮುಂಚತ್ವಗ್ಂಹಸಃ ॥**

---

ಯತ್ । ಪಶುಃ । ಮಾಯುಮ್ । ಅಕೃತ । ಉರಃ । ವಾ । ಪದ್ಭಿರಿತಿ ಪತ್-ಭಿಃ । ಆಹತ ಇತ್ಯಾ-ಹತೇ ॥ ಅಗ್ನಿಃ । ಮಾ । ತಸ್ಮಾತ್ । ಏನಸಃ । ವಿಶ್ವಾತ್ । ಮುಂಚತು । ಅಗ್ಂಹಸಃ ॥

---

| ಮಂತ್ರ | ವಿನಿಯೋಗ |
|---|---|
| ಯತ್ಪಶುಃ...ಅಗ್ಂಹಸಃ ॥ | ಸಂಜ್ಞಪ್ತಹೋಮಕ್ಕಾಗಿ. |

---

✦**ಯತ್ ಪಶುಃ ಮಾಯುಮ್** ಅಕೃತ=ಪಶುವು ವಿಶಸನಕಾಲದಲ್ಲಿ ಕೂಗಿಕೊಂಡುದು ಯಾವುದುಂಟೋ; [ಯತ್] ಉರಃ ಪದ್ಭಿಃ ಆಹತೇ ವಾ=ಕಾಲುಗಳಿಂದ ಎದೆಯನ್ನು ಹೊಡೆದುಕೊಂಡುದು ಯಾವುದುಂಟೋ; **ತಸ್ಮಾತ್** ಏನಸಃ= ಅದರಿಂದ ಉಂಟಾದ ಪಾಪದಿಂದ; **ಅಗ್ನಿಃ**=ಅಗ್ನಿದೇವನು; **ಮಾ ಮುಂಚತು**= ನನ್ನನ್ನು ಬಿಡಿಸಲಿ; **ವಿಶ್ವಾತ್ ಅಗ್ಂಹಸಃ**=[ಪಶುವಿನ ಬಂಧನಾದಿಗಳಿಂದ ಉಂಟಾಗುವ] ಎಲ್ಲ ಪಾಪಗಳಿಂದಲೂ; **ಮುಂಚತು**=[ನನ್ನನ್ನು]ಬಿಡಿಸಲಿ.

---

ಯಾಗವು ಜಗತ್ತಿನ ಉತ್ಪತ್ತಿಗೆ ಕಾರಣವಾಗಿದೆ. ದೇವತೆಗಳೇ! ಇಂತಹ ಯಾಗಸಾಧನವಾದ ಪಶುವನ್ನು ಬಂಧುಗಳಿಂದ ಬೇರ್ಪಡಿಸಿ, ಯಜಮಾನನಿಗೆ ಸ್ವರ್ಗಪ್ರಾಪ್ತಿಯಾಗುವಂತೆ ಮಾಡಿರಿ. ಮಂತ್ರದಿಂದ ಉಪಾಕರಣ ಮಾಡಿರುವ ಈ ಪಶುವಿನ ಅಂಗಗಳು ದೇವತೆಗಳಿಗೆ ಹವಿಸ್ಸಾಗಲಿ. ದೇವತೆಗಳ ಅನುಗ್ರಹದಿಂದ ಯಜಮಾನನಿಗೆ ಸ್ವರ್ಗಪ್ರಾಪ್ತಿಯೂ ಆಗಲಿ.

ಯಜಮಾನನ ಪ್ರಾಣವು ಪಶುವಿನ ಪ್ರಾಣದಿಂದ ಬೇರೆಯಾಗಿರಲಿ. ಯಜ್ಞವು ಪಶುವಿನ ಪ್ರಾಣಗಳೊಡನೆ ದೇವತೆಗಳಿಂದ ಸ್ವೀಕೃತವಾಗಲಿ. ಪಶುರೂಪವಾದ ಅನ್ನವು ದೇವತೆಗಳಿಗೆ ಲಭಿಸಲಿ. ಯಜಮಾನನ ಕಾಮನೆಗಳು ಪೂರ್ಣವಾಗಲಿ.

**ಶಮಿತಾರ ಉಪೇತನ ಯಜ್ಞಮ್[(೧೩)] ದೇವೇಭಿರನ್ವಿತಮ್ । ಪಾಶಾತ್ಪಶುಂ ಪ್ರಮುಂಚತ ಬಂಧಾದ್ಯಜ್ಞಪತಿಂ ಪರಿ ॥**

---

ಶಮಿತಾರಃ । ಉಪೇತನೇತ್ಯುಪ-ಏತನ । ಯಜ್ಞಮ್ ।(೧೩)। ದೇವೇಭಿಃ । ಇನ್ವಿತಮ್ ॥ ಪಾಶಾತ್ । ಪಶುಮ್ । ಪ್ರೇತಿ । ಮುಂಚತ । ಬಂಧಾತ್ । ಯಜ್ಞಪತಿಮಿತಿ ಯಜ್ಞ-ಪತಿಮ್ । ಪರಿ ॥

---

| ಮಂತ್ರ | ವಿನಿಯೋಗ |
|---|---|
| ಶಮಿತಾರಃ...ಪರಿ ॥ | ಅಧ್ವರ್ಯು ಮತ್ತು ಯಜಮಾನರು ವಪಾಶ್ರಪಣಿಗಳಿಂದ ಪಶುವನ್ನು ಮುಟ್ಟಲು |

---

✦**ಶಮಿತಾರಃ**=ಪಶುವಿಶಸನವನ್ನು ಮಾಡುವ ದೇವತೆಗಳೇ! **ದೇವೇಭಿಃ ಇನ್ವಿತಮ್**= ದೇವತೆಗಳಿಂದ ವ್ಯಾಪ್ತವಾದ; **ಯಜ್ಞಮ್ ಉಪೇತನ**=ಯಾಗವನ್ನು ನಡೆಯುವಂತೆ ಮಾಡಿರಿ; **ಪಾಶಾತ್**=ಕಟ್ಟಿರುವ ಹಗ್ಗದಿಂದ; **ಪಶುಮ್**=ಪಶುವನ್ನು; **ಪ್ರಮುಂಚತ**=ಬಿಡಿಸಿರಿ; **ಬಂಧಾತ್**=ಬಂಧನದೋಷದಿಂದ; **ಯಜ್ಞಪತಿಮ್**= ಯಜಮಾನನನ್ನು; **ಪರಿ ಮುಂಚತ**=ಬಿಡಿಸಿರಿ.

---

ಯಜ್ಞಕ್ಕಾಗಿ ಪಶುವನ್ನು ವಿಶಸನ ಮಾಡಿದಾಗ ಮರಣಕಾಲದಲ್ಲಿ ಪಶುವು ಕೂಗಿಕೊಳ್ಳಬಹುದು. ಕಾಲುಗಳಿಂದ ಎದೆಯನ್ನು ಬಡಿದುಕೊಳ್ಳಬಹುದು. ಹೇ ಅಗ್ನಿದೇವನೇ! ಇದರಿಂದ ಸಂಭವಿಸುವ ಪಾಪದಿಂದ ನನ್ನನ್ನು ಬಿಡಿಸು. ಪಶುಬಂಧನಾದಿಗಳಿಂದ ಉಂಟಾಗುವ ನನ್ನ ಎಲ್ಲ ಪಾಪಗಳನ್ನೂ ನೀನು ಪರಿಹರಿಸು.

ಪಶುವಿಶಸನವನ್ನು ಮಾಡುವ ದೇವತೆಗಳೇ! ದೇವತೆಗಳಿಂದ ವ್ಯಾಪ್ತವಾದ ಈ ಯಾಗವು ಚೆನ್ನಾಗಿ ನಡೆಯುವಂತೆ ಮಾಡಿರಿ. ಪಶುವನ್ನು ಬಂಧನದಿಂದ ಬಿಡಿಸಿರಿ. ಯಜಮಾನನನ್ನು ಬಂಧನದೋಷದಿಂದ ಮುಕ್ತನನ್ನಾಗಿ ಮಾಡಿರಿ.

# ಅದಿತಿಃ ಪಾಶಂ ಪ್ರಮುಮೋಕ್ತ್ವೇತಂ ನಮಃ ಪಶುಭ್ಯಃ ಪಶುಪತಯೇ ಕರೋಮಿ । ಅರಾತೀಯಂತಮಧರಂ ಕೃಣೋಮಿ ಯಂ ದ್ವಿಷ್ಮಸ್ತಸ್ಮಿನ್ಪ್ರತಿಮುಂಚಾಮಿ ಪಾಶಮ್ ॥

---

ಅದಿತಿಃ । ಪಾಶಮ್ । ಪ್ರೇತಿ । ಮುಮೋಕ್ತು । ಏತಮ್ । ನಮಃ । ಪಶುಭ್ಯ ಇತಿ ಪಶು-ಭ್ಯಃ । ಪಶುಪತಯ ಇತಿ ಪಶು-ಪತಯೇ । ಕರೋಮಿ ॥ ಅರಾತೀಯಂತಮ್ । ಅಧರಮ್ । ಕೃಣೋಮಿ । ಯಮ್ । ದ್ವಿಷ್ಮಃ । ತಸ್ಮಿನ್ನ್ । ಪ್ರತೀತಿ । ಮುಂಚಾಮಿ । ಪಾಶಮ್ ॥

---

| ಮಂತ್ರ | ವಿನಿಯೋಗ |
|---|---|
| **ಅದಿತಿಃ...ಕರೋಮಿ ॥** | ಹಗ್ಗದಿಂದ ಪಶುವನ್ನು ಬಿಡಿಸಲು |
| **ಅರಾತೀಯಂತಮ್...ಪಾಶಮ್ ॥** | ಆಭಿಚಾರಿಕವಾದ ಪ್ರಯೋಗವಿಧಿ |

---

✦**ಅದಿತಿಃ**=ಈ ಭೂದೇವತೆಯು; **ಏತಮ್ ಪಾಶಮ್**=ಈ ಹಗ್ಗವನ್ನು; **ಪ್ರಮುಮೋಕ್ತು**=ಬಿಚ್ಚಿ ಹಾಕಲಿ; [ನಾನು ಪಶುವಧದೋಷನಿವೃತ್ತಿಗಾಗಿ] **ಪಶುಭ್ಯಃ**=ಪಶುಗಳಿಗೂ; **ಪಶುಪತಯೇ**=ಪಶುಪತಿಯಾದ ರುದ್ರನಿಗೂ; **ನಮಃ ಕರೋಮಿ**=ನಮಸ್ಕರಿಸುತ್ತೇನೆ.

✦**ಅರಾತೀಯಂತಮ್**=ನಮ್ಮನ್ನು ದ್ವೇಷಿಸುವವನನ್ನು; **ಅಧರಮ್ ಕೃಣೋಮಿ**=ನಮ್ಮಿಂದ ಕೀಳಾದವನನ್ನಾಗಿ ಮಾಡುತ್ತೇನೆ; **ಯಮ್ ದ್ವಿಷ್ಮಃ**=ಯಾವನನ್ನು ನಾನು [ಮುಂದೆ ಶತ್ರುವಾಗಬಹುದೆಂದು] ದ್ವೇಷಿಸುತ್ತೇವೆಯೋ; **ತಸ್ಮಿನ್**=ಅವನಲ್ಲಿ; **ಪಾಶಮ್**=ಈ ಹಗ್ಗವನ್ನು; **ಪ್ರತಿಮುಂಚಾಮಿ**=ಕಟ್ಟುತ್ತೇನೆ.

---

ಭೂದೇವಿಯು ಈ ಪಶುವಿನ ಹಗ್ಗದ ಕಟ್ಟನ್ನು ಬಿಚ್ಚಿ ಹಾಕಲಿ. ನಾನು ಪಶುಹಿಂಸೆ

ತ್ವಾಮುತೇ ದಧಿರೇ ಹವ್ಯವಾಹಗ್‌ಂ ಶೃತಂಕರ್ತಾರಮುತ ಯಜ್ಞಿಯಂ ಚ । ಅಗ್ನೇ ಸದಕ್ಷಸ್ಸತನುರ್ ಹಿ ಭೂತ್ವಾಽಥ ಹವ್ಯಾ ಜಾತವೇದೋ ಜುಷಸ್ವ ॥

ತ್ವಾಮ್ । ಉ । ತೇ । ದಧಿರೇ । ಹವ್ಯವಾಹಮಿತಿ ಹವ್ಯ-ವಾಹಮ್ । ಶೃತಂಕರ್ತಾರಮಿತಿ ಶೃತಂ-ಕರ್ತಾರಮ್ । ಉತ । ಯಜ್ಞಿಯಮ್ । ಚ ॥ ಅಗ್ನೇ । ಸದಕ್ಷ ಇತಿ ಸ-ದಕ್ಷಃ । ಸತನುರಿತಿ ಸ-ತನುಃ । ಹಿ । ಭೂತ್ವಾ । ಅಥ । ಹವ್ಯಾ । ಜಾತವೇದ ಇತಿ ಜಾತ-ವೇದಃ । ಜುಷಸ್ವ ॥

| ಮಂತ್ರ | ವಿನಿಯೋಗ |
|---|---|
| ತ್ವಾಮುತೇ...ಜುಷಸ್ವ ॥ | ವಪೆಯ ಮೇಲ್ಭಾಗದಲ್ಲಿ ಹೋಮವನ್ನು ಮಾಡಲು |

✦**ಜಾತವೇದಃ ಅಗ್ನೇ**=ಉತ್ಪನ್ನವಾದ ಎಲ್ಲಾ ವಸ್ತುಗಳ ವಿಷಯವನ್ನು ತಿಳಿದಿರುವ ಅಗ್ನಿದೇವನೇ! **ತೇ**=ಆ ದೇವತೆಗಳು; **ತ್ವಾಮ್ ಉ**=ನಿನ್ನನ್ನೇ; **ಹವ್ಯವಾಹಮ್**=ದೇವತೆಗಳಿಗೆ ಹವ್ಯವನ್ನು ಒಯ್ಯುವವನನ್ನಾಗಿಯೂ; **ಶೃತಂಕರ್ತಾರಮ್**=ಹವಿಸ್ಸುಗಳನ್ನು ಪಕ್ವ ಮಾಡುವವನನ್ನಾಗಿಯೂ; **ಉತ**=ಮತ್ತು; **ಯಜ್ಞಿಯಮ್ ಚ**=ಯಜ್ಞಸಂಪಾದಕನನ್ನಾಗಿಯೂ; **ದಧಿರೇ**=ಮಾಡಿಕೊಂಡರು; [ಅಗ್ನಿಯೇ! ನೀನು] **ಸತನುಃ**=ದೃಢವಾದ ಶರೀರವುಳ್ಳವನೂ; **ಸದಕ್ಷಃ ಹಿ**=ಉತ್ಸಾಹವುಳ್ಳವನೂ; **ಭೂತ್ವಾ**=ಆಗಿ ಇರುವೆಯೋ; **ಅಥ**=ಆ ಕಾರಣದಿಂದ; **ಹವ್ಯಾ ಜುಷಸ್ವ**=ಹವಿಸ್ಸುಗಳನ್ನು ಒಯ್ಯಲು ಪ್ರೀತಿಯುಕ್ತನಾಗು.

ಯಿಂದುಂಟಾದ ಪಾಪದ ನಿವೃತ್ತಿಗಾಗಿ ಪಶುಗಳಿಗೂ, ಪಶುಪತಿಯಾದ ರುದ್ರನಿಗೂ ನಮಸ್ಕರಿಸುತ್ತೇನೆ.

'ಅರಾತೀಯಂತಮ್' ಎಂಬ ಈ ಮಂತ್ರವನ್ನು ಹೇಳಿ ಪಶುಬಂಧನರಜ್ಜುವಿನಿಂದ ಮರವನ್ನೋ, ಮೋಟುಮರವನ್ನೋ, ಕಂಬವನ್ನೋ ಕಟ್ಟಬೇಕು. ಹೀಗೆ ಕಟ್ಟುವುದರಿಂದ

**ಜಾತವೇದೋ ವಪಯಾ ಗಚ್ಛ ದೇವಾನ್ತ್ವಗ್ಂ ಹಿ ಹೋತಾ ಪ್ರಥಮೋ ಬಭೂಥ। ಘೃತೇನ ತ್ವಂ ತನುವೋ ವರ್ಧಯಸ್ವ ಸ್ವಾಹಾಕೃತಗ್ಂ ಹವಿರದಂತು ದೇವಾಃ॥**

---

ಜಾತವೇದ ಇತಿ ಜಾತ-ವೇದಃ। ವಪಯಾ। ಗಚ್ಛ। ದೇವಾನ್। ತ್ವಮ್। ಹಿ। ಹೋತಾ। ಪ್ರಥಮಃ। ಬಭೂಥ॥ ಘೃತೇನ। ತ್ವಮ್। ತನುವಃ। ವರ್ಧಯಸ್ವ। ಸ್ವಾಹಾಕೃತಮಿತಿ ಸ್ವಾಹಾ-ಕೃತಮ್। ಹವಿಃ। ಅದಂತು। ದೇವಾಃ॥

---

| ಮಂತ್ರ | ವಿನಿಯೋಗ |
| --- | --- |
| **ಜಾತವೇದೋ...ದೇವಾಃ॥** | ವೌಷಟ್‌ಪೂರ್ವಕವಾಗಿ ವಪಾ ಹೋಮವನ್ನು ಮಾಡಲು |

---

✦**ಜಾತವೇದಃ**=ಜಾತವೇದನಾದ ಅಗ್ನಿದೇವನೇ![ನೀನು] **ದೇವಾನ್ ವಪಯಾ ಗಚ್ಛ**=ವಪೆಯೊಡನೆ ದೇವತೆಗಳನ್ನು ಹೊಂದು; **ತ್ವಮ್ ಹಿ**=ನೀನು ತಾನೇ; **ಪ್ರಥಮಃ ಹೋತಾ ಬಭೂಥ**=ಮನುಷ್ಯರಾದ ಹೋತೃಗಳಿಗಿಂತಲೂ ಮೊದಲನೆಯವನಾದ ದೇವಹೋತೃವಾಗಿರುವವನು. **ತ್ವಮ್**=ನೀನು; **ಘೃತೇನ**=ತುಪ್ಪದಿಂದ; **ತನುವಃ ವರ್ಧಯಸ್ವ**=[ದೇವತೆಗಳ]ಶರೀರಗಳನ್ನು ವೃದ್ಧಿಗೊಳಿಸು; **ಸ್ವಾಹಾಕೃತಮ್ ಹವಿಃ**=ಸ್ವಾಹಾಕೃತದಿಂದ ಸಮರ್ಪಿತವಾದ ಹವಿಸ್ಸನ್ನು; **ದೇವಾಃ ಅದಂತು**=ದೇವತೆಗಳು ಸ್ವೀಕರಿಸಿ ತೃಪ್ತರಾಗಲಿ/ಯಜಮಾನನ ಇಚ್ಛೆಗಳನ್ನು ಪೂರ್ಣಗೊಳಿಸಲಿ.

---

ಶತ್ರುವನ್ನು ನಮಗಿಂತ ಕೆಳಗಿನವನನ್ನಾಗಿ ಮಾಡಿದಂತಾಗುತ್ತದೆ.

ಅಗ್ನಿದೇವನೇ! ಜಾತವೇದನೇ! ನೀನು ಎಲ್ಲವನ್ನೂ ತಿಳಿದವನು. ಆದುದರಿಂದಲೇ ಯಜ್ಞವ್ಯಾಪಿಗಳಾದ ಆ ದೇವತೆಗಳು ನಿನ್ನನ್ನು ದೇವತೆಗಳಿಗೆ ಹವ್ಯವನ್ನು ಒಯ್ಯುವವನೆಂದೂ, ಹವಿಸ್ಸುಗಳನ್ನು ಪಕ್ವಗೊಳಿಸತಕ್ಕವನೆಂದೂ, ಯಜ್ಞನಿರ್ವಾಹಕನೆಂದೂ

# ಸ್ವಾಹಾ ದೇವೇಭ್ಯೋ ದೇವೇಭ್ಯಸ್ಸ್ವಾಹಾ ॥೧೪-4॥

[ಈಶೇ ಪ್ರಮುಂಚಮಾನಾ ಯಜ್ಞಂ ತ್ವಗ್ಂ ಷೋಡಶ ಚ ॥]

---

ಸ್ವಾಹಾ । ದೇವೇಭ್ಯಃ । ದೇವೇಭ್ಯಃ । ಸ್ವಾಹಾ ॥೧೪॥

---

| ಮಂತ್ರ | ವಿನಿಯೋಗ |
| --- | --- |
| ಸ್ವಾಹಾ....ಸ್ವಾಹಾ ॥ | ಪರಿವಪ್ಯಮಂತ್ರಗಳು |

---

✦ಸ್ವಾಹಾ ದೇವೇಭ್ಯಃ=[ವಪಾಹೋಮಕ್ಕೆ ಮೊದಲು] ಈ ಆಜ್ಯವು ದೇವತೆಗಳಿಗೆ ಹುತವಾಗಲಿ; ದೇವೇಭ್ಯಃ ಸ್ವಾಹಾ= [ವಪಾಹೋಮದ ಅನಂತರ] ಈ ಆಜ್ಯಹವಿಸ್ಸು ದೇವತೆಗಳಿಗೆ ಹುತವಾಗಲಿ.

---

ಅಂಗೀಕರಿಸುತ್ತಾರೆ. ನೀನು ದೃಢಶರೀರವುಳ್ಳವನಾಗಿ, ಅಮಿತೋತ್ಸಾಹವುಳ್ಳವನಾಗಿ ದೇವತೆಗಳಿಗೆ ಪ್ರೀತಿಯಿಂದ ಹವ್ಯಗಳನ್ನು ಒಯ್ದು ಕೊಡು. ಇದು ನಿನಗೆ ಚೆನ್ನಾಗಿ ಹುತವಾಗಲಿ.

ಜಾತವೇದನೇ! ಅಗ್ನಿಯೇ! ನೀನು ಮೊದಲನೆಯವನಾದ ದೇವಹೋತಾರನು. ನೀನು ವಪೆಯೊಡನೆ ದೇವತೆಗಳನ್ನು ಹೊಂದು. ಹವ್ಯಗಳಿಂದ ದೇವತೆಗಳ ಶರೀರಗಳನ್ನು ಪುಷ್ಟಿಗೊಳಿಸು. ಸ್ವಾಹಾಕಾರದಿಂದ ಸಮರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ದೇವತೆಗಳು ತೃಪ್ತರಾಗಲಿ. ಅವರ ಅನುಗ್ರಹದಿಂದ ಯಜಮಾನನ ಬಯಕೆಗಳು ಈಡೇರಲಿ.

ವಪಾಹೋಮಕ್ಕೆ ಮೊದಲು ಮತ್ತು ಬಳಿಕ ಈ ಆಜ್ಯಹವಿಸ್ಸು ದೇವತೆಗಳಿಗೆ ಹುತವಾಗಲಿ.

* * *

# ವಿನಿಯೋಗಸಂಗ್ರಹ

[1-2]ಪ್ರಜಾಪತೇರಿತಿ ದ್ವಾಭ್ಯಾಂ ಸ್ಯಾದುಪಾಕರಣಂ ಪಶೋಃ ।
[3-7]ಪ್ರಜಾ ಪಂಚ ಜುಹೋತ್ಯಗ್ನೌ ನಾನಾ[8] ತನ್ನಯನೇ ಜಪೇತ್ ॥
[9]ಯತ್ಪಶುರ್ಮ್ಯತಹೋಮೇ ಸ್ಯಾಚ್ಛಮಿತಾ[10] ಗಚ್ಛತಃ ಪಶುಮ್ ।
ಅಧ್ವರ್ಯುರ್ಯಜಮಾನೌ ದ್ವಾವದಿ[11] ಪಾಶಸ್ಯ ಮೋಚನಮ್ ॥
[12]ಅರಾ ವೃಕ್ಷಾದಿಷು ಕ್ಷೇಪಃ ತ್ವಾಂ[13] ಜುಹೋತಿ ವಪೋಪರಿ ।
[14]ಜಾ ವಪಾಹುತಿರೇತಸ್ಯಾಃ ಸ್ವಾಹಾ[15-16] ಇತ್ಯಭಿತೋ ಹುತಿಃ ॥
ಅನುವಾಕೇ ಚತುರ್ಥೇಽಸ್ಮಿನ್ಮಂತ್ರಾಃ ಷೋಡಶ ವರ್ಣಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–16**

---

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

### ೧) ಎರಡು ದೇವತೆಗಳಿರುವ ಪಶುಯಾಗದಲ್ಲಿ ಊಹವಿದೆಯೇ?

[ಜೈ.ಸೂ.9.3]

ಅಗ್ನೀಷೋಮೀಯಪಶುಪ್ರಕರಣದಲ್ಲಿ ಬೇರೆ ಬೇರೆ ಶಾಖೆಗಳಲ್ಲಿ 'ಅದಿತಿಃ ಪಾಶಮ್' ಎಂದೂ [ತೈ.ಸಂ.3.1.4] 'ಅದಿತಿಃ ಪಾಶಾನ್' ಎಂದೂ [ಮೈ.ಸಂ.1.2.15/ ಕಾ.ಸಂ.30.8] ಬೇರೆ ಬೇರೆ ವಚನಗಳ ಮಂತ್ರಗಳು ಪಠಿತವಾಗಿವೆ. ಹೀಗಿರುವಾಗ ಎರಡು ದೇವತೆಗಳಿರುವ ಪಶುಯಾಗದಲ್ಲಿ ಈ ಮಂತ್ರಗಳೆರಡಕ್ಕೂ ಊಹವಿದೆಯೇ? ಊಹ ಮಾಡಬೇಕೆ? ಇಲ್ಲವೇ? ಇದು ಇಲ್ಲಿನ ಸಂಶಯ.

ವಿಕೃತಿಯಾಗದಲ್ಲಿ ಅತಿದೇಶದಿಂದ ಮಂತ್ರವು ಪ್ರಾಪ್ತವಾಗುವುದರಿಂದ ಅವು ಪ್ರಕೃತಿಯಲ್ಲಿ ಪಠಿತವಾಗಿರುವಂತೆಯೇ ಬಳಸಲ್ಪಡಬೇಕು. ಇದು ಇಲ್ಲಿನ ಪೂರ್ವಪಕ್ಷ.

ಪ್ರಕೃತಿಯಲ್ಲಿ ಕರ್ಮಸಮವೇತಮಂತ್ರವಾಗಿರುವುದರಿಂದ ದ್ವಿವಚನಾಂತವಾಗಿ ಊಹವನ್ನು ಮಾಡಬೇಕು. ಇದು ಇಲ್ಲಿನ ಸಿದ್ಧಾಂತ.

## ೨) ಬಹುವಚನಾಂತವಾದ ಮಂತ್ರಕ್ಕೆ ಪ್ರಕರಣೋತ್ಕರ್ಷವಿದೆಯೇ ?

[ಜೈ.ಸೂ.9.3.7]

'ಅದಿತಿಃ ಪಾಶಮ್' 'ಅದಿತಿಃ ಪಾಶಾನ್' ಹೀಗೆ ಬೇರೆ ಬೇರೆ ವಚನದ ಮಂತ್ರಗಳು ಇರುವುದರಿಂದ ಬಹುವಚನಾಂತವಾದ ಮಂತ್ರವು ಪ್ರಕೃತಿಯಾಗದಲ್ಲಿ ಅನ್ವಯವನ್ನು ಪಡೆಯದ ಕಾರಣ, ಆ ಮಂತ್ರಕ್ಕೆ ಪ್ರಕರಣೋತ್ಕರ್ಷವನ್ನು ಮಾಡಿ ಬಹುಪಶುಗಳಿರುವ ಯಾಗದಲ್ಲಿ ನಿವೇಶ ಮಾಡಬೇಕು. ಏಕವಚನಾಂತಮಂತ್ರವನ್ನು ಪ್ರಕೃತಿಯಾಗದಲ್ಲಿ ಉಪದೇಶವಿರುವುದರಿಂದ ನಿವೇಶ ಮಾಡಬೇಕು. ವಿಕೃತಿಯಾಗದಲ್ಲಿ ಅತಿದೇಶದಿಂದ ನಿವೇಶ ಮಾಡಬೇಕು. ಹೀಗಾಗಿ ಬಹುವಚನಾಂತವಾದ ಮಂತ್ರಕ್ಕೆ ಪ್ರಕರಣೋತ್ಕರ್ಷವನ್ನು ಮಾಡ ಬೇಕು. ಇದು ಇಲ್ಲಿನ ಪೂರ್ವಪಕ್ಷ.

'ಪಾಶಾನ್' ಎಂಬಲ್ಲಿ ಪ್ರಾತಿಪದಿಕ, ವಿಭಕ್ತಿ, ವಚನಗಳು ಇವೆ. ಪ್ರಾತಿಪದಿಕ ಹಾಗೂ ವಿಭಕ್ತಿಗಳು ಧರ್ಮಿಯನ್ನೂ ಕಾರಕವನ್ನೂ ಬೋಧಿಸುವುದರಿಂದ ಮುಖ್ಯವಾದವುಗಳು. ಕಾರಕದ ಸಂಖ್ಯೆಯನ್ನು ತಿಳಿಸುವ ವಚನವು ಅಮುಖ್ಯವಾದುದು. ಅಮುಖ್ಯವಾದ ವಚನವನ್ನು ಅವಲಂಬಿಸಿ ಪ್ರಕರಣೋತ್ಕರ್ಷವು ಯುಕ್ತವಲ್ಲ. ಹೀಗಾಗಿ 'ಪಾಶಾನ್' ಎಂಬಲ್ಲಿರುವ ಬಹುವಚನವು ಪಾಶದ ಅವಯವಗಳ ಬಹುತ್ವವನ್ನು ಲಾಕ್ಷಣಿಕವಾಗಿ ತಿಳಿಸುತ್ತಿದೆ ಎಂಬ ಅರ್ಥವನ್ನು ಮಾಡಬೇಕಾಗಿರುವುದರಿಂದ ಈ ಮಂತ್ರವನ್ನು ಪ್ರಕೃತಿಯಲ್ಲೇ ನಿವೇಶ ಮಾಡಲು ಬಾಧಕವಿಲ್ಲ. ಹೀಗಾಗಿ ಎರಡು ಮಂತ್ರಗಳೂ ಸಮಬಲವಾಗಿ ವಿಕೃತಿಯಲ್ಲಿ ವಿಕಲ್ಪವಾಗಿ ಬಳಸಲ್ಪಡಬೇಕು. ಇದು ಇಲ್ಲಿನ ಸಿದ್ಧಾಂತ.

## ॥ ಪಂಚಮೋಽನುವಾಕಃ ॥

ಪ್ರಾಜಾಪತ್ಯಾ ವೈ ಪಶವಸ್ತೇಷಾಗ್‍ಂ ರುದ್ರೋಽಧಿಪತಿ

ರ್ಯದೇತಾಭ್ಯಾಮುಪಾಕರೋತಿ

---

ಪ್ರಾಜಾಪತ್ಯಾ ಇತಿ ಪ್ರಾಜಾ-ಪತ್ಯಾಃ । ವೈ । ಪಶವಃ । ತೇಷಾಮ್ । ರುದ್ರಃ । ಅಧಿಪತಿರಿತ್ಯಧಿ-ಪತಿಃ । ಯತ್ । ಏತಾಭ್ಯಾಮ್ । ಉಪಾಕರೋತೀತ್ಯುಪ-ಆಕರೋತಿ ।

---

ನಾಲ್ಕನೆಯ ಅನುವಾಕದಲ್ಲಿ ಪಶೂಪಾಕರಣಾದಿಮಂತ್ರಗಳು ಉಕ್ತವಾಗಿವೆ. ಈ ಐದನೆಯ ಅನುವಾಕದಲ್ಲಿ ಅವುಗಳ ಬ್ರಾಹ್ಮಣವು ಹೇಳಲ್ಪಡುತ್ತದೆ.

---

### ಪಶೂಪಾಕರಣವಿಧಿ; ಅದರ ಪ್ರಶಂಸೆ; ದ್ವಿತ್ವದ ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಪಶವಃ ಪ್ರಾಜಾಪತ್ಯಾಃ ವೈ ತೇಷಾಮ್ ರುದ್ರಃ ಅಧಿಪತಿಃ | ಪಶುಗಳು ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟಿವೆಯಷ್ಟೆ. ಅವುಗಳಿಗೆ ರುದ್ರಶಬ್ದವಾಚ್ಯನಾದ ಅಗ್ನಿಯು ಒಡೆಯನು. |
| ಯತ್ ಏತಾಭ್ಯಾಮ್ ಉಪಾಕರೋತಿ | [ 'ಪ್ರಜಾಪತೇಃ' 'ಇಮಂ ಪಶುಮ್' ಎಂಬ] ಈ ಎರಡು ಮಂತ್ರಗಳಿಂದ ಪಶೂಪಾಕರಣವನ್ನು ಮಾಡುವುದು ಯಾವುದುಂಟೋ [ಪಶೂಪಾಕರಣವನ್ನು ಮಾಡಬೇಕು. [ವಿಧಿ] [ಅದರಿಂದ] |

ತಾಭ್ಯಾಮೇವೈನಂ ಪ್ರತಿಪ್ರೋಚ್ಯಾಲಭತ ಆತ್ಮನೋಽನಾ

ವ್ರಸ್ಕಾಯ ದ್ವಾಭ್ಯಾಮುಪಾಕರೋತಿ ದ್ವಿಪಾದ್ಯಜಮಾನಃ

ಪ್ರತಿಷ್ಠಿತ್ಯಾ

---

ತಾಭ್ಯಾಮ್ । ಏವ । ಏನಮ್ । ಪ್ರತಿಪ್ರೋಚ್ಯೇತಿ ಪ್ರತಿ-ಪ್ರೋಚ್ಯ । ಏತಿ ।

ಲಭತೇ । ಆತ್ಮನಃ । ಅನಾವ್ರಸ್ಕಾಯೇತ್ಯನಾ-ವ್ರಸ್ಕಾಯ । ದ್ವಾಭ್ಯಾಮ್ ।

ಉಪಾಕರೋತೀತ್ಯುಪ-ಆಕರೋತಿ । ದ್ವಿಪಾದಿತಿ ದ್ವಿ-ಪಾತ್ । ಯಜಮಾನಃ ।

ಪ್ರತಿಷ್ಠಿತ್ಯಾ ಇತಿ ಪ್ರತಿ -ಸ್ಥಿತ್ಯೈ ।

---

| | |
|---|---|
| ತಾಭ್ಯಾಮ್ ಪ್ರತಿಪ್ರೋಚ್ಯ ಏವ ಏನಮ್ ಆಲಭತೇ | ಆ ಪ್ರಜಾಪತಿ-ಅಗ್ನಿಗಳಿಗೆ ತಿಳಿಸಿ/ಸ್ರಷ್ಟೃ-ಒಡೆಯರಿಂಗೆ ತಿಳಿಸಿ [ಅವರ ಅನುಜ್ಞೆಯಿಂದ] ಪಶುವನ್ನು ಆಲಂಭನ ಮಾಡಿದವನಾಗುತ್ತಾನೆ. |
| ಆತ್ಮನಃ ಅನಾವ್ರಸ್ಕಾಯ | ಇದು ತನ್ನ ಅಪರಾಧದೋಷಪರಿಹಾರಕ್ಕೆ ನಿಮಿತ್ತವಾಗುತ್ತದೆ. |
| ದ್ವಾಭ್ಯಾಮ್ ಉಪಾಕರೋತಿ | ಎರಡು ಮಂತ್ರಗಳಿಂದ ಉಪಾಕರಣವನ್ನು ಮಾಡುತ್ತಾನೆ. |
| ದ್ವಿಪಾತ್ ಯಜಮಾನಃ ಪ್ರತಿಷ್ಠಿತ್ಯೈ | ಇದರಿಂದ ಎರಡು ಕಾಲುಗಳುಳ್ಳ ಯಜಮಾನನು ಸ್ಥಿರನಾಗಿ ನಿಲ್ಲುವನು. |

---

ಪ್ರಜಾಪತಿ-ಅಗ್ನಿಗಳ ಅನುಮತಿಯನ್ನು ಪಡೆದು ಪಶುಯಾಗವನ್ನು ಮಾಡುವುದರಿಂದ ದೋಷವು ಸಂಭವಿಸುವುದಿಲ್ಲ.

ಉಪಾಕೃತ್ಯ ಪಂಚ ಜುಹೋತಿ ಪಾಙ್ಕ್ತಾಃ ಪಶವಃ
ಪಶೂನೇವಾವರುಂಧೇ ಮೃತ್ಯವೇ ವಾ ಏಷ ನೀಯತೇ
ಯತ್ಪಶುಸ್ತಂ ಯದನ್ವಾರಭೇತ

---

ಉಪಾಕೃತ್ಯೇತ್ಯುಪ-ಆಕೃತ್ಯ । ಪಂಚ । ಜುಹೋತಿ । ಪಾಙ್ಕ್ತಾಃ । ಪಶವಃ ।
ಪಶೂನ್ । ಏವ । ಅವೇತಿ । ರುಂಧೇ । ಮೃತ್ಯವೇ । ವೈ । ಏಷಃ । ನೀಯತೇ ।
ಯತ್ । ಪಶುಃ । ತಮ್ । ಯತ್ । ಅನ್ವಾರಭೇತೇತ್ಯನು-ಆರಭೇತ ।

---

## ಹೋಮಮಂತ್ರಗಳ ಸಂಖ್ಯಾಪ್ರಶಂಸೆ

| | |
|---|---|
| ಉಪಾಕೃತ್ಯ ಪಂಚ ಜುಹೋತಿ | ಪಶೂಪಾಕರಣವನ್ನು ಮಾಡಿದ ಮೇಲೆ 'ಪ್ರಜಾನಂತಃ' ಮುಂತಾದ ಐದು ಮಂತ್ರಗಳಿಂದ ಹೋಮವನ್ನು ಮಾಡಬೇಕು. |
| ಪಾಙ್ಕ್ತಾಃ ಪಶವಃ | ನಾಲ್ಕು ಕಾಲು ಮತ್ತು ಬಾಲ ಇವುಗಳಿಂದ ಪಶುಗಳು ಪಂಚಸಂಖ್ಯೆಯನ್ನು ಹೊಂದಿವೆ. |
| ಪಶೂನ್ ಏವ ಅವರುಂಧೇ | [ಪಂಚಸಂಖ್ಯೆಯಲ್ಲಿ ಹೋಮ ಮಾಡುವುದರಿಂದ] ಪಶುಸಂಪತ್ತಿಯನ್ನು ಹೊಂದುತ್ತಾನೆ. |

## 'ನಾನಾ ಪ್ರಾಣಃ...' ಎಂಬ ಮಂತ್ರದ ಜಪವಿಧಿ/ಪ್ರಶಂಸೆ

| | |
|---|---|
| ಯತ್ ಪಶುಃ | ಯಜ್ಞಪಶುವು ಯಾವುದಿದೆಯೋ |
| ಏಷಃ ವೈ ಮೃತ್ಯವೇ ನೀಯತೇ | ಇದು ಮರಣಕ್ಕಾಗಿಯೇ ಒಯ್ಯಲ್ಪಡುತ್ತಿದೆಯಷ್ಟೆ. |
| ತಮ್ ಯತ್ ಅನ್ವಾರಭೇತ | ಅದನ್ನು ಮುಟ್ಟಿ ಅನುಸರಿಸುವುದೆಂಬುದರಿಂದ |

ಪ್ರಮಾಯುಕೋ ಯಜಮಾನಃ ಸ್ಯಾನ್ನಾನಾ ಪ್ರಾಣೋ
ಯಜಮಾನಸ್ಯ ಪಶುನೇತ್ಯಾಹ ವ್ಯಾವೃತ್ತ್ಯೈ ೫೮

---

ಪ್ರಮಾಯುಕ ಇತಿ ಪ್ರ-ಮಾಯುಕಃ । ಯಜಮಾನಃ । ಸ್ಯಾತ್ । ನಾನಾ । ಪ್ರಾಣ ಇತಿ ಪ್ರ-ಅನಃ । ಯಜಮಾನಸ್ಯ । ಪಶುನಾ । ಇತಿ । ಆಹ । ವ್ಯಾವೃತ್ತ್ಯಾ ಇತಿ ವಿ-ಆವೃತ್ತ್ಯೈ ೫೮ ।

---

| | |
|---|---|
| ಯಜಮಾನಃ ಪ್ರಮಾಯುಕಃ ಸ್ಯಾತ್ | ಯಜಮಾನನು ಮರಣಶೀಲನಾಗುತ್ತಾನೆ. |
| ನಾನಾ ಪ್ರಾಣಃ ಯಜಮಾನಸ್ಯ ಪಶುನಾ ಇತಿ ಆಹ | ಇದನ್ನು ಪರಿಹರಿಸಲು ಅಧ್ವರ್ಯುವು 'ನಾನಾ ಪ್ರಾಣೋ ಯಜಮಾನಸ್ಯ ಪಶುನಾ' ಎಂಬ ಮಂತ್ರವನ್ನು ಜಪಿಸುತ್ತಾನೆ. |
| ವ್ಯಾವೃತ್ತ್ಯೈ ೫೮ | ಇದು ಯಜಮಾನನ ಪ್ರಾಣಕ್ಕೂ ಪಶುವಿನ ಪ್ರಾಣಕ್ಕೂ ಭೇದವನ್ನು ಉಂಟುಮಾಡುತ್ತದೆ. [ಯಜಮಾನನು ಮರಣಶೀಲನಾಗುವುದಿಲ್ಲ] |

---

ಎರಡು ಮಂತ್ರಗಳಿಂದ ಉಪಾಕರಣವನ್ನು ಮಾಡುವುದು ಯಜಮಾನನು ಸ್ಥಿರವಾಗಿ ನಿಲ್ಲುವುದಕ್ಕೆ ಕಾರಣವಾಗುತ್ತದೆ.

ಪಶೂಪಾಕರಣದ ಅನಂತರ ಐದು ಮಂತ್ರಗಳಿಂದ ಹೋಮವನ್ನು ಮಾಡಬೇಕು. ಈ ಸಂಖ್ಯೆಯನ್ನು ಶ್ರುತಿಯು ಪ್ರಶಂಸೆ ಮಾಡಿದೆ. ಇಂತಹ ಸಂಖ್ಯಾಪ್ರಶಂಸೆಯು ಅನೇಕ ಸ್ಥಳಗಳಲ್ಲಿ ಇದೆ.

ವಿಶಸನಕ್ಕಾಗಿ ಒಯ್ಯಲ್ಪಡುವ ಪಶುವು ಮರಣಕ್ಕಾಗಿಯೇ ಒಯ್ಯಲ್ಪಡುತ್ತದೆ. ಅದನ್ನು ಹಿಂಬಾಲಿಸುವ ಯಜಮಾನನೂ ಸಾಯುವವನೇ ಆಗುತ್ತಾನೆ. ಅಧ್ವರ್ಯುವು 'ನಾನಾ ಪ್ರಾಣಃ' ಎಂದರೆ ಪಶುವಿನ ಪ್ರಾಣವು ಬೇರೆ; ಯಜಮಾನನ ಪ್ರಾಣವು ಬೇರೆ ಎಂಬ

[ವ್ಯಾವೃತ್ತ್ಯೈ(೧೫)] ಯತ್ಪಶುರ್ಮಾಯುಮಕೃತೇತಿ ಜುಹೋತಿ ಶಾಂತ್ಯೈ ಶಮಿತಾರ ಉಪೇತನೇತ್ಯಾಹ ಯಥಾಯಜುರೇವೈತದ್ವ-

---

ಯತ್ । ಪಶುಃ । ಮಾಯುಮ್ । ಅಕೃತ । ಇತಿ । ಜುಹೋತಿ । ಶಾಂತ್ಯೈ । ಶಮಿತಾರಃ । ಉಪೇತನೇತ್ಯುಪ-ಏತನ । ಇತಿ । ಆಹ । ಯಥಾಯಜುರಿತಿ ಯಥಾ-ಯಜುಃ । ಏವ । ಏತತ್ ।

---

### ಪಶುವು ಕೂಗಿಕೊಳ್ಳುವುದರ ದೋಷನಿವಾರಣೆಗಾಗಿ ಸಂಜ್ಞಪ್ತಹೋಮವಿಧಿ

| | |
|---|---|
| ಯತ್ ಪಶುಃ ಮಾಯುಮ್ ಅಕೃತ ಇತಿ ಜುಹೋತಿ ಶಾಂತ್ಯೈ | ಅಧ್ವರ್ಯುವು 'ಯತ್...ಅಕೃತ' ಎಂಬ ಮಂತ್ರದಿಂದ ಸಂಜ್ಞಪ್ತಹೋಮವನ್ನು ಅನುಷ್ಠಿಸುತ್ತಾನೆ. ಇದರಿಂದ ಅಗ್ನಿಯು ಪ್ರಸನ್ನನಾಗಿ ಪಾಪಪರಿಹಾರವಾಗುತ್ತದೆ. |

### ವಪಾಶ್ರಪಣಿಗಳಿಂದ ಅಧ್ವರ್ಯು-ಯಜಮಾನರು ಪಶುವನ್ನು ಸ್ಪರ್ಶಿಸಲು ಮಂತ್ರದ ವಿನಿಯೋಗ

| | |
|---|---|
| ಶಮಿತಾರಃ ಉಪೇತನ ಇತಿ ಆಹ | 'ಶಮಿತಾರ ಉಪೇತನ' ಎಂದು ಶ್ರುತಿಯು ಹೇಳುತ್ತದೆ. [ಈ ಮಂತ್ರವು ದೇವಶಮಿತಾರನನ್ನು ಪ್ರಾರ್ಥಿಸುತ್ತದೆ] |
| ಯಥಾಯಜುಃ ಏವ ತತ್ | ಇದು ಯಜುರ್ವೇದಮಂತ್ರದಲ್ಲಿರುವಂತೆಯೇ ಸ್ಪಷ್ಟಾರ್ಥವಾಗಿದೆ. |

-ಪಾಯಾಂ ವಾ ಆಹ್ರಿಯಮಾಣಾಯಾಮಗ್ನೇರ್ಮೇಧೋಪ
ಕ್ರಾಮತಿ ತ್ವಾಮುತೇ ದಧಿರೇ ಹವ್ಯವಾಹಮಿತಿ ವಪಾಮಭಿ
ಜುಹೋತ್ಯಗ್ನೇರೇವ ಮೇಧಮವರುಂಧೇಽಥೋ ಶೃತತ್ವಾಯ

---

ವಪಾಯಾಮ್ । ವೈ । ಆಹ್ರಿಯಮಾಣಾಯಾಮಿತ್ಯಾ-ಹ್ರಿಯಮಾಣಾಯಾಮ್ ।
ಅಗ್ನೇಃ । ಮೇಧಃ । ಅಪೇತಿ । ಕ್ರಾಮತಿ । ತ್ವಾಮ್ । ಉ । ತೇ । ದಧಿರೇ ।
ಹವ್ಯವಾಹಮಿತಿ ಹವ್ಯ-ವಾಹಮ್ । ಇತಿ । ವಪಾಮ್ । ಅಭೀತಿ । ಜುಹೋತಿ ।
ಅಗ್ನೇಃ । ಏವ । ಮೇಧಮ್ । ಅವೇತಿ । ರುಂಧೇ । ಅಥೋ ಇತಿ ।
ಶೃತತ್ವಾಯೇತಿ ಶೃತ-ತ್ವಾಯ ।

---

### ವಪಾಭಿಹೋಮವಿಧಿ; ಅರ್ಥವಾದ

| | |
|---|---|
| ವಪಾಯಾಮ್ ವೈ ಆಹ್ರಿಯಮಾಣಾಯಾಮ್ | ವಪೆಯನ್ನು ಹೋಮಕ್ಕಾಗಿ ತರುತ್ತಿರಲು |
| ಅಗ್ನೇಃ ಮೇಧಃ ಅಪಕ್ರಾಮತಿ | ಅಗ್ನಿಯ ಸಮೀಪದಿಂದ ಯಜ್ಞವು ಹೊರಟು ಹೋಗುತ್ತದೆ. |
| ತ್ವಾಮ್ ಉ ತೇ ದಧಿರೇ ಹವ್ಯವಾಹಮ್ ಇತಿ ವಪಾಮ್ ಅಭಿ ಜುಹೋತಿ | ಅದರ ಪರಿಹಾರಕ್ಕಾಗಿ 'ತ್ವಾಮುತೇ' ಎಂಬ ಮಂತ್ರದಿಂದ ವಪೆಯ ಮೇಲ್ಭಾಗದಲ್ಲಿ ಹೋಮವನ್ನು ಮಾಡಬೇಕು. **[ವಿಧಿ]** [ಇದರಿಂದ] |
| ಅಗ್ನೇಃ ಏವ ಮೇಧಮ್ ಅವರುಂಧೇ | ಅಗ್ನಿಯ ಸಮೀಪದಿಂದ ಯಜ್ಞವು ಹೊರಟು ಹೋಗದಂತೆ ತಡೆಯುತ್ತಾನೆ. |
| ಅಥೋ ಶೃತತ್ವಾಯ | ಮತ್ತು ಈ ಹೋಮವು-ವಪೆಯು ಚೆನ್ನಾಗಿ ಪಕ್ವವಾಗುವುದಕ್ಕೂ-ಸಾಧನವಾಗುತ್ತದೆ. |

ಪುರಸ್ತಾತ್ಸ್ವಾಹಾಕೃತಯೋ ವಾ ಅನ್ಯೇ ದೇವಾ ಉಪರಿ

-ಷ್ಟಾತ್ಸ್ವಾಹಾಕೃತಯೋಽನ್ಯೇ ಸ್ವಾಹಾ ದೇವೇಭ್ಯೋ

ದೇವೇಭ್ಯಸ್ಸ್ವಾಹೇತ್ಯಭಿತೋ ವಪಾಂ ಜುಹೋತಿ

---

ಪುರಸ್ತಾತ್ಸ್ವಾಹಾಕೃತಯ ಇತಿ ಪುರಸ್ತಾತ್-ಸ್ವಾಹಾಕೃತಯಃ । ವೈ । ಅನ್ಯೇ । ದೇವಾಃ । ಉಪರಿಷ್ಟಾತ್ಸ್ವಾಹಾಕೃತಯ ಇತ್ಯುಪರಿಷ್ಟಾತ್-ಸ್ವಾಹಾಕೃತಯಃ । ಅನ್ಯೇ । ಸ್ವಾಹಾ । ದೇವೇಭ್ಯಃ । ದೇವೇಭ್ಯಃ । ಸ್ವಾಹಾ । ಇತಿ । ಅಭಿತಃ । ವಪಾಮ್ । ಜುಹೋತಿ ।

---

### ಪರಿವಪ್ಯಹೋಮವಿಧಿ; ಅರ್ಥವಾದ

| | |
|---|---|
| ಅನ್ಯೇ ದೇವಾಃ ಪುರಸ್ತಾತ್ಸ್ವಾಹಾಕೃತಯಃ ವೈ | ಕೆಲವರು ದೇವತೆಗಳು ಮೊದಲು ಸ್ವಾಹಾಕಾರವನ್ನು ಅಪೇಕ್ಷಿಸುವರಷ್ಟೆ. |
| ಅನ್ಯೇ ಉಪರಿಷ್ಟಾತ್ಸ್ವಾಹಾಕೃತಯಃ | ಮತ್ತೆ ಕೆಲವರು ಕೊನೆಯಲ್ಲಿ ಸ್ವಾಹಾಕಾರದಿಂದ ಪ್ರೀತರಾಗತಕ್ಕವರಾಗಿದ್ದಾರೆ. |
| 'ಸ್ವಾಹಾ ದೇವೇಭ್ಯಃ' 'ದೇವೇಭ್ಯಃ ಸ್ವಾಹಾ' ಇತಿ | ಆದಿ ಮತ್ತು ಅಂತ್ಯದಲ್ಲಿ ಸ್ವಾಹಾಕಾರವಿರುವ ಮಂತ್ರಗಳಿಂದ |
| ವಪಾಮ್ ಅಭಿತಃ ಜುಹೋತಿ | ವಪಾಹೋಮದ ಮೊದಲು ಮತ್ತು ಅನಂತರ ಹೋಮವನ್ನು ಅನುಷ್ಠಿಸಬೇಕು. [ವಿಧಿ] |

---

ಅರ್ಥವನ್ನು ಕೊಡುವ ಮಂತ್ರವನ್ನು ಜಪಿಸುವುದರಿಂದ ಈ ದೋಷದ ಪರಿಹಾರವಾಗಿ ಯಜಮಾನನು ಮರಣವನ್ನಪ್ಪುವುದಿಲ್ಲ. ಅವನ ಕಾಮನೆಗಳು ಪೂರ್ಣವಾಗುತ್ತವೆ. 'ಯತ್ ಪಶುಃ ಮಾಯುಮ್ ಅಕೃತ' ಎಂಬ ಮಂತ್ರದಿಂದ ಸಂಜ್ಞಪ್ತಹೋಮವನ್ನು

# ತಾನೇವೋಭಯಾನ್ಪ್ರೀಣಾತಿ ॥ ೧೬-5 ॥

[ವ್ಯಾವೃತ್ತ್ಯಾ ಅಭಿತೋ ವಪಾಂ ಪಂಚ ಚ ॥]

ತಾನ್ । ಏವ । ಉಭಯಾನ್ । ಪ್ರೀಣಾತಿ ॥ ೧೬ ॥

| | |
|---|---|
| ತಾನ್ ಏವ ಉಭಯಾನ್ ಪ್ರೀಣಾತಿ | ಈ ಎರಡು ಬಗೆಯ ದೇವತೆಗಳನ್ನೂ ಈ ಹೋಮಗಳಿಂದ ಸಂತೋಷಪಡಿಸುತ್ತಾನೆ. |

ಅನುಷ್ಠಿಸಿ, ಅಗ್ನಿಯನ್ನು ಪ್ರಸನ್ನಗೊಳಿಸುತ್ತಾನೆ.

ಶಮಿತಾರ ಉಪೇತನ' ಎಂಬ ಮಂತ್ರದಿಂದ ದೇವಶಮಿತಾರನನ್ನು ಪ್ರಾರ್ಥಿಸುತ್ತಾನೆ. ಈ ಮಂತ್ರವು ಋಗ್ರೂಪವಾಗಿದ್ದರೂ ಯಜುರ್ವೇದದಲ್ಲಿ ಹೇಳಲ್ಪಟ್ಟಿರುವುದರಿಂದ **'ಯಥಾಯಜುಃ'** ಎಂದು ಹೇಳಲಾಗಿದೆ.

ವಪೆಯನ್ನು ಹೋಮಕ್ಕಾಗಿ ತರುತ್ತಿರುವಾಗ ಅಗ್ನಿಯ ಸಮೀಪದಿಂದ ಯಜ್ಞವು ಹೊರಟುಹೋಗುತ್ತದೆ. ಅದರ ಪರಿಹಾರಕ್ಕಾಗಿ 'ತ್ವಾಮುತೇ' ಎಂಬ ಮಂತ್ರದಿಂದ ಹೋಮವನ್ನು ಮಾಡಿದರೆ ಅಗ್ನಿಯು ಯಜ್ಞಧಾರಕನಾಗಿ ಉಳಿಯುತ್ತಾನೆ. ವಪೆಯೂ ಚೆನ್ನಾಗಿ ಪಕ್ವವಾಗುತ್ತದೆ. ಈ ರೀತಿ ಪಕ್ವಗೊಂಡ ವಪೆಯು ಯಾಗಾರ್ಹವಾಗುತ್ತದೆ. **'ಶೃತತ್ವಾಯ'** ಎಂಬುದರಿಂದ ಇದು ಸೂಚಿತವಾಗಿದೆ.

'ಸ್ವಾಹಾ ದೇವೇಭ್ಯಃ ದೇವೇಭ್ಯಃ ಸ್ವಾಹಾ' ಎಂಬ ಮಂತ್ರಗಳಿಂದ ಹೋಮವನ್ನು ಮಾಡಿ ಮೊದಲು ಮತ್ತು ಬಳಿಕ ಸ್ವಾಹಾಕಾರವನ್ನು ಬಯಸುವ ಇಬ್ಬಗೆಯ ದೇವತೆಗಳನ್ನೂ ಸಂತೋಷಪಡಿಸುತ್ತಾನೆ.

## ॥ ಷಷ್ಠೋಽನುವಾಕಃ ॥

ಯೋ ವಾ ಅಯಥಾದೇವತಂ ಯಜ್ಞಮುಪಚರತ್ಯಾ

ದೇವತಾಭ್ಯೋ ವೃಶ್ಚ್ಯತೇ ಪಾಪೀಯಾನ್ಭವತಿ

---

ಯಃ । ವೈ । ಅಯಥಾದೇವತಮಿತ್ಯಯಥಾ-ದೇವತಮ್ । ಯಜ್ಞಮ್ । ಉಪಚರತೀತ್ಯುಪ-ಚರತಿ । ಏತಿ । ದೇವತಾಭ್ಯಃ । ವೃಶ್ಚ್ಯತೇ । ಪಾಪೀಯಾನ್ । ಭವತಿ ।

---

ಐದನೆಯ ಅನುವಾಕದಲ್ಲಿ ಪಶೂಪಾಕರಣಾದಿಮಂತ್ರಗಳ ಬ್ರಾಹ್ಮಣವು ಉಕ್ತವಾಗಿದೆ. ಈ ಆರನೆಯ ಅನುವಾಕದಲ್ಲಿ ಸುತ್ಯಾದಿನದಲ್ಲಿ ಮಾಡಬೇಕಾದ ಅಭಿಮರ್ಶನಾದಿಗಳು ಹೇಳಲ್ಪಡುತ್ತವೆ.

---

### ಅಭಿಮರ್ಶನವಿಧಿ; ಅರ್ಥವಾದ

| | |
|---|---|
| ಯಃ ವೈ ಅಯಥಾದೇವತಮ್ | ಯಾವನು ತಮ್ಮ ತಮ್ಮ ದೇವತೆಗಳಿಗೆ ಸಂಬಂಧವಿಲ್ಲದ ಯಜ್ಞಸಾಧನಗಳನ್ನು ಹೊಂದಿರುವ |
| ಯಜ್ಞಮ್ ಉಪಚರತಿ | ಯಜ್ಞವನ್ನು ಅನುಷ್ಠಿಸುತ್ತಾನೆಯೋ |
| [ಸಃ] ದೇವತಾಭ್ಯಃ | ಅವನು ಆ ದೇವತೆಗಳ ಸಂಬಂಧವಿಲ್ಲದವ |
| ಆವೃಶ್ಚ್ಯತೇ | ನಾಗುತ್ತಾನೆ. |
| ಪಾಪೀಯಾನ್ ಭವತಿ | ಪಾಪಿಷ್ಠನೂ, ದರಿದ್ರನೂ ಆಗುತ್ತಾನೆ. |

---

ಯಜ್ಞಸಾಧನಗಳಿಗೂ ಬೇರೆ ಬೇರೆ ದೇವತೆಗಳಿರುತ್ತಾರೆ. ಆ ದೇವತೆಗಳ ಸಂಬಂಧವಿಲ್ಲದೆ ಯಜ್ಞವನ್ನು ಮಾಡುವವನು ಆ ದೇವತೆಗಳ ಆಗ್ರಹಕ್ಕೆ ಗುರಿಯಾಗಿ ದರಿದ್ರನಾಗುತ್ತಾನೆ.

ಯೋ ಯಥಾದೇವತಂ ನ ದೇವತಾಭ್ಯ ಆವೃಶ್ಚ್ಯತೇ

ವಸೀಯಾನ್ಭವತ್ಯಾಗ್ನೇಯ್ಯರ್ಚಾಽಽಗ್ನೀಧ್ರ

ಮಭಿಮೃಶೇದ್ವೈಷ್ಣವ್ಯಾ ಹವಿರ್ಧಾನ-

---

ಯಃ । ಯಥಾದೇವತಮಿತಿ ಯಥಾ-ದೇವತಮ್ । ನ । ದೇವತಾಭ್ಯಃ । ಏತಿ । ವೃಶ್ಚ್ಯತೇ । ವಸೀಯಾನ್ । ಭವತಿ । ಆಗ್ನೇಯ್ಯಾ । ಋಚಾ । ಆಗ್ನೀಧ್ರಮಿತ್ಯಾಗ್ನಿ-ಇಧ್ರಮ್ । ಅಭೀತಿ । ಮೃಶೇತ್ । ವೈಷ್ಣವ್ಯಾ । ಹವಿರ್ಧಾನಮಿತಿ ಹವಿಃ-ಧಾನಮ್ ।

---

| | |
|---|---|
| ಯಃ ಯಥಾದೇವತಮ್ [ಯಜ್ಞಮ್ ಉಪಚರತಿ] | ಯಾವನು ತಮ್ಮ ತಮ್ಮ ದೇವತೆಗಳ ಸಂಬಂಧವುಳ್ಳ ಯಜ್ಞಸಾಧನಗಳಿಂದ ಕೂಡಿದ ಯಜ್ಞವನ್ನು ಅನುಷ್ಠಿಸುವನೋ |
| ದೇವತಾಭ್ಯಃ ನ ಆವೃಶ್ಚ್ಯತೇ | [ಅವನು] ದೇವತೆಗಳಿಂದ ದೂರನಾಗುವುದಿಲ್ಲ. |
| ವಸೀಯಾನ್ ಭವತಿ | ಶ್ರೇಷ್ಠನಾಗುತ್ತಾನೆ/ಶ್ರೀಮಂತನಾಗುತ್ತಾನೆ. |

### ಅಭಿಮರ್ಶನವಿಧಿ

| | |
|---|---|
| ಆಗ್ನೇಯ್ಯಾ ಋಚಾ | ಅಗ್ನಿದೇವತಾಕವಾದ 'ಅಗ್ನೇ ನಯ' ಎಂಬ ಋಕ್ಕಿನಿಂದ |
| ಆಗ್ನೀಧ್ರಮ್ ಅಭಿಮೃಶೇತ್ | ಆಗ್ನೀಧ್ರಮಂಟಪವನ್ನು ಸ್ಪರ್ಶಿಸಬೇಕು. |
| ವೈಷ್ಣವ್ಯಾ ಹವಿರ್ಧಾನಮ್ [ಅಭಿಮೃಶೇತ್] | 'ಇದಂ ವಿಷ್ಣುಃ' ಎಂಬ ವಿಷ್ಣುದೇವತಾಕವಾದ ಮಂತ್ರದಿಂದ ಹವಿರ್ಧಾನವನ್ನು ಮುಟ್ಟಬೇಕು. |

---

ಆ ದೇವತೆಗಳನ್ನು ಪ್ರಸನ್ನಗೊಳಿಸಿ ಯಾಗವನ್ನು ಮಾಡುವವನು ಆ ದೇವತೆಗಳ ಅನುಗ್ರಹವನ್ನು ಪಡೆಯುವನು. ಶ್ರೀಮಂತನಾಗುವನು.

ಮಾಗ್ನೇಯ್ಯಾ ಸ್ರುಚೋ ವಾಯವ್ಯಯಾ ವಾಯವ್ಯಾನ್ಯೈಲ
ನ್ದ್ರಿಯಾ ಸದೋ ಯಥಾದೇವತಮೇವ ಯಜ್ಞಮುಪ
ಚರತಿ ನ ದೇವತಾಭ್ಯ ಆವೃಶ್ಚ್ಯತೇ ವಸೀಯಾನ್ಭವತಿ

---

ಆಗ್ನೇಯ್ಯಾ । ಸ್ರುಚಃ । ವಾಯವ್ಯಯಾ । ವಾಯವ್ಯಾನಿ । ಐನ್ದ್ರಿಯಾ । ಸದಃ ।
ಯಥಾದೇವತಮಿತಿ ಯಥಾ–ದೇವತಮ್ । ಏವ । ಯಜ್ಞಮ್ । ಉಪೇತಿ । ಚರತಿ ।
ನ । ದೇವತಾಭ್ಯಃ । ಏತಿ । ವೃಶ್ಚ್ಯತೇ । ವಸೀಯಾನ್ । ಭವತಿ ।

---

| | |
|---|---|
| ಆಗ್ನೇಯ್ಯಾ ಸ್ರುಚಃ [ಅಭಿಮೃಶೇತ್] | 'ಅಗ್ನ ಆಯೂಗ್ಂಷಿ' ಎಂಬ ಅಗ್ನಿದೇವತಾಕವಾದ ಮಂತ್ರದಿಂದ ಜುಹೂ, ಉಪಭೃತ್, ಧ್ರುವಾ ಎಂಬ ಸ್ರುಕ್‌ಗಳನ್ನು ಸ್ಪರ್ಶಿಸಬೇಕು. |
| ವಾಯವ್ಯಯಾ ವಾಯವ್ಯಾನಿ [ಅಭಿಮೃಶೇತ್] | 'ಆ ವಾಯೋ ಭೂಷ' ಎಂಬ ವಾಯು ದೇವತಾಕವಾದ ಮಂತ್ರದಿಂದ ವಾಯವ್ಯ ಪಾತ್ರೆಗಳನ್ನು ಸ್ಪರ್ಶಿಸಬೇಕು. |
| ಐನ್ದ್ರಿಯಾ ಸದಃ [ಅಭಿಮೃಶೇತ್] | 'ಆ ಘಾ ಯೇ ಅಗ್ನಿಮ್' ಎಂಬ ಇಂದ್ರ ದೇವತಾಕಮಂತ್ರದಿಂದ ಸದೋಮಂಟಪವನ್ನು ಸ್ಪರ್ಶಿಸಬೇಕು. |
| ಯಥಾದೇವತಮ್ ಏವ ಯಜ್ಞಮ್ ಉಪಚರತಿ | [ಇದರಿಂದ] ಆಯಾ ದೇವತೆಗಳ ಸಂಬಂಧವುಳ್ಳ ಯಜ್ಞವನ್ನು ಮಾಡುತ್ತಾನೆ. |
| ದೇವತಾಭ್ಯಃ ನ ಆವೃಶ್ಚ್ಯತೇ | ಆಯಾ ದೇವತೆಗಳಿಂದ ದೂರನಾಗುವುದಿಲ್ಲ. |
| ವಸೀಯಾನ್ ಭವತಿ | ಶ್ರೇಷ್ಠನೂ ಧನವಂತನೂ ಆಗುತ್ತಾನೆ. |

---

ಆಯಾ ದೇವತೆಗಳ ಮಂತ್ರದಿಂದ ಆಯಾ ಯಜ್ಞಸಾಧನಗಳನ್ನು ಸ್ಪರ್ಶಿಸಬೇಕು.

**ಯುನಜ್ಮಿ ತೇ ಪೃಥಿವೀಂ ಜ್ಯೋತಿಷಾ ಸಹ ಯುನಜ್ಮಿ ವಾಯುಮಂತರಿಕ್ಷೇಣ [(೧೭)ತೇ ಸಹ] ತೇ ಸಹ ಯುನಜ್ಮಿ ವಾಚಗ್ಂ ಸಹ ಸೂರ್ಯೇಣ ತೇ**

---

ಯುನಜ್ಮಿ । ತೇ । ಪೃಥಿವೀಮ್ । ಜ್ಯೋತಿಷಾ । ಸಹ । ಯುನಜ್ಮಿ । ವಾಯುಮ್। ಅಂತರಿಕ್ಷೇಣ ।(೧೭)। ತೇ । ಸಹ । ಯುನಜ್ಮಿ । ವಾಚಮ್ । ಸಹ । ಸೂರ್ಯೇಣ । ತೇ ।

---

**ಮಂತ್ರ**

**ಯುನಜ್ಮಿ....ತೇ ॥**

**ವಿನಿಯೋಗ**

ದ್ರೋಣಕಲಶ, ಆಧವನೀಯ ಮತ್ತು ಪೂತ ಭೃತ್ಪಾತ್ರಗಳನ್ನು ಆಸಾದನ ಮಾಡಲು

– ಸಾಯಣಾಚಾರ್ಯರು

ಮಹಾಪರಿಧಿಗಳನ್ನು ಇಡಲು-ಭ.ಭಾ.ಮಿಶ್ರರು

---

✦[ಓ ದ್ರೋಣಕಲಶವೇ!] **ತೇ**=ನಿನ್ನ ಸಂಬಂಧಿಯಾದ; **ಪೃಥಿವೀಮ್**= ಭೂಮಿಯನ್ನು; **ಜ್ಯೋತಿಷಾ ಸಹ ಯುನಜ್ಮಿ**=ಜ್ಯೋತಿಃಸ್ವರೂಪನಾದ ಅಗ್ನಿಯೊಡನೆ ಸೇರಿಸುತ್ತೇನೆ.

✦[ಓ! ಆಧವನೀಯವೇ!]**ತೇ**=ನಿನ್ನ ಸ್ವರೂಪನಾದ **ವಾಯುಮ್**=ವಾಯುವನ್ನು; **ಅಂತರಿಕ್ಷೇಣ ಸಹ**=ಅಂತರಿಕ್ಷದೊಡನೆ; **ಯುನಜ್ಮಿ** =ಸೇರಿಸುತ್ತೇನೆ;

✦[ಓ! ಪೂತಭೃತ್ಪಾತ್ರವೇ!] **ತೇ ವಾಚಮ್**=ನಿನ್ನ ಸ್ವರೂಪವಾದ ವಾಕ್ಪ್ರತಿಪಾದ್ಯ ವಾದ ದ್ಯುಲೋಕವನ್ನು; **ಸೂರ್ಯೇಣ ಸಹ**=ಸೂರ್ಯನೊಡನೆ; **ಯುನಜ್ಮಿ** =ಸೇರಿಸುತ್ತೇನೆ.

---

ವಾಯವ್ಯಪಾತ್ರಗಳಿಗೆ ದೇವತೆಗಳು ಅನೇಕ. **'ನಾನಾದೇವತ್ಯಾನಿ ಸಂತಿ ವಾಯವ್ಯಾನ್ಯುಚ್ಯಂತೇ'** ಎಂಬ ಶ್ರುತಿವಾಕ್ಯದಂತೆ ಅವುಗಳಿಗೆ ವಾಯವ್ಯಗಳೆಂದು ಹೆಸರಿದೆ.

**ಯುನಜ್ಮಿ ತಿಸ್ರೋ ವಿಪೃಚಸ್ಸೂರ್ಯಸ್ಯ ತೇ । ಅಗ್ನಿರ್ದೇವತಾ ಗಾಯತ್ರೀ ಛಂದ ಉಪಾಗ್ಂಶೋಃ ಪಾತ್ರಮಸಿ ಸೋಮೋ ದೇವತಾ ತ್ರಿಷ್ಟುಪ್ಛಂದೋಽಂತರ್ಯಾಮಸ್ಯ ಪಾತ್ರಮಸೀಂ–**

---

ಯುನಜ್ಮಿ । ತಿಸ್ರಃ । ವಿಪೃಚ ಇತಿ ವಿ–ಪೃಚಃ । ಸೂರ್ಯಸ್ಯ । ತೇ ॥ ಅಗ್ನಿಃ । ದೇವತಾ। ಗಾಯತ್ರೀ । ಛಂದಃ । ಉಪಾಗ್ಂಶೋರಿತ್ಯುಪ–ಅಗ್ಂಶೋಃ । ಪಾತ್ರಮ್ । ಅಸಿ । ಸೋಮಃ । ದೇವತಾ । ತ್ರಿಷ್ಟುಪ್ । ಛಂದಃ । ಅಂತರ್ಯಾಮಸ್ಯೇತ್ಯಂತಃ–ಯಾಮಸ್ಯ। ಪಾತ್ರಮ್ । ಅಸಿ ।

---

| ಮಂತ್ರ | ವಿನಿಯೋಗ |
| --- | --- |
| **ಯುನಜ್ಮಿ...ಸೂರ್ಯಸ್ಯ ತೇ ॥** | ಸಾದನ ಮಾಡಿರುವ ಸ್ರುಕ್‌ಗಳ ಅಭಿಮಂತ್ರಣ. |
| **ಅಗ್ನಿರ್ದೇವತಾ...ಪಾತ್ರಮಸಿ ॥** | ಸೋಮಗ್ರಹಣವನ್ನು ಮಾಡುವ ವಾಯವ್ಯ ಪಾತ್ರಗಳನ್ನು ಅಭಿಮರ್ಶಿಸಲು. |

---

✦**ತಿಸ್ರಃ**=ಮೂರು [ಜುಹೂ, ಉಪಭೃತ್, ಧ್ರುವಾ] ಪಾತ್ರೆಗಳನ್ನು; **ವಿಪೃಚಃ**= ಪರಸ್ಪರ ಸಂಬಂಧವಿಲ್ಲದಂತೆ; **ಸೂರ್ಯಸ್ಯ**=ಸೂರ್ಯನ [ಬೆಳಕಿನಿಂದ ಪರೀಕ್ಷಿಸಿ] **ತೇ**=ನಿನ್ನ [ಯಾಗದ] ಸಂಬಂಧಿಗಳನ್ನಾಗಿ; **ಯುನಜ್ಮಿ**=ಸೇರಿಸುತ್ತೇನೆ.

✦[ಎಲೈ! ಊರ್ಧ್ವಪಾತ್ರವೇ!] [ನಿನಗೆ]**ಅಗ್ನಿಃ ದೇವತಾ**=ಅಗ್ನಿಯು ದೇವತೆಯಾಗಿದ್ದಾನೆ; [ಅವನು ನಿನ್ನನ್ನು ರಕ್ಷಿಸಲಿ] **ಗಾಯತ್ರೀ ಛಂದಃ**=ಗಾಯತ್ರೀ ಛಂದಸ್ಸು [ನಿನ್ನನ್ನು ಕಾಪಾಡಲಿ]. **ಉಪಾಗ್ಂಶೋಃ ಪಾತ್ರಮ್ ಅಸಿ**=[ನೀನು] ಉಪಾಂಶುನಾಮಕ ಸೋಮಗ್ರಹಣಪಾತ್ರೆಯಾಗಿರುವೆ.

✦[ಎಲೈ! ಪಾತ್ರವೇ!] **ಸೋಮಃ ದೇವತಾ**=ಸೋಮದೇವತೆಯೂ, **ತ್ರಿಷ್ಟುಪ್ ಛಂದಃ**=ತ್ರಿಷ್ಟುಪ್ ಛಂದಸ್ಸೂ, [ನಿನ್ನನ್ನು ರಕ್ಷಿಸಲಿ]. [ನೀನು] **ಅಂತರ್ಯಾಮಸ್ಯ ಪಾತ್ರಮ್ ಅಸಿ**=ಅಂತರ್ಯಾಮಸೋಮರಸಗ್ರಹಣದ ಪಾತ್ರೆಯಾಗಿರುವೆ.

ದ್ರೋ ದೇವತಾ ಜಗತೀ ಛಂದ ಇಂದ್ರವಾಯುವೋಃ ಪಾತ್ರಮಸಿ ಬೃಹಸ್ಪತಿರ್ದೇವತಾಽನುಷ್ಟುಪ್ಛಂದೋ ಮಿತ್ರಾವರುಣಯೋಃ ಪಾತ್ರಮಸ್ಯಶ್ವಿನೌ ದೇವತಾ ಪಙ್ಕ್ತಿಶ್ಛಂದೋಽಶ್ವಿನೋಃ ಪಾತ್ರಮಸಿ

---

ಇಂದ್ರಃ । ದೇವತಾ । ಜಗತೀ । ಛಂದಃ । ಇಂದ್ರವಾಯುವೋರಿತೀಂದ್ರ-ವಾಯುವೋಃ । ಪಾತ್ರಮ್ । ಅಸಿ । ಬೃಹಸ್ಪತಿಃ । ದೇವತಾ । ಅನುಷ್ಟುಬಿತ್ಯನು-ಸ್ತುಪ್ । ಛಂದಃ । ಮಿತ್ರಾವರುಣಯೋರಿತಿ ಮಿತ್ರಾ-ವರುಣಯೋಃ । ಪಾತ್ರಮ್ । ಅಸಿ । ಅಶ್ವಿನೌ । ದೇವತಾ । ಪಙ್ಕ್ತಿಃ । ಛಂದಃ । ಅಶ್ವಿನೋಃ । ಪಾತ್ರಮ್ । ಅಸಿ ।

---

| ಮಂತ್ರ | ವಿನಿಯೋಗ |
|---|---|
| **ಸೋಮೋ...ಧ್ರುವಸ್ಯ ಪಾತ್ರಮಸಿ ॥** | ಬೇರೆ ಬೇರೆ ಸೋಮರಸಗ್ರಹಣಪಾತ್ರೆಗಳ ಅಭಿಮರ್ಶನಮಂತ್ರಗಳು. |

---

✦[ಎಲೈ! ಪಾತ್ರವೇ!] **ಇಂದ್ರಃ ದೇವತಾ**=ದೇವತೆಯಾದ ಇಂದ್ರನೂ; **ಜಗತೀ ಛಂದಃ**= ಜಗತೀಛಂದೋದೇವತೆಯೂ, [ನಿನ್ನನ್ನು ಕಾಪಾಡಲಿ][ನೀನು] **ಇಂದ್ರವಾಯುವೋಃ ಪಾತ್ರಮ್ ಅಸಿ**=ಇಂದ್ರವಾಯುದೇವತಾಕವಾದ ಸೋಮರಸವನ್ನು ಗ್ರಹಣ ಮಾಡುವ ಪಾತ್ರೆಯಾಗಿದ್ದೀಯೆ. ✦[ಎಲೈ! ಪಾತ್ರವೇ!]**ಬೃಹಸ್ಪತಿಃ ದೇವತಾ**= ಬೃಹಸ್ಪತಿದೇವತೆಯೂ; **ಅನುಷ್ಟುಪ್ ಛಂದಃ**=ಅನುಷ್ಟುಪ್ ಛಂದಸ್ಸೂ [ನಿನ್ನನ್ನು ಕಾಯಲಿ]. [ನೀನು] **ಮಿತ್ರಾವರುಣಯೋಃ ಪಾತ್ರಮ್ ಅಸಿ**=ಮಿತ್ರಾವರುಣ ದೇವತಾಕವಾದ ಸೋಮರಸವನ್ನು ಗ್ರಹಿಸುವ ಪಾತ್ರೆಯಾಗಿರುವೆ. ✦[ಎಲೈ! ಪಾತ್ರವೇ!] **ಅಶ್ವಿನೌ ದೇವತಾ**=ಅಶ್ವಿನೀದೇವತೆಗಳು [ನಿನ್ನನ್ನು ಪಾಲಿಸಲಿ]. **ಪಙ್ಕ್ತಿಃ ಛಂದಃ**= ಪಂಕ್ತಿ ಛಂದಸ್ಸು, [ನಿನ್ನನ್ನು ಪೊರೆಯಲಿ].[ನೀನು] **ಅಶ್ವಿನೋಃ ಪಾತ್ರಮ್ ಅಸಿ**=ಅಶ್ವಿನೀದೇವತೆಗಳಿಗಾಗಿ ಸೋಮರಸವನ್ನು ಸಂಗ್ರಹಿಸುವ ಪಾತ್ರೆಯಾಗಿರುವೆ.

**ಸೂರ್ಯೋ ದೇವತಾ ಬೃಹತೀ[(೧೮)]ಛಂದಶ್ಶುಕ್ರಸ್ಯ ಪಾತ್ರಮಸಿ ಚಂದ್ರಮಾ ದೇವತಾ ಸತೋಬೃಹತೀ ಛಂದೋ ಮನ್ಥಿನಃ ಪಾತ್ರಮಸಿ ವಿಶ್ವೇ ದೇವಾ ದೇವತೋಷ್ಣಿಹಾ ಛಂದ ಆಗ್ರಯಣಸ್ಯ ಪಾತ್ರಮಸೀಂದ್ರೋ ದೇವತಾ**

ಸೂರ್ಯಃ। ದೇವತಾ। ಬೃಹತೀ।(೧೮)।ಛಂದಃ। ಶುಕ್ರಸ್ಯ। ಪಾತ್ರಮ್। ಅಸಿ। ಚಂದ್ರಮಾಃ । ದೇವತಾ । ಸತೋಬೃಹತೀತಿ ಸತಃ-ಬೃಹತೀ । ಛಂದಃ । ಮನ್ಥಿನಃ। ಪಾತ್ರಮ್। ಅಸಿ। ವಿಶ್ವೇ। ದೇವಾಃ। ದೇವತಾ। ಉಷ್ಣಿಹಾ। ಛಂದಃ। ಆಗ್ರಯಣಸ್ಯ। ಪಾತ್ರಮ್। ಅಸಿ। ಇಂದ್ರಃ। ದೇವತಾ।

✦[ಎಲೈ! ಪಾತ್ರವೇ!] **ಸೂರ್ಯಃ ದೇವತಾ**=ಸೂರ್ಯದೇವತೆಯೂ; **ಬೃಹತೀ ಛಂದಃ**=ಬೃಹತೀ ಛಂದಸ್ಸೂ, [ನಿನ್ನನ್ನು ರಕ್ಷಿಸಲಿ;][ನೀನು] **ಶುಕ್ರಸ್ಯ ಪಾತ್ರಮ್ ಅಸಿ**=ಶುಕ್ರಗ್ರಹಪಾತ್ರನಾಗಿದ್ದೀಯೆ. ✦[ಎಲೈ! ಮಂಥಿಪಾತ್ರವೇ!]**ಚಂದ್ರಮಾಃ ದೇವತಾ**=ಚಂದ್ರಮದೇವತೆಯೂ; **ಸತೋಬೃಹತೀ ಛಂದಃ**=ಸತೋಬೃಹತಿಯೆಂಬ ಛಂದಸ್ಸೂ, [ನಿನ್ನನ್ನು ಕಾಪಾಡಲಿ]. **ಮಂಥಿನಃ ಪಾತ್ರಮ್ ಅಸಿ**=ಮಂಥಿಗ್ರಹವಾಗಿದ್ದೀಯೆ. ✦[ಓ! ಆಗ್ರಯಣಸ್ಥಾಲಿಯೇ]**ವಿಶ್ವೇ ದೇವಾಃ ದೇವತಾ**=ವಿಶ್ವೇದೇವದೇವತೆಗಳೂ; **ಉಷ್ಣಿಹಾ ಛಂದಃ**=ಉಷ್ಣಿಹೆಯೆಂಬ ಛಂದಸ್ಸೂ [ನಿನ್ನನ್ನು ರಕ್ಷಿಸಲಿ]. [ನೀನು] **ಆಗ್ರಯಣಸ್ಯ ಪಾತ್ರಮ್ ಅಸಿ**=ಆಗ್ರಯಣಸ್ಥಾಲಿಯಾಗಿದ್ದೀಯೆ. ✦[ಎಲೈ! ಉಕ್ಥಸ್ಥಾಲಿಯೇ!] **ಇಂದ್ರಃ ದೇವತಾ**=ಇಂದ್ರದೇವತೆಯೂ;

**'ಯುನಜ್ಮಿ..'** ಎಂದು ಆರಂಭಗೊಳ್ಳುವ ಮೂರು ಮಂತ್ರಗಳಲ್ಲಿ ಮೊದಲನೆಯ ಮಂತ್ರದಿಂದ ದ್ರೋಣಕಲಶವನ್ನು ದಕ್ಷಿಣಹವಿರ್ಧಾನದ ಕೆಳಗಡೆ ಹಿಂಭಾಗದಲ್ಲಿಯೂ, ಎರಡನೆಯ ಮಂತ್ರದಿಂದ ಆಧವನೀಯವನ್ನು ಉತ್ತರ ಹವಿರ್ಧಾನದ

ಕಕುಚ್ಛಂದ ಉಕ್ಥಾನಾಂ ಪಾತ್ರಮಸಿ ಪೃಥಿವೀ ದೇವತಾ ವಿರಾಟ್ಛಂದೋ ಧ್ರುವಸ್ಯ ಪಾತ್ರಮಸಿ ॥ ೧೯-6॥

[ಅಂತರಿಕ್ಷೇಣ ಬೃಹತೀ ತ್ರಯಸ್ತ್ರಿಗ್ಂಶಚ್ಚ ॥]

---

ಕಕುತ್ । ಛಂದಃ । ಉಕ್ಥಾನಾಮ್ । ಪಾತ್ರಮ್ । ಅಸಿ । ಪೃಥಿವೀ । ದೇವತಾ । ವಿರಾಡಿತಿ ವಿ-ರಾಟ್ । ಛಂದಃ । ಧ್ರುವಸ್ಯ । ಪಾತ್ರಮ್ । ಅಸಿ ॥೧೯॥

---

**ಕಕುತ್ ಛಂದಃ**=ಕಕುಪ್ ಎಂಬ ಛಂದಸ್ಸೂ [ನಿನ್ನನ್ನು ಕಾಪಾಡಲಿ]. [ನೀನು] **ಉಕ್ಥಾನಾಮ್ ಪಾತ್ರಮ್ ಅಸಿ**=ಉಕ್ಥ-ಶಸ್ತ್ರಗಳಿಗೆ ಸಂಬಂಧಿಸಿದ ಸ್ಥಾಲಿಯಾಗಿದ್ದೀಯೆ.

✦[ಓ! ಧ್ರುವಸ್ಥಾಲಿಯೇ!] **ಪೃಥಿವೀ ದೇವತಾ**=ದೇವತೆಯಾದ ಪೃಥಿವಿಯೂ; **ವಿರಾಟ್ ಛಂದಃ**=ವಿರಾಟ್ಛಂದಸ್ಸೂ, [ನಿನ್ನನ್ನು ಸಲಹಲಿ] [ನೀನು] **ಧ್ರುವಸ್ಯ ಪಾತ್ರಮ್ ಅಸಿ**= ಧ್ರುವಸ್ಥಾಲಿಯಾಗಿದ್ದೀಯೆ.

---

ಮೇಲ್ಭಾಗದಲ್ಲಿಯೂ, ಮೂರನೆಯ ಮಂತ್ರದಿಂದ ಪೂತಭೃತ್ತನ್ನು ರಥದ ಮುಂಭಾಗದಲ್ಲಿ[ಮೂಕಿ]ಯೂ ಇಡಬೇಕು.

ದ್ರೋಣಕಲಶ, ಆಧವನೀಯ, ಪೂತಭೃತ್ ಪಾತ್ರೆಗಳನ್ನು ಆಸಾದನ ಮಾಡುವಾಗ ಆಯಾ ದೇವತೆಗಳೊಡನೆ ಸೇರಿಸುವುದಾಗಿ ಹೇಳಲಾಗಿದೆ. ಈ ಮಂತ್ರವು ಮಹಾ ಪರಿಧಿಗಳನ್ನು ಇಡಲು ವಿನಿಯೋಗಿಸಲ್ಪಡುವುದೆಂದು ಮಿಶ್ರರ ಮತ.

ಯುನಜ್ಮಿ...ತೇ । ಈ ಮಂತ್ರವು ಸಾದನ ಮಾಡಿರುವ ಸ್ರುಕ್‌ಗಳ ಅಭಿಮಂತ್ರಣಕ್ಕಾಗಿ ಎಂದು ಸಾಯಣರ ಮತ. ಅಭಿಮರ್ಶನವನ್ನು ಮಾಡುವುದಕ್ಕಾಗಿ ಎಂದು ಮಿಶ್ರರ ಮತ. ಮೂರು ಸ್ರುಕ್‌ಗಳನ್ನು 'ಸೂರ್ಯಬೆಳಕಿನಿಂದ ಪರೀಕ್ಷಿಸಿ' 'ಸೂರ್ಯಸಂಬಂಧಿಯಾಗಿ, 'ಸೂರ್ಯನಂತೆ ಪ್ರಕಾಶವುಳ್ಳವುಗಳನ್ನು'' ಎಂದೂ ವಿವರಿಸಿದ್ದಾರೆ.

ಸೋಮರಸವನ್ನು ಗ್ರಹಣ ಮಾಡುವ ವಾಯವ್ಯಪಾತ್ರೆಗಳನ್ನು ಅಭಿಮರ್ಶನ ಮಾಡಲು ಈ ಹತ್ತು ಮಂತ್ರಗಳಿವೆ. ವಾಯುವು ವರವನ್ನು ಪಡೆದಿರುವುದರಿಂದ ಬೇರೆ ಬೇರೆಯ ದೇವತೆಗಳ ಸೋಮರಸಗ್ರಹಣಪಾತ್ರೆಗಳೂ ವಾಯವ್ಯಗಳೆಂದೇ ಹೇಳಲ್ಪಡುತ್ತವೆ. ಪ್ರತಿಯೊಂದು ಪಾತ್ರೆಗೂ, ಸ್ಥಾಲಿಗೂ ದೇವತೆಯೂ ಛಂದಸ್ಸೂ ರಕ್ಷಿಸಲೆಂದೂ ಶ್ರುತಿಯು ಹೇಳುತ್ತಿದೆ. ಇದನ್ನು ಹೇಳಿ ಅಭಿಮರ್ಶನವನ್ನು ಮಾಡಬೇಕೆಂಬ ವಿಧಿಯು ಇದಾಗಿದೆ.

## ವಿನಿಯೋಗಸಂಗ್ರಹ

ಆಗ್ನೇಯ್ಯಗ್ನೇ[1] ನಯೇತೀದಂ[2]ವಿಷ್ಣುರಿತ್ಯೇವ ವೈಷ್ಣವೀ ।
[3]ಅಗ್ನ ಆಯೂಗ್ಂಷಿ ಚಾಗ್ನೇಯೀ [4]ಆ ವಾಯೋ ಇತಿ ವಾಯವೀ ॥
[5]ಆ ಘಾ ಯೇ ಅಗ್ನಿಮೈಂದ್ರೀ ಸ್ಯಾದ್ಯುನಜ್ಮೀತಿ[6-8] ತ್ರಿಭಿಃ ಕ್ರಮಾತ್ ।
ಸಾದ್ಯಂತೇ ದ್ರೋಣಕಲಶಾಧವನೀಯೌ ಚ ಪೂತಭೃತ್ ॥
[9]ಯುನೇತಿ ಮಂತ್ರಣಂ ಕುರ್ಯಾತ್ಸವನೀಯಸ್ರುವಸ್ರುಚಾಮ್ ।
[10-19]ಅಗ್ನಿರಿತ್ಯಾದಿ ದಶಭಿರ್ಗ್ರಹಪಾತ್ರಾಣಿ ಸಂಸ್ಪೃಶೇತ್ ॥
ಷಷ್ಠಾನುವಾಕೇ ಸಂಪ್ರೋಕ್ತಾ ಮಂತ್ರಾ ಏಕೋನವಿಂಶತಿಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–೧೯

---

## ಅನುವಾಕದ ವಿಶೇಷವಿಷಯುಗಳು

### ಅ) ಮೀಮಾಂಸಾ

**೧) 'ಆಗ್ನೇಯ್ಯಾ' 'ವೈಷ್ಣವ್ಯಾ' ಎಂಬಲ್ಲಿ ಯಾವ ಮಂತ್ರದ ಪರಿಗ್ರಹ?**
[ಜೈ.ಸೂ.3.2]

'ಆಗ್ನೇಯ್ಯಾಽಽಗ್ನೀಧ್ರಮ್' 'ವೈಷ್ಣವ್ಯಾ ಹವಿರ್ಧಾನಮ್' ಎಂಬ ಶ್ರುತಿವಚನ ವಿದೆ. ಅಗ್ನಿದೇವತಾಕವಾದ ಋಕ್‌ಗೆ 'ಆಗ್ನೇಯೀ' ಎಂದು ಹೆಸರು. ವಿಷ್ಣುದೇವ ತಾಕವಾದ ಋಕ್ಕಿಗೆ 'ವೈಷ್ಣವೀ' ಎಂದು ಹೆಸರು. ಹೀಗಿರುವಾಗ ಹಿಂದಿನ ಶಬ್ದ ಗಳು ಸಾಮಾನ್ಯವಾಚಕಗಳಾದುದರಿಂದ ಋಗ್ವೇದದಲ್ಲಿ ಪಠಿತವಾದ ಯಾವುದಾ ದರೂ ಆ ದೇವತಾಸಂಬಂಧಿಯಾದುದು ಆಗಬಹುದೇ? ಇದು ಇಲ್ಲಿನ **ಸಂಶಯ.**

ಯಾವುದೇ ಮಂತ್ರವಿಶೇಷವನ್ನು ಹೇಳದೆ ಅಗ್ನಿದೇವತಾಕವಾದದ್ದು ಎಂದು ಹೇಳಿರುವುದರಿಂದ ಯಾವುದಾದರೂ ಮಂತ್ರವನ್ನು ಪರಿಗ್ರಹಿಸಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಬೇರೆ ಯಾವುದಾದರೂ ಮಂತ್ರವನ್ನು ಪರಿಗ್ರಹಿಸಿದರೆ ಅದಕ್ಕೆ ಯಜ್ಞಸಂಬಂಧವನ್ನೂ, ಕ್ರಿಯಾವಿಶೇಷಸಂಬಂಧವನ್ನೂ ಕಲ್ಪಿಸಬೇಕು. ಪ್ರಕರಣದಲ್ಲಿ ಪಠಿತವಾದ ಮಂತ್ರವಾದರೆ ಅದಕ್ಕೆ ಯಜ್ಞಸಂಬಂಧವು ಪ್ರಕರಣದಿಂದಲೇ ಕ್ಲೃಪ್ತವಾಗಿರುವುದರಿಂದ ಕ್ರಿಯಾವಿಶೇಷಸಂಬಂಧವನ್ನು ಮಾತ್ರ ಹೇಳಬೇಕಾಗಿರುವುದರಿಂದ ಲಾಘವವು ಇದೆ. ಆದುದರಿಂದ ಅಭಿಮರ್ಶನದಲ್ಲಿ– ಪ್ರಕರಣದಲ್ಲಿ ಪಾಠ ಮಾಡಿರುವ ಆಯಾ ದೇವತೆಯ ಮಂತ್ರವನ್ನು– ಹೇಳಬೇಕು. ಇದು ಇಲ್ಲಿನ **ಸಿದ್ಧಾಂತ.**

## ॥ ಸಪ್ತಮೋಽನುವಾಕಃ ॥

ಇಷ್ಟರ್ಗೋ ವಾ ಅಧ್ವರ್ಯುರ್ಯಜಮಾನಸ್ಯೇಷ್ಟರ್ಗಃ

ಖಲು ವೈ ಪೂರ್ವೋಽಷ್ಟುರ್ಃ ಕ್ಷೀಯತ

---

ಇಷ್ಟರ್ಗಃ । ವೈ । ಅಧ್ವರ್ಯುಃ । ಯಜಮಾನಸ್ಯ । ಇಷ್ಟರ್ಗಃ । ಖಲು । ವೈ ।

ಪೂರ್ವಃ । ಅಷ್ಟುರ್ಃ । ಕ್ಷೀಯತೇ ।

---

ಹಿಂದಿನ ಅನುವಾಕದಲ್ಲಿ ಅಭಿಮರ್ಶನಮಂತ್ರಗಳು ಉಕ್ತವಾಗಿವೆ. ಈ ಏಳನೆಯ ಅನುವಾಕದಲ್ಲಿ ಕೆಲವು ನಿತ್ಯ ನೈಮಿತ್ತಿಕ ಹೋಮಗಳು ಉಕ್ತವಾಗಿವೆ. ಮೊದಲು ಒಂದು ನಿತ್ಯಪ್ರಯೋಗದ ವಿಧಿಯು ಹೇಳಲ್ಪಟ್ಟಿದೆ.

---

### ನಿತ್ಯಪ್ರಯೋಗದ ವಿಧಿ

| ಬ್ರಾಹ್ಮಣಭಾಗ | ವಿವರಣೆ |
|---|---|
| ಇಷ್ಟರ್ಗಃ ವೈ ಅಧ್ವರ್ಯುಃ | ಪ್ರಮಾದ–ಆಲಸ್ಯಾದಿಗಳಿಂದ ಯಜಮಾನನ ಯಾಗವನ್ನೂ ಅವನ ಇಷ್ಟವನ್ನೂ ನಾಶಪಡಿಸುವವನು ಅಧ್ವರ್ಯುವಷ್ಟೇ. |
| ಯಜಮಾನಸ್ಯ ಇಷ್ಟರ್ಗಃ ಖಲು ವೈ | ಅವನು ಯಜಮಾನನ ಯಜ್ಞವನ್ನು ಹಾಳು ಮಾಡುತ್ತಾನಷ್ಟೆ. |
| ಅಷ್ಟುರ್ಃ ಪೂರ್ವಃ ಕ್ಷೀಯತೇ | [ಆ ಅಧ್ವರ್ಯುವು] ಹಾನಿಯನ್ನು ಹೊಂದುವ ಯಜಮಾನನಿಗಿಂತಲೂ ಮೊದಲು ತಾನೇ ನಾಶಹೊಂದುವನು.ಇದರ ಪರಿಹಾರಕ್ಕಾಗಿ ಹೀಗೆ ಮಾಡಬೇಕು. |

---

ಮನುಷ್ಯನಿಗೆ ಭ್ರಮೆ–ಪ್ರಮಾದ–ಆಲಸ್ಯಗಳ ಸಂಭವವುಂಟು. ಅಂತೆಯೇ ಅಧ್ವರ್ಯುವಿಗೂ ಇದು ಸಂಭವವಿರುವುದರಿಂದ ಅದರ ಪರಿಹಾರಕ್ಕಾಗಿ ಈ ಹೋಮವನ್ನು ಅನುಷ್ಠಿಸಬೇಕು. ಈ ಹೋಮಾನುಷ್ಠಾನವು ನಿತ್ಯಪ್ರಯೋಗವಾಗಿದೆ.

ಆಸನ್ಯಾನ್ಮಾ ಮಂತ್ರಾತ್ಪಾಹಿ ಕಸ್ಯಾಶ್ಚಿದಭಿಶಸ್ತ್ಯಾ ಇತಿ

ಪುರಾ ಪ್ರಾತರನುವಾಕಾಜ್ಜುಹುಯಾದಾತ್ಮನ ಏವ

ತದಧ್ವರ್ಯುಃ ಪುರಸ್ತಾಚ್ಛರ್ಮ ನಹ್ಯತೇಽನಾರ್ತ್ಯೈ

---

ಆಸನ್ಯಾತ್ । ಮಾ । ಮಂತ್ರಾತ್ । ಪಾಹಿ । ಕಸ್ಯಾಃ । ಚಿತ್ । ಅಭಿಶಸ್ತ್ಯಾ ಇತ್ಯಭಿ-

ಶಸ್ತ್ಯಾಃ । ಇತಿ । ಪುರಾ । ಪ್ರಾತರನುವಾಕಾದಿತಿ ಪ್ರಾತಃ-ಅನುವಾಕಾತ್ ।

ಜುಹುಯಾತ್। ಆತ್ಮನೇ । ಏವ । ತತ್ । ಅಧ್ವರ್ಯುಃ । ಪುರಸ್ತಾತ್ । ಶರ್ಮ ।

ನಹ್ಯತೇ। ಅನಾರ್ತ್ಯೈ।

---

| ಮಂತ್ರ | ವಿನಿಯೋಗ |
|---|---|
| ಆಸನ್ಯಾತ್...ಶಸ್ತ್ಯಾಃ। | ಆಗ್ನೀಧ್ರಾಗ್ನಿಯಲ್ಲಿ ಆಜ್ಯಹೋಮಕ್ಕಾಗಿ |

✦ಆಸನ್ಯಾತ್ ಮಂತ್ರಾತ್=ವಿರೋಧಿಗಳು ಹೇಳುವ ಆಭಿಚಾರಿಕಮಂತ್ರದಿಂದ; ಮಾ ಪಾಹಿ=ನನ್ನನ್ನು ರಕ್ಷಿಸು; ಕಸ್ಯಾಃ ಚಿತ್ ಅಭಿಶಸ್ತ್ಯಾಃ=ಬೇರೆ ಯಾವುದಾದರೂ ಅಪವಾದದಿಂದಲೂ/ಅಪರಾಧದಿಂದಲೂ [ಮಾ ಪಾಹಿ=ನನ್ನನ್ನು ಪೊರೆ]

---

| | |
|---|---|
| ಇತಿ ಪ್ರಾತರನುವಾಕಾತ್ ಪುರಾ | ಹೋತೃವು ಹೇಳುವ ಪ್ರಾತರನುವಾಕಶಸ್ತ್ರಕ್ಕಿಂತಲೂ ಮೊದಲು ಹೀಗೆಂದು |
| ಜುಹುಯಾತ್ | ಆಗ್ನೀಧ್ರಾಗ್ನಿಯಲ್ಲಿ ಆಜ್ಯಹೋಮವನ್ನು ಮಾಡಬೇಕು. [ವಿಧಿ] |
| ಅಧ್ವರ್ಯುಃ ಆತ್ಮನೇ ಏವ | ಅಧ್ವರ್ಯುವು ತನಗಾಗಿಯೇ |
| ತತ್ ಪುರಸ್ತಾತ್ ಶರ್ಮ ನಹ್ಯತೇ | ಆ ಹೋಮದಿಂದ ಮೊದಲೇ ಸುಖವನ್ನು ನೆಲೆಗೊಳಿಸುತ್ತಾನೆ. |
| ಅನಾರ್ತ್ಯೈ | ಇದು ಯಜಮಾನನ ಪೀಡಾಪರಿಹಾರಕ್ಕೂ ಕಾರಣವಾಗುತ್ತದೆ. |

**ಸಂವೇಶಾಯ ತ್ವೋಪವೇಶಾಯ ತ್ವಾ ಗಾಯತ್ರಿಯಾ ಸ್ತ್ರಿಷ್ಟುಭೋ ಜಗತ್ಯಾ ಅಭಿಭೂತ್ಯೈ ಸ್ವಾಹಾ ಪ್ರಾಣಾಪಾನೌ ಮೃತ್ಯೋರ್ಮಾ ಪಾತಂ**

---

ಸಂವೇಶಾಯೇತಿ ಸಂ–ವೇಶಾಯ । ತ್ವಾ । ಉಪವೇಶಾಯೇತ್ಯುಪ–ವೇಶಾಯ । ತ್ವಾ । ಗಾಯತ್ರಿಯಾಃ । ತ್ರಿಷ್ಟುಭಃ । ಜಗತ್ಯಾಃ । ಅಭಿಭೂತ್ಯಾ ಇತ್ಯಭಿ–ಭೂತ್ಯೈ । ಸ್ವಾಹಾ । ಪ್ರಾಣಾಪಾನಾವಿತಿ ಪ್ರಾಣ–ಅಪಾನೌ । ಮೃತ್ಯೋಃ । ಮಾ । ಪಾತಮ್ ।

---

### ಸ್ಪರ್ಧಿಸುವ ಯಜಮಾನರಿಗೆ ಸಂಬಂಧಿಸಿದ ನೈಮಿತ್ತಿಕವಾದ ಮತ್ತೊಂದು ಹೋಮದ ವಿಧಿ; ಮಂತ್ರ; ಅರ್ಥವಾದ

| ಮಂತ್ರ | ವಿನಿಯೋಗ |
|---|---|
| **ಸಂವೇಶಾಯ...ಸ್ವಾಹಾ॥ ಪ್ರಾಣಾಪಾನೌ...ಹಾಸಿಷ್ಟಮ್ ॥** | ಪ್ರತಿಸ್ಪರ್ಧಿಯು ಆಗ್ನೀಧ್ರೀಯ ಅಗ್ನಿಯಲ್ಲಿ ಹೋಮವನ್ನು ಮಾಡಲು |

---

✦[ಅಗ್ನಿಯೇ!]**ಸಂವೇಶಾಯ**=ಸುಖವಾಗಿ ನಿದ್ರಿಸುವುದಕ್ಕಾಗಿ; **ಉಪವೇಶಾಯ**= ಕುಳಿತುಕೊಳ್ಳುವುದಕ್ಕಾಗಿ; **ತ್ವಾ**=ನಿನ್ನನ್ನು[ಉದ್ದೇಶಿಸಿ ಹೋಮವನ್ನು ಮಾಡುತ್ತೇನೆ.] **ಗಾಯತ್ರಿಯಾಃ**=ಗಾಯತ್ರೀಛಂದಸ್ಸಿನಿಂದ ಸಂಭವಿಸುವ; **ಅಭಿಭೂತ್ಯೈ**=ಶತ್ರು ಪರಾಜಯಕ್ಕಾಗಿಯೂ; [**ಸ್ವಾಹಾ**=ಇದು ಹುತವಾಗಲಿ;] ✦**ತ್ರಿಷ್ಟುಭಃ ಅಭಿಭೂತ್ಯೈ** =ತ್ರಿಷ್ಟುಪ್ಛಂದಸ್ಸಿನಿಂದ ಸಂಭವಿಸುವ ಶತ್ರುಗಳ ಸೋಲಿಗಾಗಿ [(ಅಗ್ನಿಯಲ್ಲಿ) ಸ್ವಾಹಾ= ಹೋಮ ಮಾಡುತ್ತೇನೆ;] ✦**ಜಗತ್ಯಾಃ** ಅಭಿಭೂತ್ಯೈ=ಜಗತೀ ಛಂದಸ್ಸಿನಿಂದ ಲಬ್ಧವಾಗುವ ಶತ್ರುಗಳ ಸೋಲಿಗಾಗಿ; **ತ್ವಾ**=[ಅಗ್ನಿಯಾದ] ನಿನ್ನನ್ನು ಉದ್ದೇಶಿಸಿ; [ಆಜ್ಯವಾದ ನಿನ್ನನ್ನು ಹೋಮ ಮಾಡುತ್ತೇನೆ.]ಸ್ವಾಹಾ=ಇದು ಚೆನ್ನಾಗಿ ಹುತವಾಗಲಿ. ✦**ಪ್ರಾಣಾಪಾನೌ**=ಪ್ರಾಣಾಪಾನಗಳೇ! **ಮೃತ್ಯೋಃ ಮಾ ಪಾತಮ್**=ಮೃತ್ಯುವಿನಿಂದ ನನ್ನನ್ನು ರಕ್ಷಿಸಿರಿ [ಸ್ವಾಹಾ=ಹುತವಾಗಲಿ]

ಪ್ರಾಣಾಪಾನೌ ಮಾ ಮಾ ಹಾಸಿಷ್ಟಂ ದೇವತಾಸು ವಾ

ಏತೇ ಪ್ರಾಣಾಪಾನಯೋ[...ಪಾನಯೋಃ(೨೦)ವ್ಯಾಯ]

ವ್ಯಾಯಚ್ಛಂತೇ ಯೇಷಾಗ್ಂ ಸೋಮಸ್ಸಮೃಚ್ಛತೇ

---

ಪ್ರಾಣಾಪಾನಾವಿತಿ ಪ್ರಾಣ–ಅಪಾನೌ । ಮಾ । ಮಾ । ಹಾಸಿಷ್ಟಮ್ । ದೇವತಾಸು । ವೈ। ಏತೇ । ಪ್ರಾಣಾಪಾನಯೋರಿತಿ ಪ್ರಾಣ–ಅಪಾನಯೋಃ ।(೨೦)। ವ್ಯಾಯಚ್ಛಂತ ಇತಿ ವಿ–ಆಯಚ್ಛಂತೇ । ಯೇಷಾಮ್ । ಸೋಮಃ । ಸಮೃಚ್ಛತ ಇತಿ ಸಂ–ಋಚ್ಛತೇ ।

---

✦ಪ್ರಾಣಾಪಾನೌ=ಪ್ರಾಣಾಪಾನಗಳೇ! ಮಾ ಮಾ ಹಾಸಿಷ್ಟಮ್=ನನ್ನನ್ನು ಬಿಟ್ಟು ಹೋಗಬೇಡಿ; [ಸ್ವಾಹಾ=ಹುತವಾಗಲಿ]

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯೇಷಾಮ್ ಸೋಮಃ ಸಮೃಚ್ಛತೇ | ಯಾವ ಯಜಮಾನರ ಸೋಮಯಾಗವು ಮಾತ್ಸರ್ಯದಿಂದ ಕೂಡಿ ಪ್ರವೃತ್ತವಾಗುತ್ತದೆಯೋ |
| ಏತೇ ದೇವತಾಸು | ಈ ಯಜಮಾನರು ದೇವತೆಗಳ ವಿಷಯದಲ್ಲಿಯೂ |
| ಪ್ರಾಣಾಪಾನಯೋಃ ವ್ಯಾಯಚ್ಛಂತೇ ವೈ | ಪ್ರಾಣಾಪಾನಗಳ ವಿಷಯದಲ್ಲಿಯೂ ವಿವಾದವನ್ನುಂಟುಮಾಡುತ್ತಾರಷ್ಟೆ. |

---

ಸ್ಪರ್ಧಿಯಾದ ಯಜಮಾನರಿಗೆ ಸಂಬಂಧಿಸಿದ ಇದೊಂದು ನೈಮಿತ್ತಿಕಪ್ರಯೋಗ. ಪ್ರತಿಸ್ಪರ್ಧಿಯು ಯಜಮಾನನ ಛಂದಸ್ಸುಗಳನ್ನೂ ಸಂವೇಶ–ಉಪವೇಶಗಳನ್ನೂ ಹಾಳು ಮಾಡುತ್ತಾನೆ. ಮಾತ್ಸರ್ಯದಿಂದ ಸೋಮಯಾಗವನ್ನು ಅನುಷ್ಠಿಸುವ ಯಜಮಾನರಿಗೆ ಹಿಂದೆ ಹೇಳಿರುವ ಮಂತ್ರದ ಸ್ಥಾನದಲ್ಲಿ ಈ ಐದು ಮಂತ್ರಗಳನ್ನು ಶ್ರುತಿಯು ತಿಳಿಸುತ್ತಿದೆ.

ಸಂವೇಶಾಯ ತ್ವೋಪವೇಶಾಯ ತ್ವೇತ್ಯಾಹ ಛಂದಾಗ್ಂಸಿ

ವೈ ಸಂವೇಶ ಉಪವೇಶಶ್ಛಂದೋಭಿರೇವಾಸ್ಯ

ಛಂದಾಗ್ಂಸಿ ವೃಙ್ಕ್ತೇ

---

ಸಂವೇಶಾಯೇತಿ ಸಂ–ವೇಶಾಯ । ತ್ವಾ । ಉಪವೇಶಾಯೇತ್ಯುಪ–ವೇಶಾಯ । ತ್ವಾ । ಇತಿ। ಆಹ । ಛಂದಾಗ್ಂಸಿ । ವೈ । ಸಂವೇಶ ಇತಿ ಸಂ–ವೇಶಃ । ಉಪವೇಶ ಇತ್ಯುಪ–ವೇಶಃ । ಛಂದೋಭಿರಿತಿ ಛಂದಃ–ಭಿಃ । ಏವ । ಅಸ್ಯ । ಛಂದಾಗ್ಂಸಿ । ವೃಙ್ಕ್ತೇ ।

---

| | |
|---|---|
| ಸಂವೇಶಾಯ ತ್ವಾ<br>ಉಪವೇಶಾಯ ತ್ವಾ | 'ಸಂವೇಶಾಯ...ಸ್ವಾಹಾ' ಎಂಬ ಮೂರು* ಮಂತ್ರಗಳು |
| ಛಂದಾಗ್ಂಸಿ ವೈ<br>ಸಂವೇಶಃ ಉಪವೇಶಃ | ಛಂದಸ್ಸುಗಳು. ತಾನೇ ಸುಖವಾಗಿ ಮಲಗುವುದಕ್ಕೂ ಕುಳಿತಿರುವುದಕ್ಕೂ ಸಾಧನವಾಗಿರುತ್ತವೆ. |
| ಛಂದೋಭಿಃ ಏವ<br>ಅಸ್ಯ ಛಂದಾಗ್ಂಸಿ<br>ವೃಙ್ಕ್ತೇ | [ಈ ಹೋಮಗಳಿಂದ] ಛಂದಸ್ಸುಗಳಿಂದಲೇ ವಿರೋಧಿ ಯಜಮಾನನ ಛಂದಸ್ಸುಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. |
| ಇತಿ ಆಹ | ಎಂದು ಹೇಳುತ್ತವೆ. |

---

'ಸಂವೇಶಾಯ' ಮುಂತಾದ ಮೂರು ಮಂತ್ರಗಳೊಡನೆ 'ಪ್ರಾಣಾಪಾನೌ... ಹಾಸಿಷ್ಟಮ್' ಎಂಬ ಎರಡು ಮಂತ್ರಗಳೂ ಸೇರುತ್ತವೆ. ಈ ಐದು ಮಂತ್ರಗಳಿಂದ ಪ್ರಾತರನುವಾಕಕ್ಕೆ ಮೊದಲು ಆಗ್ನೀಧ್ರೀಯಾಗ್ನಿಯಲ್ಲಿ ಹೋಮ ಮಾಡಬೇಕು.

---

*೧)ಸಂವೇಶಾಯ ತ್ವೋಪವೇಶಾಯ ತ್ವಾ ಗಾಯತ್ರಿಯಾ ಅಭಿಭೂತ್ಯೈ ಸ್ವಾಹಾ ॥

೨)ಸಂವೇಶಾಯ ತ್ವೋಪವೇಶಾಯ ತ್ವಾ ತ್ರಿಷ್ಟುಭೋಽಭಿಭೂತ್ಯೈ ಸ್ವಾಹಾ ॥

೩)ಸಂವೇಶಾಯ ತ್ವೋಪವೇಶಾಯ ತ್ವಾ ಜಗತ್ಯಾ ಅಭಿಭೂತ್ಯೈ ಸ್ವಾಹಾ॥

ಪ್ರೇತಿವಂತ್ಯಾಜ್ಯಾನಿ ಭವನ್ತ್ಯಭಿಜಿತ್ಯೈ ಮರುತ್ವತೀಃ

ಪ್ರತಿಪದೋ ವಿಜಿತ್ಯಾ ಉಭೇ ಬೃಹದ್ರಥಂತರೇ ಭವತ

---

ಪ್ರೇತಿವಂತೀತಿ ಪ್ರೇತಿ-ವಂತಿ । ಆಜ್ಯಾನಿ । ಭವಂತಿ । ಅಭಿಜಿತ್ಯಾ ಇತ್ಯಭಿ-ಜಿತ್ಯೈ । ಮರುತ್ವತೀಃ । ಪ್ರತಿಪದ ಇತಿ ಪ್ರತಿ-ಪದಃ । ವಿಜಿತ್ಯಾ ಇತಿ ವಿ-ಜಿತ್ಯೈ । ಉಭೇ ಇತಿ । ಬೃಹದ್ರಥಂತರೇ ಇತಿ ಬೃಹತ್-ರಥಂತರೇ । ಭವತಃ ।

---

### ಸ್ತೋತ್ರಗಳಲ್ಲಿ ವಿಶೇಷವಿಧಿಗಳು

| | |
|---|---|
| ಆಜ್ಯಾನಿ ಪ್ರೇತಿವಂತಿ ಭವಂತಿ | ಆಜ್ಯಸ್ತೋತ್ರಗಳು 'ಪ್ರ ವೋ ವಾಜಾ' ಎಂಬ 'ಪ್ರ' ಶಬ್ದವುಳ್ಳ ಋಕ್ಕುಗಳನ್ನು ಹೊಂದಿದವುಗಳಾಗಿರಬೇಕು. |
| ಅಭಿಜಿತ್ಯೈ | ಇದು ಪ್ರತಿಸ್ಪರ್ಧಿಯ ಮೇಲೆ ಜಯಕ್ಕೆ ಕಾರಣವಾಗುತ್ತದೆ. |
| ಮರುತ್ವತೀಃ ಪ್ರತಿಪದಃ | 'ಮರುತ್ವಂತಮ್' ಮೊದಲಾದ ಋಕ್ಕುಗಳು ಸಾಮಗಳ ಆರಂಭದ ಋಕ್ಕುಗಳಾಗುತ್ತವೆ. |
| ವಿಜಿತ್ಯೈ | ಇದು ವಿಜಯಕ್ಕೆ ಕಾರಣವಾಗುತ್ತದೆ. |

ಬೃಹದ್ರಥಂತರಗಳ ಸಮುಚ್ಚಯವಿಧಿ; ಬಗೆ ಬಗೆಯಾಗಿ ಆದರ ಪ್ರಶಂಸೆ.

| | |
|---|---|
| ಉಭೇ ಬೃಹದ್ರಥಂತರೇ ಭವತಃ | ಈ ಯಾಗದಲ್ಲಿ ಬೃಹತ್-ರಥಂತರಗಳೆಂಬ ಎರಡು ಸಾಮಗಳನ್ನೂ ಹೇಳಬೇಕು [ವಿಧಿ] |

---

ಅಧ್ವರ್ಯುವಿನ ಕರ್ತವ್ಯಗಳಂತೆಯೇ ಉದ್ಗಾತೃವಿನ ಕರ್ತವ್ಯವನ್ನೂ ಶ್ರುತಿಯು ತಿಳಿಸುತ್ತಿದೆ. ಆಜ್ಯಸ್ತೋತ್ರಗಳು'ಪ್ರೇತಿವಂತಿ'ಗಳಾಗಿರಬೇಕು.

ಆಜ್ಯಸ್ತೋತ್ರಗಳು ಈ ರೀತಿಯ ಸೋಮಯಾಗದಲ್ಲಿ'ಪ್ರೇತಿವಂತಿ'ಗಳಾಗಿರಬೇಕೆಂದೂ'ಏತಿವಂತಿ'ಗಳಾಗಿರಬೇಕೆಂದೂ ಬೇರೆ ಬೇರೆಯ ಕಡೆಗಳಲ್ಲಿ ಇದೆ.

ಇಯಂ ವಾವ ರಥಂತರಮಸೌ ಬೃಹದಾಭ್ಯಾಮೇವೈ

ನಮಂತರೇತ್ಯದ್ಯ ವಾವ ರಥಂತರಗ್ಗ್ಂ ಶ್ವೋ

ಬೃಹದದ್ಯಾಶ್ವಾದೇವೈನಮಂತರೇತಿ

---

ಇಯಮ್ । ವಾವ । ರಥಂತರಮಿತಿ ರಥಂ–ತರಮ್ । ಅಸೌ । ಬೃಹತ್ । ಆಭ್ಯಾಮ್ । ಏವ । ಏನಮ್ । ಅಂತಃ । ಏತಿ । ಅದ್ಯ । ವಾವ । ರಥಂತರಮಿತಿ ರಥಂ–ತರಮ್ । ಶ್ವಃ । ಬೃಹತ್ । ಅದ್ಯಾಶ್ವಾದಿತ್ಯದ್ಯ–ಶ್ವಾತ್ । ಏವ । ಏನಮ್ । ಅಂತಃ । ಏತಿ ।

---

| | |
|---|---|
| ಇಯಮ್ ವಾವ ರಥಂತರಮ್ | ಈ ಭೂಲೋಕವು ರಥಂತರರೂಪವಾಗಿದೆ. |
| ಅಸೌ ಬೃಹತ್ | ಈ ದ್ಯುಲೋಕವು ಬೃಹತ್ಸಾಮರೂಪವಾಗಿದೆ. |
| ಆಭ್ಯಾಮ್ ಏವ ಏನಮ್ ಅಂತಃ ಏತಿ | ಈ ಯಜಮಾನನು ತನ್ನ ಈ ಸ್ಪರ್ಧಿಯನ್ನು ಎರಡು ಲೋಕಗಳಿಂದಲೂ ಭ್ರಷ್ಟನನ್ನಾಗಿ ಮಾಡುತ್ತಾನೆ. |
| ಅದ್ಯ ವಾವ ರಥಂತರಮ್ | ಈ ದಿನವು ರಥಂತರಸ್ವರೂಪ. |
| ಶ್ವಃ ಬೃಹತ್ | ನಾಳೆಯ ದಿನವು ಬೃಹತ್ಸಾಮರೂಪವಾಗಿದೆ. |
| ಅದ್ಯಾಶ್ವಾತ್ ಏವ ಏನಮ್ ಅಂತಃ ಏತಿ | [ಈ ಎರಡು ಸಾಮಗಳ ಪ್ರಯೋಗದಿಂದ ಯಜಮಾನನು ತನ್ನ] ಸ್ಪರ್ಧಿಯನ್ನು ಇವತ್ತು ನಾಳೆಗಳೆರಡರ ಶ್ರೇಯಸ್ಸಿನಿಂದ ದೂರ ಮಾಡುತ್ತಾನೆ. |

---

'ಅಗ್ನ ಆಯಾಹಿ' ಎಂಬ ಋಕ್ಕುಗಳಿಂದ ಕೂಡಿರುವ ಆಜ್ಯಸ್ತೋತ್ರಗಳು 'ಏತಿವಂತಿ' ಎನಿಸುತ್ತವೆ. 'ಪ್ರ ವೋ ವಾಜಾ' ಎಂಬ ಋಕ್ಕುಗಳಿಂದ ಕೂಡಿರುವ ಆಜ್ಯಸ್ತೋತ್ರಗಳು 'ಪ್ರೇತಿವಂತಿ' ಎನಿಸುತ್ತವೆ.ಇವೆರಡನ್ನೂ ಪ್ರ–ಏತಿವಂತಿ ಎಂದು ಸಂಗ್ರಹಿಸಬಹುದು.

# ಭೂತಮ್ [(೨೧)] ವಾವ ರಥಂತರಂ

# ಭವಿಷ್ಯದ್ಬೃಹದ್ಭೂತಾಚ್ಚೈವೈನಂ ಭವಿಷ್ಯತಶ್ಚಾಂತರೇತಿ

# ಪರಿಮಿತಂ ವಾವ ರಥಂತರಮಪರಿಮಿತಂ ಬೃಹ-

---

ಭೂತಮ್ । (೨೧) । ವಾವ । ರಥಂತರಮಿತಿ ರಥಂ-ತರಮ್ । ಭವಿಷ್ಯತ್ । ಬೃಹತ್ । ಭೂತಾತ್ । ಚ । ಏವ । ಏನಮ್ । ಭವಿಷ್ಯತಃ । ಚ । ಅಂತಃ । ಏತಿ । ಪರಿಮಿತಮಿತಿ ಪರಿ-ಮಿತಮ್ । ವಾವ । ರಥಂತರಮಿತಿ ರಥಂ-ತರಮ್ । ಅಪರಿಮಿತಮಿತ್ಯಪರಿ-ಮಿತಮ್ । ಬೃಹತ್ ।

---

| | |
|---|---|
| ಭೂತಮ್ ವಾವ ರಥಂತರಮ್ | ಭೂತಕಾಲವು ರಥಂತರಸ್ವರೂಪವಾಗಿದೆ. |
| ಭವಿಷ್ಯತ್ ಬೃಹತ್ | ಮುಂದಾಗುವುದು (ಭವಿಷ್ಯತ್ಕಾಲವು) ಬೃಹತ್ಸ್ವರೂಪ. |
| ಭೂತಾತ್ ಚ ಏವ ಏನಮ್ ಭವಿಷ್ಯತಃ ಚ ಅಂತಃ ಏತಿ | [ಯಜಮಾನನು ಈ ಎರಡು ಸಾಮಗಳ ಪ್ರಯೋಗದಿಂದ ತನ್ನ] ಸ್ಪರ್ಧಿಯನ್ನು ಭೂತ-ಭವಿಷ್ಯತ್ಕಾಲಗಳೆರಡರ ಶ್ರೇಯಸ್ಸಿನಿಂದಲೂ ಭ್ರಷ್ಟನಾಗುವಂತೆ ಮಾಡುತ್ತಾನೆ. |
| ಪರಿಮಿತಮ್ ವಾವ ರಥಂತರಮ್ | [ಈ ಎರಡು ಸಾಮಗಳಲ್ಲಿ] ರಥಂತರವು ಪರಿಮಿತಶ್ರೇಯೋರೂಪವಾಗಿದೆ. |
| ಅಪರಿಮಿತಮ್ ಬೃಹತ್ | ಬೃಹತ್ಸಾಮವು ಅಪರಿಮಿತಶ್ರೇಯೋರೂಪವಾಗಿದೆ. |

---

ಈ ಎರಡು ಆಜ್ಯಸ್ತೋತ್ರಗಳಿಗೆ ಸಮುಚ್ಚಯವಿದೆ. ಇವುಗಳಿಗೆ ವಿಕಲ್ಪವಿಲ್ಲ. ಈ ಆಜ್ಯಸ್ತೋತ್ರಗಳ ಪಾಠದಿಂದ ಪ್ರತಿಸ್ಪರ್ಧಿಗೆ ಪರಾಜಯವೂ ತನಗೆ ಜಯವೂ ಲಭಿಸುತ್ತದೆ.

ಈ ಪ್ರಯೋಗದಲ್ಲಿ ಬೃಹತ್ಸಾಮ-ರಥಂತರಸಾಮಗಳೆರಡೂ ಇರುವುದರಿಂದ

ತ್ಪರಿಮಿತಾಚ್ಚೈವೈನಮಪರಿಮಿತಾಚ್ಚಾಂತರೇತಿ ವಿಶ್ವಾಮಿತ್ರ

ಜಮದಗ್ನೀ ವಸಿಷ್ಠೇನಾಸ್ಪರ್ಧೇತಾಗ್ಂ ಸ

ಏತಜ್ಜಮದಗ್ನಿರ್ವಿಹವ್ಯಮಪಶ್ಯತ್ತೇನ ವೈ ಸ ವಸಿಷ್ಠ-

---

ಪರಿಮಿತಾದಿತಿ ಪರಿ-ಮಿತಾತ್ । ಚ । ಏವ । ಏನಮ್ । ಅಪರಿಮಿತಾದಿತ್ಯಪರಿ-

ಮಿತಾತ್ । ಚ । ಅಂತಃ । ಏತಿ । ವಿಶ್ವಾಮಿತ್ರಜಮದಗ್ನೀ ಇತಿ ವಿಶ್ವಾಮಿತ್ರ-

ಜಮದಗ್ನೀ । ವಸಿಷ್ಠೇನ । ಅಸ್ಪರ್ಧೇತಾಮ್ । ಸಃ । ಏತತ್ । ಜಮದಗ್ನಿಃ ।

ವಿಹವ್ಯಮಿತಿ ವಿ-ಹವ್ಯಮ್ । ಅಪಶ್ಯತ್ । ತೇನ । ವೈ । ಸಃ । ವಸಿಷ್ಠಸ್ಯ ।

---

| | |
|---|---|
| ಪರಿಮಿತಾತ್ ಚ<br>ಅಪರಿಮಿತಾತ್ ಚ ಏನಮ್<br>ಅಂತಃ ಏತಿ ಏವ | [ಯಜಮಾನನು ಈ ಎರಡು ಸಾಮಗಳ ಪ್ರಯೋಗದಿಂದ] ತನ್ನ ಸ್ಪರ್ಧಿಯನ್ನು ಪರಿಮಿತಶ್ರೇಯೋರೂಪದಿಂದಲೂ ಅಪರಿಮಿತಶ್ರೇಯೋರೂಪದಿಂದಲೂ ಭ್ರಂಶಗೊಳಿಸುತ್ತಾನೆ. |

**ಈ ಪ್ರಯೋಗದಲ್ಲಿ ಹೋತೃವಿಗೆ ಶಸ್ತ್ರವಿಶೇಷವಿಧಿ; ಪ್ರಶಂಸೆ**

| | |
|---|---|
| ವಿಶ್ವಾಮಿತ್ರಜಮದಗ್ನೀ<br>ವಸಿಷ್ಠೇನ ಅಸ್ಪರ್ಧೇತಾಮ್ | ವಿಶ್ವಾಮಿತ್ರ-ಜಮದಗ್ನಿ ಮಹರ್ಷಿಗಳು ವಸಿಷ್ಠರೊಡನೆ ಸ್ಪರ್ಧಿಸಿದರು. |
| ಸಃ ಜಮದಗ್ನಿಃ ಏತತ್<br>ವಿಹವ್ಯಮ್ ಅಪಶ್ಯತ್ | ಆಗ ಆ ಜಮದಗ್ನಿಯು *ವಿಹವ್ಯಶಸ್ತ್ರವನ್ನು ವಸಿಷ್ಠರನ್ನು ಮೀರಿಸುವ ಉಪಾಯವನ್ನಾಗಿ ತಿಳಿದನು. |
| ತೇನ ವೈ ಸಃ ವಸಿಷ್ಠಸ್ಯ | ಆ ವಿಹವ್ಯಶಸ್ತ್ರದಿಂದಲೇ ಆ ಜಮದಗ್ನಿಯು ವಸಿಷ್ಠಮಹರ್ಷಿಯ |

---

* 'ಮಮಾಗ್ನೇ ವರ್ಚೋ ವಿಹವೇಷ್ವಸ್ತು' ಮೊದಲಾದ ಮಂತ್ರಗಳು.

ಸ್ಯೇಂದ್ರಿಯಂ ವೀರ್ಯಮವೃಙ್ಕ್ತ ಯದ್ವಿಹವ್ಯಗ್ಂ ಶಸ್ಯತ

ಇಂದ್ರಿಯಮೇವ ತದ್ವೀರ್ಯಂ ಯಜಮಾನೋ

ಭ್ರಾತೃವ್ಯಸ್ಯ ವೃಙ್ಕ್ತೇ ಯಸ್ಯ

---

ಇಂದ್ರಿಯಮ್ । ವೀರ್ಯಮ್ । ಅವೃಙ್ಕ್ತ । ಯತ್ । ವಿಹವ್ಯಮಿತಿ ವಿ-ಹವ್ಯಮ್ ।

ಶಸ್ಯತೇ । ಇಂದ್ರಿಯಮ್ । ಏವ । ತತ್ । ವೀರ್ಯಮ್ । ಯಜಮಾನಃ । ಭ್ರಾತೃವ್ಯಸ್ಯ ।

ವೃಙ್ಕ್ತೇ । ಯಸ್ಯ ।

---

| | |
|---|---|
| ಇಂದ್ರಿಯಮ್ ವೀರ್ಯಮ್ ಅವೃಙ್ಕ್ತ | ಇಂದ್ರಿಯಸಾಮರ್ಥ್ಯವನ್ನೂ ತಪೋವೀರ್ಯವನ್ನೂ ನಾಶಗೊಳಿಸಿದನು. |
| ಯತ್ ವಿಹವ್ಯಮ್ ಶಸ್ಯತೇ | [ಆ ನೋ ಭದ್ರಾಃ ಎಂಬ ಶಸ್ತ್ರಕ್ಕೆ] ಪ್ರತಿಯಾಗಿ ವಿಹವ್ಯಶಸ್ತ್ರವನ್ನು ಉಪಯೋಗಿಸುವುದೆಂಬುದು ಯಾವುದಿದೆಯೋ |
| ತತ್ ಯಜಮಾನಃ ಭ್ರಾತೃವ್ಯಸ್ಯ ಇಂದ್ರಿಯಮ್ ವೀರ್ಯಮ್ ಏವ ವೃಙ್ಕ್ತೇ | [ಅದರಿಂದ] ಯಜಮಾನನು ಸ್ಪರ್ಧಿಯ ಇಂದ್ರಿಯಶಕ್ತಿಯನ್ನೂ ತಪೋಬಲವನ್ನೂ ನಾಶಪಡಿಸುತ್ತಾನೆ. ತನ್ನದಾಗಿ ಮಾಡಿಕೊಳ್ಳುತ್ತಾನೆ. |

**ಈ ಪ್ರಯೋಗದಲ್ಲಿ ಯಜಮಾನನ ಕರ್ತವ್ಯವಿಶೇಷ; ಅರ್ಥವಾದ**

| | |
|---|---|
| ಯಸ್ಯ ಯಜ್ಞಕ್ರತವಃ | ಸ್ಪರ್ಧಿಸುತ್ತಿರುವ ಯಾವ ಯಜಮಾನನ *ಯಜ್ಞಕ್ರತುಗಳು |

---

* ದೇವತೆಯನ್ನು ಉದ್ದೇಶಿಸಿ ದ್ರವ್ಯತ್ಯಾಗ ಮಾಡುವುದು 'ಯಜ್ಞ'ವೆನಿಸುತ್ತದೆ. ಆ ಯಜ್ಞವು ಅಂಗೋಪಾಂಗ ಸಹಿತವಾಗಿದ್ದರೆ 'ಕ್ರತು' ವೆನಿಸುತ್ತದೆ. ಒಂದನ್ನೇ ಕ್ರತುವೆಂದೂ ಯಜ್ಞವೆಂದೂ ಹೇಳಬಹುದು. 'ಆಮ್ರವೃಕ್ಷ' [ಮಾವಿನ ಮರ] ಎಂಬಲ್ಲಿ ಮಾವೆಂಬ ವಿಶೇಷಶಬ್ದದಿಂದಲೂ ಮರವೆಂಬ ಸಾಮಾನ್ಯಶಬ್ದದಿಂದಲೂ ತಿಳಿಸುವಂತೆ 'ಯಜ್ಞಕ್ರತು' ಎಂದು ಶ್ರುತಿಯು ಹೇಳುತ್ತಿದೆ.

ಭೂಯಾಗ್ಂಸೋ ಯಜ್ಞಕ್ರತವ ಇತ್ಯಾಹುಃ ಸ ದೇವತಾ ವೃಙ್ಕ್ತೇ ಇತಿ ಯದ್ಯಗ್ನಿಷ್ಟೋಮಸ್ಸೋಮಃ ಪರಸ್ತಾತ್ಸ್ಯಾದುಕ್ಥ್ಯಂ ಕುರ್ವೀತ ಯದ್ಯುಕ್ಥ್ಯಸ್ಸ್ಯಾದತಿರಾತ್ರಂ ಕುರ್ವೀತ

---

ಭೂಯಾಗ್ಂಸಃ । ಯಜ್ಞಕ್ರತವ ಇತಿ ಯಜ್ಞ-ಕ್ರತವಃ । ಇತಿ । ಆಹುಃ । ಸಃ । ದೇವತಾಃ । ವೃಙ್ಕ್ತೇ । ಇತಿ । ಯದಿ । ಅಗ್ನಿಷ್ಟೋಮ ಇತ್ಯಗ್ನಿ-ಸ್ತೋಮಃ । ಸೋಮಃ । ಪರಸ್ತಾತ್ । ಸ್ಯಾತ್ । ಉಕ್ಥ್ಯಮ್ । ಕುರ್ವೀತ । ಯದಿ । ಉಕ್ಥ್ಯಃ । ಸ್ಯಾತ್ । ಅತಿರಾತ್ರಮಿತ್ಯತಿ-ರಾತ್ರಮ್ । ಕುರ್ವೀತ ।

---

| | |
|---|---|
| ಭೂಯಾಗ್ಂಸಃ ಸಃ ದೇವತಾಃ ವೃಙ್ಕ್ತೇ ಇತಿ ಆಹುಃ | ಅಧಿಕವಾಗಿವೆಯೋ ಅವನು ಪ್ರತಿಸ್ಪರ್ಧಿಯ ದೇವತೆಗಳನ್ನು ಫಲಪ್ರದಾನಶಕ್ತಿಹೀನರನ್ನಾಗಿ ಮಾಡುತ್ತಾನೆಂದು ಬಲ್ಲವರು ಹೇಳುತ್ತಾರೆ. |
| ಯದಿ ಅಗ್ನಿಷ್ಟೋಮಃ ಸೋಮಃ ಪರಸ್ತಾತ್ ಸ್ಯಾತ್ ಉಕ್ಥ್ಯಮ್ ಕುರ್ವೀತ | [ಆದುದರಿಂದ] ಪ್ರತಿಸ್ಪರ್ಧಿಯ ದ್ವಾದಶಸ್ತೋತ್ರವುಳ್ಳ ಅಗ್ನಿಷ್ಟೋಮಸೋಮಯಾಗವು ಮುಗಿದರೆ. ಪಂಚದಶಸ್ತೋತ್ರವುಳ್ಳ ಉಕ್ಥ್ಯಸೋಮಯಾಗವನ್ನು ಮಾಡಬೇಕು. |
| ಯದಿ ಉಕ್ಥ್ಯಃ ಸ್ಯಾತ್ ಅತಿರಾತ್ರಮ್ ಕುರ್ವೀತ | ಸ್ಪರ್ಧಿಯ ಸೋಮಯಾಗವು ಉಕ್ಥ್ಯವಾಗಿದ್ದರೆ, ಇಪ್ಪತ್ತೊಂಬತ್ತು ಸ್ತೋತ್ರಗಳುಳ್ಳ ಅತಿರಾತ್ರ ಸೋಮಯಾಗವನ್ನು ಅನುಷ್ಠಿಸಬೇಕು. |

---

ಯಜಮಾನನು ತನ್ನ ಸ್ಪರ್ಧಿಯನ್ನು ಸರ್ವಪ್ರಕಾರಗಳಿಂದಲೂ ಮೀರಿಸುತ್ತಾನೆ ಎಂದು ಆಜ್ಯಸ್ತೋತ್ರಗಳ ಪ್ರಶಂಸೆಯು ಇದೆ. ಇಲ್ಲಿ ಬೃಹತ್-ರಥಂತರಸಾಮಗಳ ಸಮುಚ್ಚಯ ವಿಧಿಯು ಇದೆ.

ಈ ಪ್ರಯೋಗದಲ್ಲಿ ಮೊದಲು ಅಧ್ವರ್ಯು-ಉದ್ಗಾತೃಗಳ ಕರ್ತವ್ಯವಿಶೇಷವನ್ನು

ಯಜ್ಞಕ್ರತುಭಿರೇವಾಸ್ಯ ದೇವತಾ ವೃಙ್ಕ್ತೇ

ವಸೀಯಾನ್ಭವತಿ ॥೨೨-7॥

[ಪ್ರಾಣಾಪಾನಯೋರ್ಭೂರ್ತಂ ವೃಙ್ಕ್ತೇಽಷ್ಟಾವಿಗ್ಂಶತಿಶ್ಚ ॥]

---

ಯಜ್ಞಕ್ರತುಭಿರಿತಿ ಯಜ್ಞಕ್ರತು-ಭಿಃ । ಏವ । ಅಸ್ಯ । ದೇವತಾಃ । ವೃಙ್ಕ್ತೇ ।

ವಸೀಯಾನ್ । ಭವತಿ ॥೨೨॥

---

| | |
|---|---|
| ಅಸ್ಯ ದೇವತಾಃ | [ಹೀಗೆ ಮಾಡುವುದರಿಂದ] ಅಧಿಕವಾದ |
| ಯಜ್ಞಕ್ರತುಭಿಃ ಏವ | ಯಜ್ಞಕ್ರತುಗಳಿಂದ ಪ್ರತಿಸ್ಪರ್ಧಿಯ ಯಾಗ |
| ವೃಙ್ಕ್ತೇ | ದೇವತೆಗಳನ್ನು ಶಕ್ತಿಹೀನರನ್ನಾಗಿಸುತ್ತಾನೆ. |
| ವಸೀಯಾನ್ ಭವತಿ | ತಾನು ಶ್ರೇಷ್ಠನೂ ಧನವಂತನೂ ಆಗುತ್ತಾನೆ. |

---

ಹೇಳಿದ್ದಾಯಿತು. ಈಗ ಹೋತೃವಿನ ಕರ್ತವ್ಯವಿಶೇಷವನ್ನು ಹೇಳಲಾಗಿದೆ. ಹೋತೃವು ನಿತ್ಯಪ್ರಯೋಗದಲ್ಲಿ ಹೇಳುವ ಶಸ್ತ್ರಕ್ಕೆ ಬದಲಾಗಿ ಬೇರೆಯ ಶಸ್ತ್ರವನ್ನು ಹೇಳಬೇಕು.

ಈ ವಿಷಯದಲ್ಲಿಯೇ ಬೇರೊಂದೆಡೆ 'ಸಜನೀಯಮ್ ಶಸ್ಯಮ್, ವಿಹವ್ಯಮ್ ಶಸ್ಯಮ್, ಅಗಸ್ತ್ಯಸ್ಯ ಕಯಾಶುಭೀಯಮ್ ಶಸ್ಯಮ್'ಎಂದು ಹೇಳಿದೆ.

ಪರಸ್ಪರ ಸ್ಪರ್ಧೆಯಿಂದ ಯಾಗಾನುಷ್ಠಾನದ ಸಮಯದಲ್ಲಿ ಯಜಮಾನನ ಕರ್ತವ್ಯ ವಿಶೇಷವು ಇದೆ. ಸ್ಪರ್ಧಿಯು ಅನುಷ್ಠಿಸುತ್ತಿರುವ ಕ್ರತುವಿಗಿಂತಲೂ ಉತ್ತರೋತ್ತರ ಕ್ರತುಗಳನ್ನು ಅನುಷ್ಠಿಸಿ ತಾನು ಶ್ರೇಷ್ಠನೂ, ಧನವಂತನೂ ಆಗುತ್ತಾನೆ. ಅಗ್ನಿಷ್ಟೋಮ-ಉಕ್ಥ್ಯ-ಅತಿರಾತ್ರಗಳು ಉತ್ತರೋತ್ತರ ಹೆಚ್ಚಿನ ಸ್ತೋತ್ರಗಳುಳ್ಳವುಗಳಾಗಿವೆ.

---

## ವಿನಿಯೋಗಸಂಗ್ರಹ

[1]ಆಸನ್ಯೇತಿ ಪುರಾ ಹೋಮಃ ಸ್ಯಾತ್ ಪ್ರಾತರನುವಾಕತಃ ।
ಸ್ಪರ್ಧಯಾ ಸುನ್ವತಃ ಸೋಮಂ [2-6]ಸಂವೇಶಾಹುತಿಪಂಚಕಮ್ ॥
ಪ್ರಶಬ್ದಯುಕ್ತಾನ್ಯಾಜ್ಯಾನಿ ಮರುತ್ವತ್ಯ ಉಪಕ್ರಮೇ ।
ಬೃಹದ್ರಥಂತರೇ ದ್ವೇ ಚ ವಿಹವ್ಯಂ ಚ ನಿಮಿತ್ತತಃ ॥
ನಿತ್ಯಪ್ರಯೋಗಾದೇತಾವಾನ್ ವಿಶೇಷಃ ಸ್ಪರ್ಧಯಾ ಭವೇತ್ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-6

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) ಬೃಹತ್ಸಾಮ-ರಥಂತರಸಾಮಗಳಿಗೆ ಸಮುಚ್ಚಯವೇ ? ವಿಕಲ್ಪವೇ ?**

[ಜೈ.ಸೂ.10.6.11.12]

'ಸಂಸವ ಉಭೇ ಕುರ್ಯಾತ್' ಎಂಬ ವಚನದಂತೆ ಬೃಹತ್ಸಾಮ-ರಥಂತರ ಸಾಮಗಳೆರಡನ್ನೂ ಹೇಳಿರುವುದರಿಂದ ಇವೆರಡಕ್ಕೂ ಸಮುಚ್ಚಯವೇ? ಅಥವಾ ವಿಕಲ್ಪವೇ? ಇದು ಇಲ್ಲಿನ ಸಂಶಯ.

ಪ್ರಯೋಗಭೇದದಿಂದ ಎರಡನ್ನೂ ಮಾಡಬಹುದಾದುದರಿಂದ ವಿಕಲ್ಪ. ಇದು ಇಲ್ಲಿನ ಪೂರ್ವಪಕ್ಷ.

ನಿತ್ಯಪ್ರಯೋಗದಲ್ಲಿಯೇ ವಿಕಲ್ಪವಿರುವುದರಿಂದ ಇಲ್ಲಿ ಹೇಳಿರುವ ವಚನವು ವ್ಯರ್ಥವಾಗುತ್ತದೆ. ಆದುದರಿಂದ ಇಲ್ಲಿ ಎರಡು ಸಾಮಗಳಿಗೂ ಸಮುಚ್ಚಯವೇ. ಇದು ಇಲ್ಲಿನ ಸಿದ್ಧಾಂತ.

## ॥ ಅಷ್ಟಮೋಽನುವಾಕಃ ॥

ನಿಗ್ರಾಭ್ಯಾಃ ಸ್ಥ ದೇವಶ್ರುತ ಆಯುರ್ಮೇ ತರ್ಪಯತ

ಪ್ರಾಣಂ ಮೇ ತರ್ಪಯತಾಪಾನಂ ಮೇ ತರ್ಪಯತ

---

ನಿಗ್ರಾಭ್ಯಾ ಇತಿ ನಿ-ಗ್ರಾಭ್ಯಾಃ । ಸ್ಥ । ದೇವಶ್ರುತ ಇತಿ ದೇವ-ಶ್ರುತಃ । ಆಯುಃ ।

ಮೇ । ತರ್ಪಯತ । ಪ್ರಾಣಮಿತಿ ಪ್ರ-ಅನಮ್ । ಮೇ । ತರ್ಪಯತ ।

ಅಪಾನಮಿತ್ಯಪ-ಅನಮ್ । ಮೇ । ತರ್ಪಯತ ।

---

ಏಳನೆಯ ಅನುವಾಕದಲ್ಲಿ ಸ್ಪರ್ಧಿಸುವವನಿಗಾಗಿ ಕೆಲವು ವಿಶೇಷವಿಧಿಗಳು ಹೇಳಲ್ಪಟ್ಟವು. ಈ ಎಂಟನೆಯ ಅನುವಾಕದಲ್ಲಿ ಉಪಾಂಶುಗ್ರಹಾಭಿಷವಕ್ಕೆ ಸಂಬಂಧಿಸಿದ ಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ನಿಗ್ರಾಭ್ಯಾಃ ಸ್ಥ...ವಿತೃಷನ್ ॥ | ಯಜಮಾನನು ನಿಗ್ರಾಭ್ಯಗಳನ್ನು ಪ್ರಾರ್ಥಿಸಲು |

---

✦ ನಿಗ್ರಾಭ್ಯಾಃ ಸ್ಥ=ಎಲೈ! ಜಲಗಳೇ! ನೀವು [ಮಂತ್ರಗಳಿಂದ ಚೆನ್ನಾಗಿ ತುಂಬಲ್ಪಡುವ] ನಿಗ್ರಾಭ್ಯಗಳಾಗಿರುತ್ತೀರಿ; ದೇವಶ್ರುತಃ=ದೇವತೆಗಳಲ್ಲಿಯೂ ಪ್ರಸಿದ್ಧರಾಗಿರುತ್ತೀರಿ; ಮೇ=ನನ್ನ; ಆಯುಃ ತರ್ಪಯತ=ಆಯುಸ್ಸನ್ನು ವೃದ್ಧಿಗೊಳಿಸಿರಿ; ಪ್ರಾಣಮ್ ಮೇ ತರ್ಪಯತ=ನನ್ನ ಪ್ರಾಣವನ್ನು ತೃಪ್ತಿಪಡಿಸಿರಿ. ಮೇ ಅಪಾನಮ್ ತರ್ಪಯತ=ನನ್ನ ಅಪಾನವಾಯುವನ್ನು ತುಷ್ಟಿಗೊಳಿಸಿರಿ.

---

ಹೋತೃಚಮಸದಲ್ಲಿ ವಸತೀವರಿಜಲವನ್ನು ತುಂಬುವಾಗ 'ಹೃದೇ ತ್ವಾ ಮನಸೇ ತ್ವಾ' ಮೊದಲಾದ ಮಂತ್ರಗಳನ್ನು ಹೇಳಿ ಗ್ರಹಿಸಲ್ಪಡುವ ನಿಗ್ರಾಭ್ಯಗಳನ್ನು ಯಜಮಾನನು ಪ್ರಾರ್ಥಿಸುತ್ತಾನೆ. ಆಗ ಈ ಮಂತ್ರಗಳನ್ನು ಹೇಳುತ್ತಾನೆ. ಮಂತ್ರಗಳಿಂದ ಚೆನ್ನಾಗಿ

ವ್ಯಾನಂ ಮೇ ತರ್ಪಯತ ಚಕ್ಷುರ್ಮೇ ತರ್ಪಯತ ಶ್ರೋತ್ರಂ ಮೇ ತರ್ಪಯತ ಮನೋ ಮೇ ತರ್ಪಯತ ವಾಚಂ ಮೇ ತರ್ಪಯತಾತ್ಮಾನಂ ಮೇ ತರ್ಪಯತಾಂಗಾನಿ ಮೇ ತರ್ಪಯತ ಪ್ರಜಾಂ ಮೇ ತರ್ಪಯತ ಪಶೂನ್ಮೇ ತರ್ಪಯತ

---

ವ್ಯಾನಮಿತಿ ವಿ-ಅನಮ್ । ಮೇ । ತರ್ಪಯತ । ಚಕ್ಷುಃ । ಮೇ । ತರ್ಪಯತ । ಶ್ರೋತ್ರಮ್ । ಮೇ । ತರ್ಪಯತ । ಮನಃ । ಮೇ । ತರ್ಪಯತ । ವಾಚಮ್ । ಮೇ । ತರ್ಪಯತ । ಆತ್ಮಾನಮ್ । ಮೇ । ತರ್ಪಯತ । ಅಂಗಾನಿ । ಮೇ । ತರ್ಪಯತ । ಪ್ರಜಾಮಿತಿ ಪ್ರ-ಜಾಮ್ । ಮೇ । ತರ್ಪಯತ । ಪಶೂನ್ । ಮೇ । ತರ್ಪಯತ ।

---

**ಮೇ ವ್ಯಾನಮ್ ತರ್ಪಯತ**=ನನ್ನ ವ್ಯಾನವಾಯುವನ್ನೂ ಸಂತೋಷಪಡಿಸಿರಿ; **ಚಕ್ಷುಃ ಮೇ ತರ್ಪಯತ**=ನನ್ನ ಕಣ್ಣನ್ನು ತೃಪ್ತಿಪಡಿಸಿರಿ; **ಶ್ರೋತ್ರಮ್ ಮೇ ತರ್ಪಯತ**=ನನ್ನ ಕಿವಿಯನ್ನೂ ಸಂತುಷ್ಟಿಪಡಿಸಿರಿ; **ಮನಃ ಮೇ ತರ್ಪಯತ**=ನನ್ನ ಮನಸ್ಸನ್ನು ಸಂತೋಷಪಡಿಸಿರಿ; **ವಾಚಮ್ ಮೇ ತರ್ಪಯತ**=ನನ್ನ ಮಾತನ್ನು ಸತ್ತ್ವಪೂರ್ಣವನ್ನಾಗಿ ಮಾಡಿರಿ; **ಆತ್ಮಾನಮ್ ಮೇ ತರ್ಪಯತ**=ನನ್ನ ಜೀವವನ್ನು /ದೇಹವನ್ನು ಪುಷ್ಟಿಗೊಳಿಸಿರಿ; **ಅಂಗಾನಿ ಮೇ ತರ್ಪಯತ**=ನನ್ನ ಅವಯವಗಳನ್ನು ಪುಷ್ಟಿಗೊಳಿಸಿರಿ; **ಪ್ರಜಾಮ್ ಮೇ ತರ್ಪಯತ**=ನನ್ನ ಪುತ್ರಾದಿಗಳನ್ನು ಪುಷ್ಟಿಗೊಳಿಸಿರಿ; **ಪಶೂನ್ ಮೇ ತರ್ಪಯತ**=ನನ್ನ ಗವಾದಿಪಶುಗಳನ್ನು ವೃದ್ಧಿಗೊಳಿಸಿರಿ.

---

ತುಂಬಲ್ಪಡುತ್ತವಾದುದರಿಂದ ಆ ನೀರಿಗೆ 'ನಿಗ್ರಾಭ್ಯ' ಎಂದು ಹೆಸರು.

ದೇವತೆಗಳಲ್ಲಿಯೂ ಪ್ರಸಿದ್ಧರಾಗಿ ಇರುವುದರಿಂದ 'ದೇವಶ್ರುತ' ಎಂದೂ ಹೆಸರು.

ಗೃಹಾನ್ಮೇ ತರ್ಪಯತ ಗಣಾನ್ಮೇ ತರ್ಪಯತ ಸರ್ವಗಣಂ

ಮಾ ತರ್ಪಯತ ತರ್ಪಯತ ಮಾ(೨೩) ಗಣಾ ಮೇ ಮಾ

ವಿತೃಷನ್ನೋಷಧಯೋ ವೈ ಸೋಮಸ್ಯ ವಿಶೋ

---

ಗೃಹಾನ್ । ಮೇ । ತರ್ಪಯತ । ಗಣಾನ್ । ಮೇ । ತರ್ಪಯತ । ಸರ್ವಗಣಮಿತಿ

ಸರ್ವ-ಗಣಮ್ । ಮಾ । ತರ್ಪಯತ । ತರ್ಪಯತ । ಮಾ ।(೨೩)। ಗಣಾಃ । ಮೇ ।

ಮಾ । ವೀತಿ । ತೃಷನ್ನ್ । ಓಷಧಯಃ । ವೈ । ಸೋಮಸ್ಯ । ವಿಶಃ ।

---

**ಗೃಹಾನ್ ಮೇ ತರ್ಪಯತ**=ನನ್ನ ಮನೆಗಳನ್ನು ದೃಢಪಡಿಸಿರಿ; **ಗಣಾನ್ ಮೇ ತರ್ಪಯತ**=ನನ್ನ ಭೃತ್ಯಾದಿಗಣಗಳನ್ನು ತೃಪ್ತಿಪಡಿಸಿರಿ; **ಸರ್ವಗಣಮ್ ಮಾ ತರ್ಪಯತ**=ಎಲ್ಲ ಬಾಂಧವಾದಿಸಮೂಹದಿಂದ ಕೂಡಿರುವ ನನ್ನನ್ನು ವೃದ್ಧಿಗೊಳಿಸಿರಿ; **ಮಾ ತರ್ಪಯತ**=ನನ್ನನ್ನು ಸರ್ವವಿಧದಿಂದಲೂ ವೃದ್ಧಿಗೊಳಿಸಿರಿ; **ಮೇ ಗಣಾಃ ಮಾ ವಿತೃಷನ್**=ನನಗೆ ಸಂಬಂಧಿಸಿದ ಬಾಂಧವಾದಿಸಮೂಹಗಳು ಹಸಿವು-ಬಾಯಾರಿಕೆ ಮೊದಲಾದ ತೊಂದರೆಗಳಿಂದ ದೂರವಾಗಿರಲಿ/ನನ್ನಲ್ಲಿ ಯಾವಾಗಲೂ ಪ್ರೀತಿರಹಿತರಾಗದಿರಲಿ.

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| ಓಷಧಯಃ ವೈ ಸೋಮಸ್ಯ ವಿಶಃ | ಓಷಧಿಗಳು ಸೋಮರಾಜನ ಪ್ರಜೆಗಳಂತೆ. |

---

ಈ ಜಲಗಳು ನನಗೆ ಮತ್ತು ನನ್ನ ಪರಿವಾರಕ್ಕೆ ಸರ್ವವಿಧವಾದ ತೃಪ್ತಿಯನ್ನು ತಂದು ಕೊಡಲಿ ಎಂದು ಪ್ರಾರ್ಥನೆ.

ಓಷಧಿಗಳು ಸೋಮರಾಜನ ಪ್ರಜೆಗಳು. ಪ್ರಜೆಗಳು ರಾಜನ ವಿಷಯದಲ್ಲಿ ತಮ್ಮ ಸಲಹೆಯನ್ನು ಕೊಡಲು ಸಮರ್ಥರು. ಸೋಮನಿಗೆ ಇಂದ್ರನು ದೇವತೆ. **'ಅವೀವೃಧಮ್ ವಃ'** ಎಂಬ ಮಂತ್ರದಿಂದ ಸೋಮಾಭಿಮಂತ್ರಣವನ್ನು ಮಾಡಬೇಕು.

ವಿಶಃ ಖಲು ವೈ ರಾಜ್ಞಃ ಪ್ರದಾತೋರೀಶ್ವರಾ

ಐಂದ್ರಸ್ಸೋಮೋಽವೀವೃಧಂ ವೋ ಮನಸಾ ಸುಜಾತಾ

ಋತಪ್ರಜಾತಾ ಭಗ ಇದ್ವಃ ಸ್ಯಾಮ ।

---

ವಿಶಃ । ಖಲು । ವೈ । ರಾಜ್ಞಃ । ಪ್ರದಾತೋರಿತಿ ಪ್ರ-ದಾತೋಃ । ಈಶ್ವರಾಃ । ಐಂದ್ರಃ । ಸೋಮಃ । ಅವೀವೃಧಮ್ । ವಃ । ಮನಸಾ । ಸುಜಾತಾ ಇತಿ ಸು-ಜಾತಾಃ । ಋತಪ್ರಜಾತಾ ಇತ್ಯೃತ-ಪ್ರಜಾತಾಃ । ಭಗೇ । ಇತ್ । ವಃ । ಸ್ಯಾಮ ॥

---

| | |
|---|---|
| ವಿಶಃ ಖಲು ವೈ ರಾಜ್ಞಃ | ಪ್ರಜೆಗಳಾದ ಓಷಧಿಗಳು ರಾಜನಾದ ಸೋಮ |
| ಪ್ರದಾತೋಃ ಈಶ್ವರಾಃ | ನನ್ನು ನಮಗೆ ಕೊಡಲು ಸಮರ್ಥರು. |
| ಐಂದ್ರಃ ಸೋಮಃ | ಸೋಮರಾಜನಿಗೆ ಇಂದ್ರನು ದೇವತೆಯಾಗಿರುತ್ತಾನೆ. |

### ಸೋಮರಾಜನ ಅಭಿಮಂತ್ರಣ

| ಮಂತ್ರ | ವಿನಿಯೋಗ |
|---|---|
| **ಅವೀವೃಧಂ....ಸೋಮಮ್ ॥** | ಸೋಮರಾಜನನ್ನು ಅಭಿಮಂತ್ರಿಸಲು |

---

✦**ಸುಜಾತಾಃ**=[ಲೋಕೋಪಕಾರವನ್ನು ಮಾಡುವುದರಿಂದ] ಸಾರ್ಥಕವಾದ ಒಳ್ಳೆಯ ಜನ್ಮವುಳ್ಳ; **ಋತಪ್ರಜಾತಾಃ**=ವಿಶೇಷವಾಗಿ ಯಜ್ಞಕ್ಕಾಗಿ ಹುಟ್ಟಿರುವ ಓಷಧಿಗಳೇ! **ವಃ**=ನಿಮ್ಮನ್ನು; **ಮನಸಾ**=ಮನಸ್ಸಿನಿಂದ; **ಅವೀವೃಧಮ್**=ವೃದ್ಧಿ ಹೊಂದಿಸುತ್ತೇನೆ. **ವಃ**=ನಿಮ್ಮ; **ಭಗೇ ಇತ್**=ಭಜನದಲ್ಲಿಯೇ/ಸೇವೆಯಲ್ಲಿಯೇ; **ಸ್ಯಾಮ**= ಇರುತ್ತೇವೆ.

---

ಎಲೈ! ಓಷಧಿಗಳೇ! ನಿಮ್ಮ ಜನ್ಮವು ಲೋಕೋಪಕಾರಕ್ಕಾಗಿ ಇರುವುದರಿಂದ

ಇಂದ್ರೇಣ ದೇವೀರ್ವೀರುಧಸ್ಸಂವಿದಾನಾ ಅನುಮನ್ಯನ್ತಾಗ್ಂ ಸವನಾಯ ಸೋಮಮಿತ್ಯಾಹೌಷಧೀಭ್ಯ ಏವೈನಗ್ಗ್ಂ ಸ್ವಾಯೈ ವಿಶಃ ಸ್ವಾಯೈ ದೇವತಾಯೈ ನಿರ್ಯಾಚ್ಯಾಭಿಷುಣೋತಿ

---

ಇಂದ್ರೇಣ । ದೇವೀಃ । ವೀರುಧಃ । ಸಂವಿದಾನಾ ಇತಿ ಸಂ–ವಿದಾನಾಃ । ಅನ್ವಿತಿ । ಮನ್ಯಂತಾಮ್ । ಸವನಾಯ । ಸೋಮಮ್ । ಇತಿ । ಆಹ । ಓಷಧೀಭ್ಯ ಇತ್ಯೋಷಧಿ–ಭ್ಯಃ । ಏವ । ಏನಮ್ । ಸ್ವಾಯೈ । ವಿಶಃ । ಸ್ವಾಯೈ । ದೇವತಾಯೈ । ನಿರ್ಯಾಚ್ಯೇತಿ ನಿಃ–ಯಾಚ್ಯ । ಅಭೀತಿ । ಸುನೋತಿ ।

---

ದೇವೀಃ ವೀರುಧಃ=ದೇವಸಮಾನರಾದ ಸೋಮಲತೆಗಳು; ಇಂದ್ರೇಣ ಸಂವಿದಾನಾಃ=ಇಂದ್ರನೊಡನೆ ಐಕಮತ್ಯವನ್ನು ಹೊಂದಿದವುಗಳಾಗಿ; ಸವನಾಯ= ಪ್ರಾತಃಸವನಕರ್ಮಕ್ಕಾಗಿ; ಸೋಮಮ್ ಅನುಮನ್ಯಾಮ್=ಸೋಮನನ್ನು [ಅಭಿಷವ ಮಾಡಲು] [ನಮಗೆ] ಅನುಮತಿ ಕೊಡಲಿ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಇತಿ ಆಹ | ಹೀಗೆ ಶ್ರುತಿಯು ಹೇಳುತ್ತದೆ. |
| ಓಷಧೀಭ್ಯಃ ಸ್ವಾಯೈ ವಿಶಃ | ಓಷಧೀರೂಪವಾದ ತನ್ನ ಪ್ರಜೆಗಳಿಂದಲೂ |
| ಸ್ವಾಯೈ ದೇವತಾಯೈ | ತನ್ನ ದೇವತೆಯಾದ [ಇಂದ್ರನಿಂದಲೂ] |
| ಏನಮ್ ನಿರ್ಯಾಚ್ಯ ಏವ | ಈ ಸೋಮರಾಜನನ್ನು ಚೆನ್ನಾಗಿ ಪ್ರಾರ್ಥಿಸಿ, ಅನುಮತಿಯನ್ನು ಪಡೆದು |
| ಅಭಿಷುಣೋತಿ | ಯಾಗಕ್ಕಾಗಿ ಸೋಮಾಭಿಷವವನ್ನು ಮಾಡುತ್ತಾನೆ. |

---

ಸಾರ್ಥಕವಾದುದು. ನೀವು ಯಜ್ಞಕ್ಕಾಗಿಯೇ ಜನಿಸಿದವರಾಗಿದ್ದೀರಿ. ನಿಮ್ಮನ್ನು ನಾನು ಮನಃಪೂರ್ವಕವಾಗಿ ವೃದ್ಧಿ ಹೊಂದಿಸುತ್ತೇನೆ. ನೀವು ದೇವಸಮಾನರಾದವರು. ನೀವು ಇಂದ್ರನೊಡನೆ ಐಕಮತ್ಯವನ್ನು ಹೊಂದಿ ಸೋಮಾಭಿಷವವನ್ನು ಅನುಮತಿಸಿರಿ.

ಯೋ ವೈ ಸೋಮಸ್ಯಾಭಿಷೂಯಮಾಣಸ್ಯ[॥೨೪॥ಪ್ರಥಮೋ]

ಪ್ರಥಮೋಽಗ್ಂಶುಃ ಸ್ಕಂದತಿ ಸ ಈಶ್ವರ ಇಂದ್ರಿಯಂ

ವೀರ್ಯಂ ಪ್ರಜಾಂ ಪಶೂನ್ ಯಜಮಾನಸ್ಯ

ನಿರ್ಹಂತೋಸ್ತಮಭಿ ಮಂತ್ರಯೇತಾ-

---

ಯಃ । ವೈ । ಸೋಮಸ್ಯ । ಅಭಿಷೂಯಮಾಣಸ್ಯೇತ್ಯಭಿ-ಸೂಯಮಾನಸ್ಯ ।(೨೪)।

ಪ್ರಥಮಃ । ಅಗ್ಂಶುಃ । ಸ್ಕಂದತಿ । ಸಃ । ಈಶ್ವರಃ । ಇಂದ್ರಿಯಮ್ । ವೀರ್ಯಮ್ ।

ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಯಜಮಾನಸ್ಯ । ನಿರ್ಹಂತೋರಿತಿ ನಿಃ-

ಹಂತೋಃ । ತಮ್ । ಅಭೀತಿ । ಮಂತ್ರಯೇತ ।

---

### ನೆಲಕ್ಕೆ ಬೀಳುವ ಸೋಮಲತೆಯ ಮೊದಲ ಅಂಶದ ಅಭಿಮಂತ್ರಣವಿಧಿ

| | |
|---|---|
| ಸೋಮಸ್ಯ | ಅಭಿಷವ ಮಾಡಲ್ಪಡುತ್ತಿರುವ ಸೋಮದ |
| ಅಭಿಷೂಯಮಾಣಸ್ಯ ಯಃ | ಯಾವ ಮೊದಲನೆಯ ಅಲ್ಪವು |
| ಪ್ರಥಮಃ ಅಂಶುಃ ಸ್ಕಂದತಿ ಸಃ | ನೆಲದಲ್ಲಿ ಬೀಳುತ್ತದೆಯೋ |
| ಯಜಮಾನಸ್ಯ ಇಂದ್ರಿಯಮ್ | ಅದು ಯಜಮಾನನ ಇಂದ್ರಿಯಶಕ್ತಿಯನ್ನೂ, |
| ವೀರ್ಯಮ್ | ದೇಹಶಕ್ತಿಯನ್ನೂ /ಉತ್ಪಾದಕ ಶಕ್ತಿಯನ್ನೂ |
| ಪ್ರಜಾಮ್ ಪಶೂನ್ | ಪುತ್ರಾದಿಗಳನ್ನೂ, ಗವಾದಿ ಪಶುಗಳನ್ನೂ; |
| ನಿರ್ಹಂತೋಃ ಈಶ್ವರಃ | ನಿಃಶೇಷವಾಗಿ ನಾಶಮಾಡಲು ಸಮರ್ಥವಾಗಿದೆ. |
| ತಮ್ ಅಭಿಮಂತ್ರಯೇತ | [ಆ ದೋಷಪರಿಹಾರಕ್ಕಾಗಿ] ಅದನ್ನು ಅಭಿಮಂತ್ರಿಸಬೇಕು. [ವಿಧಿ] |

ಽಮಾಽಸ್ಕಾನ್ಥ್ಸಹ ಪ್ರಜಯಾ ಸಹ

ರಾಯಸ್ಪೋಷೇಣೇಂದ್ರಿಯಂ ಮೇ ವೀರ್ಯಂ ಮಾ

ನಿರ್ವಧೀರಿತ್ಯಾಶಿಷಮೇವೈತಾಮಾಶಾಸ್ತೇ

---

ಏತಿ । ಮಾ । ಅಸ್ಕಾನ್ । ಸಹ । ಪ್ರಜಯೇತಿ ಪ್ರ-ಜಯಾ । ಸಹ । ರಾಯಃ ।

ಪೋಷೇಣ । ಇಂದ್ರಿಯಮ್ । ಮೇ । ವೀರ್ಯಮ್ । ಮಾ । ನಿರಿತಿ । ವಧೀಃ ।

ಇತಿ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ ।

---

| ಮಂತ್ರ | ವಿನಿಯೋಗ |
|---|---|
| **ಆ ಮಾಸ್ಕಾನ್...ನಿರ್ವಧೀಃ ॥** | ಅಭಿಷವ ಮಾಡಿದಾಗ ಮೊದಲು ನೆಲದಲ್ಲಿ ಬೀಳುವ ಅಂಶುವಿನ ಅಭಿಮಂತ್ರಣ ಮಾಡಲು |

---

✦[ಎಲೈ! ಸೋಮದ ಪ್ರಥಮಾಂಶುವೇ!] **ಮಾ**=ನನ್ನನ್ನು; **ಪ್ರಜಯಾ ಸಹ**= ಪುತ್ರಸಂಪತ್ತಿನೊಡನೆ; **ರಾಯಸ್ಪೋಷೇಣ ಸಹ**=ಧನಸಂಪತ್ತಿನೊಡನೆ; **ಆ ಅಸ್ಕಾನ್**= ಮತ್ತೆ ಹೊಂದಿರುವೆ. **ಮೇ**=ನನ್ನ; **ಇಂದ್ರಿಯಮ್**=ಅವಯವಶಕ್ತಿಯನ್ನೂ; **ವೀರ್ಯಮ್**=ಸಾಮರ್ಥ್ಯವನ್ನೂ; **ಮಾ ನಿರ್ವಧೀಃ**=ನಾಶಪಡಿಸಬೇಡ.

| ಬ್ರಾಹ್ಮಣಭಾಗ | ವಿವರಣೆ |
|---|---|
| ಇತಿ ಏತಾಮ್ ಆಶಿಷಮ್ ಏವ ಆಶಾಸ್ತೇ | ಎಂಬ ಮಂತ್ರದಿಂದ ತನ್ನ ಬಯಕೆಯನ್ನೇ ಹೇಳುತ್ತಾನೆ. |

---

ಈ ಮಂತ್ರದಿಂದ ಸೋಮಾಭಿಷವವನ್ನು ಅನುಷ್ಠಿಸಬೇಕು. ಇದರಿಂದ ಸೋಮ ರಾಜನ ಪ್ರಜೆಗಳಾದ ಓಷಧಿಗಳ ದೇವತೆಯಾದ ಮತ್ತು ರಾಜನಾದ ಇಂದ್ರನ ಅನುಮತಿಯನ್ನು ಪ್ರಾರ್ಥಿಸಿ, ಸೋಮಾಭಿಷವವನ್ನು ಮಾಡಿದಂತಾಗುತ್ತದೆ.

ಇಂದ್ರಿಯಸ್ಯ ವೀರ್ಯಸ್ಯ ಪ್ರಜಾಯ್ಯೈ ಪಶೂನಾಮನಿರ್ಘಾತಾಯ ದ್ರಪ್ಸಶ್ಚಸ್ಕಂದ ಪೃಥಿವೀಮನು ದ್ಯಾಮಿಮಂ ಚ ಯೋನಿಮನು ಯಶ್ಚ ಪೂರ್ವಃ । ತೃತೀಯಂ ಯೋನಿಮನು ಸಂಚರಂತಂ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾಃ ॥೨೫–8॥

[ತರ್ಪಯತ ಮಾಽಭಿಷೂಯಮಾಣಸ್ಯ ಯಶ್ಚ ದಶ ಚ ॥]

---

ಇಂದ್ರಿಯಸ್ಯ । ವೀರ್ಯಸ್ಯ । ಪ್ರಜಾಯಾ ಇತಿ ಪ್ರ–ಜಾಯ್ಯೈ । ಪಶೂನಾಮ್ । ಅನಿರ್ಘಾತಾಯೇತ್ಯನಿಃ–ಘಾತಾಯ । ದ್ರಪ್ಸಃ । ಚಸ್ಕಂದ । ಪೃಥಿವೀಮ್ । ಅನ್ವಿತಿ । ದ್ಯಾಮ್ । ಇಮಮ್ । ಚ । ಯೋನಿಮ್ । ಅನ್ವಿತಿ । ಯಃ । ಚ । ಪೂರ್ವಃ ॥ ತೃತೀಯಮ್ । ಯೋನಿಮ್ । ಅನ್ವಿತಿ । ಸಂಚರಂತಮಿತಿ ಸಮ್–ಚರಂತಮ್ । ದ್ರಪ್ಸಮ್ । ಜುಹೋಮಿ । ಅನ್ವಿತಿ । ಸಪ್ತ । ಹೋತ್ರಾಃ ॥೨೫॥

---

| | |
|---|---|
| ಇಂದ್ರಿಯಸ್ಯ ವೀರ್ಯಸ್ಯ ಪ್ರಜಾಯ್ಯೈ ಪಶೂನಾಮ್ ಅನಿರ್ಘಾತಾಯ | [ಆ ಮಾಽಸ್ಕಾನ್ ಎಂಬ ಮಂತ್ರವು]ಇಂದ್ರಿಯ, ಬಲ, ಪ್ರಜೆ–ಪಶು ಮೊದಲಾದವುಗಳು ನಾಶವಾಗದಿರುವುದಕ್ಕೆ ಕಾರಣವಾಗುತ್ತದೆ. |
| ಮಂತ್ರ | ವಿನಿಯೋಗ |
| ದ್ರಪ್ಸಶ್ಚಸ್ಕಂದ...ಹೋತ್ರಾಃ ॥ | ಸೋಮರಸದ ಹನಿಗಳನ್ನು ಅಭಿಮಂತ್ರಿಸಲು |

---

✦ದ್ರಪ್ಸಃ=ಸೋಮರಸದ ಹನಿಯು; ಪೃಥಿವೀಮ್ ಅನು ಚಸ್ಕಂದ=ಭೂಮಿಯನ್ನು ಅನುಸರಿಸಿ ಬಿದ್ದಿತು; ದ್ಯಾಮ್ ಇಮಮ್ ಚ ಯೋನಿಮ್ ಅನು[ಚಸ್ಕಂದ]=ಈ

ಅಂತರಿಕ್ಷರೂಪವಾದ ಎರಡನೆಯ ಸ್ಥಾನದಲ್ಲಿಯೂ ಬಿದ್ದಿತು. **ಯಃ ಚ ಪೂರ್ವಃ**=ಹಿಂದೆ ಹೇಳಿದಂತೆ ಭೂಲೋಕದಲ್ಲಿಯೂ, ಅಂತರಿಕ್ಷದಲ್ಲಿಯೂ; **ತೃತೀಯಮ್ ಯೋನಿಮ್ ಅನು**=ಮೂರನೆಯ ಸ್ಥಾನವಾದ ದ್ಯುಲೋಕರೂಪವಾದ ಆದಿತ್ಯಸ್ಥಾನದಲ್ಲಿಯೂ; **ಸಂಚರಂತಮ್**=ಸಂಚರಿಸುವ; **ದ್ರಪ್ಸಮ್**=ಸೋಮರಸದ ತುಂತುರು ಹನಿಯನ್ನು; **ಅನು ಸಪ್ತ ಹೋತ್ರಾಃ**=ಉಳಿದ ಏಳು ದಿಕ್ಕುಗಳಲ್ಲಿಯೂ; **ಜುಹೋಮಿ**=ಹೋಮ ಮಾಡಿದಂತೆ ಭಾವಿಸುತ್ತೇನೆ.

---

ಸೋಮಾಭಿಷವವನ್ನು ಮಾಡಿದಾಗ ಮೊದಲು ನೆಲಕ್ಕೆ ಬೀಳುವ ಅಂಶುವನ್ನು ಅಭಿಮಂತ್ರಿಸಬೇಕು.

ಎಲೈ! ಪ್ರಥಮಾಂಶುವೇ! ನೀನು ಪುತ್ರಸಂಪತ್ತು-ಧನಸಂಪತ್ತಿನೊಡನೆ ನನ್ನನ್ನು ಮತ್ತೆ ಹೊಂದಿರುವೆ. ನೀನು ನನ್ನ ಸಾಮರ್ಥ್ಯವನ್ನು ಕುಗ್ಗಿಸದಿರು ಎಂದು ಪ್ರಾರ್ಥಿಸುತ್ತಾನೆ.

ಇದರಿಂದ ಅಂಶುವಿನಿಂದ ಒದಗಬಹುದಾದ ಅನರ್ಥಗಳನ್ನು ದೂರ ಮಾಡಿದಂತಾಗುತ್ತದೆ. ಈ ಮಂತ್ರಾಭಿಮಂತ್ರಣವೇ ಪರಿಹಾರವಾಗಿದೆ.

ಹೋಮ ಮಾಡಿದ ಹವ್ಯವು 'ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ। ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ।' ಎಂದು ಹೇಳಿರುವಂತೆ ಮೂರು ಲೋಕಗಳಲ್ಲಿಯೂ ಸಂಚರಿಸುತ್ತದೆ. ಇಲ್ಲಿ ಸುತ್ತಲೂ ಹಾರಿದ ಸೋಮರಸ ಬಿಂದುವು ಮೂರು ಲೋಕಗಳಲ್ಲಿಯೂ ಸಂಚರಿಸಲಿ. ಹಾರಿದ ದಿಕ್ಕಿನಿಂದ ಬೇರೆಯ ಏಳು ದಿಕ್ಕುಗಳಲ್ಲಿಯೂ ಈ ಸೋಮರಸ ಬಿಂದುಗಳನ್ನು-ದೇವತೆಗಳನ್ನು ಉದ್ದೇಶಿಸಿ ಹೋಮವನ್ನು ಮಾಡಿದಂತೆ-ಭಾವಿಸುತ್ತೇನೆ. ಇವು ವ್ಯರ್ಥವಾಗದಿರಲಿ. ದೇವತೆಗಳನ್ನು ತೃಪ್ತಿಪಡಿಸಲಿ. ಲೋಕಕ್ಷೇಮವನ್ನು ಉಂಟು ಮಾಡಲಿ.

---

## ವಿನಿಯೋಗಸಂಗ್ರಹ

[1]ನಿಗ್ರಾಭ್ಯಾದಿ ತ್ರ್ಯಷನ್ನಂತಂ ನಿಗ್ರಾಭ್ಯಾಗ್ರಹಣೇ ಸತಿ।
ಸ್ವಾಮಿನಂ ವಾಚಯೇತ್ ಸೋಮಂ ಮಂತ್ರಯೇತ ಹ್ಯವೀವೃಧಮ್[2] ॥
[3]ಆ ಮಾಸ್ಕಾನಭಿಮಂತ್ರ್ಯೋಽಂಶುಃ [4]ದ್ರಪ್ಸೋ ಬಿಂದುಂ ತು ಮಂತ್ರಯೇತ್।
ಚತ್ವಾರ ಏತೇ ಮಂತ್ರಾಃ ಸ್ಯುರಷ್ಟಮೇ ತ್ವನುವಾಕಕೇ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-4

## ॥ ನವಮೋऽನುವಾಕಃ ॥

ಯೋ ವೈ ದೇವಾನ್ದೇವಯಶಸೇನಾರ್ಪಯತಿ

ಮನುಷ್ಯಾನ್ಮನುಷ್ಯಯಶಸೇನ

---

ಯಃ । ವೈ । ದೇವಾನ್ । ದೇವಯಶಸೇನೇತಿ ದೇವ-ಯಶಸೇನ । ಅರ್ಪಯತಿ ।

ಮನುಷ್ಯಾನ್ । ಮನುಷ್ಯಯಶಸೇನೇತಿ ಮನುಷ್ಯ-ಯಶಸೇನ ।

---

ಎಂಟನೆಯ ಅನುವಾಕದಲ್ಲಿ ಉಪಾಂಶುಗ್ರಹಕ್ಕೆ ಸಂಬಂಧಿಸಿದ ಮಂತ್ರಗಳು ಉಕ್ತವಾಗಿವೆ. ಈ ಒಂಬತ್ತನೆಯ ಅನುವಾಕದಲ್ಲಿ ಸವನಹೋಮಾದಿಮಂತ್ರಗಳು ಹೇಳಲ್ಪಡುತ್ತವೆ. ಮೊದಲು ಉಪಾಂಶ್ವಾದಿಧ್ವನಿವಿಧಿಯು ವಿಹಿತವಾಗಿದೆ.

---

### ಉಪಾಂಶು-ಉಪಬ್ದಿಸ್ವರವಿಧಿ;ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
| --- | --- |
| ಯಃ ವೈ ದೇವಾನ್ ದೇವಯಶಸೇನ ಅರ್ಪಯತಿ ಮನುಷ್ಯಾನ್ ಮನುಷ್ಯಯಶಸೇನ[ಅರ್ಪಯತಿ] | ಯಾವ ಯಜಮಾನನು ದೇವತೆಗಳನ್ನು ದೇವತೆಗಳ ಕೀರ್ತಿಯಿಂದ ಕೂಡಿಸುತ್ತಾನೆಯೋ ಮನುಷ್ಯರನ್ನು ಮನುಷ್ಯರ ಕೀರ್ತಿಯಿಂದ ಕೂಡಿಸುತ್ತಾನೆಯೋ |

---

ಸೋಮಯಾಗದಲ್ಲಿ ಆಯಾ ಮಂತ್ರಗಳಿಂದ ಸೋಮರಸವನ್ನು ಹಿಡಿಯುವ ಪಾತ್ರೆಗಳು ಗ್ರಹಗಳು. ಅದರಲ್ಲಿ ಗ್ರಹಣ ಮಾಡುವಾಗ ವಿಶೇಷವಿಧಿಯು ಇಲ್ಲಿ ಉಕ್ತವಾಗಿದೆ.

ದೇವಯಶಸ್ಯೇವ ದೇವೇಷು ಭವತಿ ಮನುಷ್ಯಯಶಸೀ
ಮನುಷ್ಯೇಷು ಯಾನ್ಪ್ರಾಚೀನಮಾಗ್ರಯಣಾದ್ಗ್ರಹಾನ್ಗೃಹ್ಣೀ-
ಯಾತ್ತಾನುಪಾಗ್ಂಶು ಗೃಹ್ಣೀಯಾದ್ಯಾನೂರ್ಧ್ವಾಗ್ಂ

---

ದೇವಯಶಸೀತಿ ದೇವ-ಯಶಸೀ । ಏವ । ದೇವೇಷು । ಭವತಿ । ಮನುಷ್ಯಯಶಸೀತಿ ಮನುಷ್ಯ-ಯಶಸೀ । ಮನುಷ್ಯೇಷು । ಯಾನ್ । ಪ್ರಾಚೀನಮ್ । ಆಗ್ರಯಣಾತ್ । ಗ್ರಹಾನ್ । ಗೃಹ್ಣೀಯಾತ್ । ತಾನ್ । ಉಪಾಗ್ಂಶ್ವಿತ್ಯುಪ-ಅಗ್ಂಶು । ಗೃಹ್ಣೀಯಾತ್ । ಯಾನ್ । ಊರ್ಧ್ವಾನ್ ।

---

| | |
|---|---|
| (ಸಃ) ದೇವೇಷು ದೇವಯಶಸೀ ಏವ ಭವತಿ | ಅವನು ದೇವಲೋಕದಲ್ಲಿ ದೇವತೆಗಳ ಕೀರ್ತಿಯನ್ನು ಹೊಂದಿದವನಾಗುತ್ತಾನೆ. |
| ಮನುಷ್ಯಯಶಸೀ ಮನುಷ್ಯೇಷು (ಭವತಿ) | ಮನುಷ್ಯರಲ್ಲಿ ಈ ಭೂಲೋಕದ ಜನರ ಒಳ್ಳೆಯ ಹೆಸರನ್ನೂ ಹೊಂದಿದವನಾಗುತ್ತಾನೆ. |
| ಯಾನ್ ಗ್ರಹಾನ್ ಆಗ್ರಯಣಾತ್ ಪ್ರಾಚೀನಮ್ ಗೃಹ್ಣೀಯಾತ್ | ಯಾವ ಸೋಮಗ್ರಹಣಪಾತ್ರಗಳನ್ನು ಆಗ್ರಯಣಗ್ರಹಕ್ಕಿಂತ ಮೊದಲು ಗ್ರಹಿಸುತ್ತಾನೆಯೋ |
| ತಾನ್ ಉಪಾಗ್ಂಶು ಗೃಹ್ಣೀಯಾತ್ | ಆ ಗ್ರಹಗಳನ್ನು *ಉಪಾಂಶುಸ್ವರದಿಂದ ಗ್ರಹಣ ಮಾಡಬೇಕು. |
| ಯಾನ್ ಊರ್ಧ್ವಾನ್ (ಗೃಹ್ಣೀಯಾತ್) | ಆಗ್ರಯಣಗ್ರಹದ ಅನಂತರದಲ್ಲಿ ಯಾವ ಗ್ರಹಗಳನ್ನು ಗ್ರಹಣ ಮಾಡುತ್ತಾನೆಯೋ |

---

* ಮತ್ತೊಬ್ಬರಿಗೆ ಕೇಳದಂತೆ ಹೇಳುವ ಸ್ವರ.

ಸ್ತಾನುಪಬ್ದಿಮತೋ ದೇವಾನೇವ ತದ್ದೇವಯಶಸೇನಾ-
ರ್ಪಯತಿ ಮನುಷ್ಯಾನ್ಮನುಷ್ಯಯಶಸೇನ ದೇವಯಶಸ್ಯೇವ
ದೇವೇಷು ಭವತಿ ಮನುಷ್ಯಯಶಸೀ ಮನುಷ್ಯೇ-

---

ತಾನ್ । ಉಪಬ್ದಿಮತ ಇತ್ಯುಪಬ್ದಿ-ಮತಃ । ದೇವಾನ್ । ಏವ । ತತ್ । ದೇವಯಶಸೇನೇತಿ ದೇವ-ಯಶಸೇನ । ಅರ್ಪಯತಿ । ಮನುಷ್ಯಾನ್ । ಮನುಷ್ಯಯಶಸೇನೇತಿ ಮನುಷ್ಯ-ಯಶಸೇನ । ದೇವಯಶಸೀತಿ ದೇವ-ಯಶಸೀ । ಏವ । ದೇವೇಷು । ಭವತಿ । ಮನುಷ್ಯಯಶಸೀತಿ ಮನುಷ್ಯ-ಯಶಸೀ । ಮನುಷ್ಯೇಷು ।

---

| | |
|---|---|
| ತಾನ್ ಉಪಬ್ದಿಮತಃ (ಗೃಹ್ಣೀಯಾತ್) | ಆ ಗ್ರಹಗಳನ್ನು *ಉಪಬ್ದಿಸ್ವರದಿಂದ ಹೇಳಬೇಕು. |
| ತತ್ ದೇವಾನ್ ಏವ ದೇವಯಶಸೇನ ಅರ್ಪಯತಿ | ಆದರಿಂದ ದೇವತೆಗಳನ್ನೇ ದೇವತೆಗಳ ಕೀರ್ತಿಯಿಂದ ಹೊಂದಿಸುತ್ತಾನೆ. |
| ಮನುಷ್ಯಾನ್ ಮನುಷ್ಯಯಶಸೇನ (ಅರ್ಪಯತಿ) | ಮನುಷ್ಯರನ್ನು ಮನುಷ್ಯಕೀರ್ತಿಯಿಂದ ಹೊಂದಿಸುತ್ತಾನೆ. |
| ದೇವೇಷು ದೇವಯಶಸೀ ಏವ ಭವತಿ | [ಆದರಿಂದ]ದೇವಲೋಕದಲ್ಲಿ ದೇವತೆಗಳ ಕೀರ್ತಿಯನ್ನು ಹೊಂದಿದವನಾಗುತ್ತಾನೆ. |
| ಮನುಷ್ಯೇಷು ಮನುಷ್ಯಯಶಸೀ (ಭವತಿ) | ಮನುಷ್ಯರಲ್ಲಿ ಈ ಭೂಲೋಕದ ಜನರ ಒಳ್ಳೆಯ ಹೆಸರನ್ನು ಹೊಂದಿದವನಾಗುತ್ತಾನೆ. |

---

ಆಗ್ರಯಣಗ್ರಹಕ್ಕಿಂತ ಮೊದಲು ಮಾಡುವ ಗ್ರಹಣಗಳು ಉಪಾಂಶುಸ್ವರದಿಂದಲೂ, ಅನಂತರ ಮಾಡುವ ಗ್ರಹಣಗಳು ಉಪಬ್ದಿಸ್ವರದಿಂದಲೂ ಮಾಡಲ್ಪಡಬೇಕು. ಇದು ಇಲ್ಲಿನ ವಿಧಿ. ಉಪಾಂಶು=ಮೆಲ್ಲನೆ ತನಗೆ ಮಾತ್ರ ಕೇಳುವಂತೆ;

---

* ಸಮೀಪದಲ್ಲಿರುವವರಿಗೆ ಸ್ವಲ್ಪಮಟ್ಟಿಗೆ ಕೇಳುವ ಸ್ವರ.

ಷ್ವಗ್ನಿಃ ಪ್ರಾತಸ್ಸವನೇ ಪಾತ್ವಸ್ಮಾನ್ ವೈಶ್ವಾನರೋ ಮಹಿನಾ ವಿಶ್ವಶಂಭೂಃ । ಸ ನಃ ಪಾವಕೋ ದ್ರವಿಣಂ ದಧಾತ್ವಾ [ದಧಾತು (೨೬)ಆಯುಷ್ಮ] ಯುಷ್ಮಂತಸ್ಸಹಭಕ್ಷಾಃ ಸ್ಯಾಮ ।

ಅಗ್ನಿಃ । ಪ್ರಾತಸ್ಸವನ ಇತಿ ಪ್ರಾತಃ-ಸವನೇ । ಪಾತು । ಅಸ್ಮಾನ್ । ವೈಶ್ವಾನರಃ । ಮಹಿನಾ । ವಿಶ್ವಶಂಭೂರಿತಿ ವಿಶ್ವ-ಶಂಭೂಃ ॥ ಸಃ । ನಃ । ಪಾವಕಃ । ದ್ರವಿಣಮ್ । ದಧಾತು ।(೨೬)। ಆಯುಷ್ಮಂತಃ । ಸಹಭಕ್ಷಾ ಇತಿ ಸಹ-ಭಕ್ಷಾಃ । ಸ್ಯಾಮ ॥

| ಮಂತ್ರ | ವಿನಿಯೋಗ |
|---|---|
| ಅಗ್ನಿಃ ಪ್ರಾತಸ್ಸವನೇ...ಸ್ಯಾಮ ॥ | ಪ್ರಾತಃಸವನವು ಮುಗಿದಾಗ ಮಾಡುವ ಸವನಹೋಮವನ್ನು ಮಾಡಲು. |

✦ಪ್ರಾತಸ್ಸವನೇ=ಪ್ರಾತಃಸವನದಲ್ಲಿ; ಅಗ್ನಿಃ ಅಸ್ಮಾನ್ ಪಾತು=ಅಗ್ನಿಯು ನಮ್ಮನ್ನು ಕಾಪಾಡಲಿ. ವೈಶ್ವಾನರಃ=ಮಾನವರೆಲ್ಲರಿಗೂ ಸ್ವಾಮಿಯಾದ; ಮಹಿನಾ=ತನ್ನ ಮಹಿಮೆಯಿಂದ; ವಿಶ್ವಶಂಭೂಃ=ವಿಶ್ವಕ್ಕೆ ಸುಖವನ್ನುಂಟುಮಾಡುವ; ಸಃ ಪಾವಕಃ= ಎಲ್ಲವನ್ನೂ ಶುದ್ಧಿಗೊಳಿಸುವ ಆ ಅಗ್ನಿದೇವನು; ನಃ ದ್ರವಿಣಮ್ ದಧಾತು= ನಮಗೆ ಧನವನ್ನು ಕೊಡಲಿ. [ನಾವು] ಆಯುಷ್ಮಂತಃ=ಆಯುಸ್ಸನ್ನು ಹೊಂದಿದವ ರಾಗಿ; ಸಹಭಕ್ಷಾಃ ಸ್ಯಾಮ=ಸೋಮಭಕ್ಷಣ ಮಾಡುವವರೊಡನೆ ಸೇರಿಕೊಂಡವ ರಾಗಿ ಇರೋಣ.

ಉಪಬ್ದಿ=ಸಮೀಪದಲ್ಲಿರುವವರಿಗೆ ಸ್ವಲ್ಪಮಟ್ಟಿಗೆ ಕೇಳುವಂತೆ-ಹೀಗೆ ಹೇಳಬೇಕು. ಹೀಗೆ ಹೇಳುವುದರಿಂದ ದೇವಲೋಕ-ಭೂಲೋಕದ ಕೀರ್ತಿಯನ್ನು ಹೊಂದುವನು.

ಅಗ್ನಿದೇವನು ಮಾನವರೆಲ್ಲರಿಗೆ ಸ್ವಾಮಿಯಾಗಿದ್ದಾನೆ. ಆತನು ಎಲ್ಲರಿಗೂ ಸುಖ ವನ್ನುಂಟುಮಾಡುವ ಮಹಿಮೆಯುಳ್ಳವನು. ಎಲ್ಲವನ್ನೂ ಶುದ್ಧಿಗೊಳಿಸುವ ಪಾವಕನು. ಅಂತಹ ಅಗ್ನಿದೇವನು ಪ್ರಾತಃಸವನದಲ್ಲಿ ನಮ್ಮನ್ನು ಕಾಪಾಡಲಿ. ಶುದ್ಧಿಗೊಳಿಸಲಿ. ನಮಗೆ ಧನವನ್ನು ಕೊಡಲಿ. ಆತನ ಅನುಗ್ರಹದಿಂದ ನಾವು ಯಾಗಾದಿಗಳನ್ನು

ವಿಶ್ವೇ ದೇವಾ ಮರುತ ಇಂದ್ರೋ ಅಸ್ಮಾನಸ್ಮಿನ್ದ್ವಿತೀಯೇ ಸವನೇ ನ ಜಹ್ಯುಃ । ಆಯುಷ್ಮಂತಃ ಪ್ರಿಯಮೇಷಾಂ ವದಂತೋ ವಯಂ ದೇವಾನಾಗ್ಂ ಸುಮತೌ ಸ್ಯಾಮ ।

---

ವಿಶ್ವೇ । ದೇವಾಃ । ಮರುತಃ । ಇಂದ್ರಃ । ಅಸ್ಮಾನ್ । ಅಸ್ಮಿನ್ನ್ । ದ್ವಿತೀಯೇ । ಸವನೇ । ನ । ಜಹ್ಯುಃ ॥ ಆಯುಷ್ಮಂತಃ । ಪ್ರಿಯಮ್ । ಏಷಾಮ್ । ವದಂತಃ । ವಯಮ್ । ದೇವಾನಾಮ್ । ಸುಮತಾವಿತಿ ಸು-ಮತೌ । ಸ್ಯಾಮ ॥

---

| ಮಂತ್ರ | ವಿನಿಯೋಗ |
|---|---|
| ವಿಶ್ವೇ ದೇವಾಃ...ಸ್ಯಾಮ ॥ | ಮಾಧ್ಯಂದಿನಸವನಹೋಮಮಂತ್ರ. |

---

✦ಮರುತಃ=ಮರುದ್ದೇವತೆಗಳೂ; ಇಂದ್ರಃ=ಇಂದ್ರದೇವನೂ: ವಿಶ್ವೇ ದೇವಾಃ= ಈ ಎಲ್ಲಾ ದೇವತೆಗಳೂ/ವಿಶ್ವೇದೇವರೂ; ಅಸ್ಮಾನ್=ನಮ್ಮನ್ನು; ಅಸ್ಮಿನ್ ದ್ವಿತೀಯೇ ಸವನೇ=ಈ ಮಾಧ್ಯಂದಿನಸವನದಲ್ಲಿ; ನ ಜಹ್ಯುಃ=ಕೈ ಬಿಡದಿರಲಿ. ಏಷಾಮ್ ಪ್ರಿಯಮ್=ಈ ದೇವತೆಗಳ ಪ್ರಿಯವಾದ [ಸ್ತೋತ್ರವನ್ನು] ವದಂತಃ=ಹೇಳುತ್ತಿರುವ; ವಯಮ್=ನಾವು; ಆಯುಷ್ಮಂತಃ=ದೀರ್ಘಾಯುಷ್ಮಂತರಾಗಿ ದೇವಾನಾಮ್= ದೇವತೆಗಳ; ಸುಮತೌ=ಒಳ್ಳೆಯ ಅನುಗ್ರಹಬುದ್ಧಿಯಲ್ಲಿ ಸ್ಯಾಮ=ಇರೋಣ.

---

ಅನುಷ್ಠಿಸುತ್ತಾ ಉತ್ತಮವಾದ ಅನ್ನವನ್ನು/ಸೋಮಭಕ್ಷವನ್ನು ನೀಡುತ್ತಾ ದೀರ್ಘಾಯುಷ್ಮಂತರಾಗಿ ಬಾಳುವಂತಾಗಲಿ. ಮರುದ್ದೇವತೆಗಳೂ, ಇಂದ್ರನೇ ಮೊದಲಾದ ಸಮಸ್ತದೇವತೆಗಳೂ ಈ ಮಾಧ್ಯಂದಿನಸವನದಲ್ಲಿ ನಮ್ಮನ್ನು ಕೈ ಬಿಡದೆ ಕಾಪಾಡಲಿ. ದೇವತೆಗಳಿಗೆ ಪ್ರಿಯವಾದ ಸ್ತೋತ್ರಗಳನ್ನು ಹೇಳುತ್ತಿರುವ ನಾವು ದೀರ್ಘಾಯುಷ್ಮಂತರಾಗಿ ದೇವತೆಗಳ ಅನುಗ್ರಹಬುದ್ಧಿಗೆ ಪಾತ್ರರಾಗಿ ಇರೋಣ.

ಇದಂ ತೃತೀಯಗ್ಂ ಸವನಂ ಕವೀನಾಮೃತೇನ ಯೇ ಚಮಸಮೈರಯಂತ । ತೇ ಸೌಧನ್ವನಾಸ್ಸುವರಾನಶಾನಾ ಸ್ವಿಷ್ಟಿಂ ನೋ ಅಭಿ ವಸೀಯೋ ನಯಂತು ।

ಇದಮ್ । ತೃತೀಯಮ್ । ಸವನಮ್ । ಕವೀನಾಮ್ । ಋತೇನ । ಯೇ । ಚಮಸಮ್ । ಐರಯಂತ ॥ ತೇ । ಸೌಧನ್ವನಾಃ । ಸುವಃ । ಆನಶಾನಾಃ । ಸ್ವಿಷ್ಟಿಮಿತಿ ಸು-ಇಷ್ಟಿಮ್ । ನಃ । ಅಭೀತಿ । ವಸೀಯಃ । ನಯಂತು ॥

| ಮಂತ್ರ | ವಿನಿಯೋಗ |
|---|---|
| ಇದಂ...ನಯಂತು ॥ | ತೃತೀಯಸವನಹೋಮಮಂತ್ರ. |

✦**ಯೇ**=ಯಾವ ದೇವತೆಗಳು; **ಋತೇನ**=ಸತ್ಯದಿಂದ; **ಚಮಸಮ್**=[ದೇವತೆಗಳಿಗೆ ಸೋಮರಸವನ್ನು ಸಮರ್ಪಿಸುವ] ಚಮಸಸಮೂಹವನ್ನು; **ಐರಯಂತ**=ಪ್ರೇರಿಸಿದರೋ; **ತೇ**=ಆ; **ಸುವಃ ಆನಶಾನಾಃ**=[ಪುಣ್ಯಕರ್ಮಗಳಿಂದ] ಸ್ವರ್ಗವನ್ನು ವ್ಯಾಪಿಸುವ; **ಸೌಧನ್ವನಾಃ**=ಇಂದ್ರನಿಗೆ ಸಂಬಂಧಿಸಿದ ಋಭುಗಳು; **ಕವೀನಾಮ್**=ವಿದ್ವಾಂಸರಾದ ಋತ್ವಿಜರ; **ಇದಮ್ ತೃತೀಯಮ್ ಸವನಮ್**=ಈ ತೃತೀಯಸವನಯಾಗವನ್ನು; **ವಸೀಯಃ**=ಸರ್ವವಸ್ತುಪರಿಪೂರ್ಣವನ್ನಾಗಿ [ಮಾಡಿ]; **ಸ್ವಿಷ್ಟಿಮ್**=ಒಳ್ಳೆಯ ಯಾಗವನ್ನು; **ನಃ ಅಭಿನಯಂತು**= ನಮಗೆ ಎದುರಾಗಿ ತರಲಿ/ನಮ್ಮ ಯಾಗವನ್ನು ಒಳ್ಳೆಯದನ್ನಾಗಿ ಮಾಡಲಿ.

ಯಾರು ಸೋಮಾಹುತಿಗಾಗಿ ಚಮಸಸಮೂಹವನ್ನು ಸತ್ಯವಾದ ಚಿಂತನೆಯಿಂದ ಪ್ರೇರಿಸಿದರೋ ಅವರು ವಿದ್ವಾಂಸರಾದ ಋತ್ವಿಜರು ನೆರವೇರಿಸಿರುವ ಈ ತೃತೀಯಸವನಯಾಗವನ್ನು ಸರ್ವಾಂಗಪರಿಪೂರ್ಣವನ್ನಾಗಿ ಮಾಡಲಿ. ಆ ಪ್ರಸಿದ್ಧರಾದ, ಇಂದ್ರಸಂಬಂಧಿಗಳಾದ, ತಮ್ಮ ಪುಣ್ಯಕಾರ್ಯಗಳಿಂದ ಸ್ವರ್ಗವನ್ನು ವ್ಯಾಪಿಸಿರುವ ಋಭುಗಳು ನಮ್ಮ ಈ ಯಾಗವನ್ನು ಸರ್ವವಸ್ತುಪರಿಪೂರ್ಣವನ್ನಾಗಿ ಮಾಡಿ ಇದನ್ನು ಒಳ್ಳೆಯ ಯಾಗವನ್ನಾಗಿ ಮಾಡಿ ನಮಗೆ ತಂದುಕೊಡಲಿ.

ಆಯತನವತೀರ್ವಾ ಅನ್ಯಾ ಆಹುತಯೋ ಹೂಯಂತೇಽನಾಯತನಾ ಅನ್ಯಾ ಯಾ ಆಘಾರವತೀಸ್ತಾ ಆಯತನವತೀರ್ಯಾ [..ವತೀರ್ಯಾಃ(೨೭)ಸೌಮ್ಯಾ]ಸ್ಸೌಮ್ಯಾಸ್ತಾ ಅನಾಯತನಾ

---

ಆಯತನವತೀರಿತ್ಯಾಯತನ–ವತೀಃ । ವೈ । ಅನ್ಯಾಃ । ಆಹುತಯ ಇತ್ಯಾ–ಹುತಯಃ । ಹೂಯಂತೇ । ಅನಾಯತನಾ ಇತ್ಯನಾ–ಯತನಾಃ । ಅನ್ಯಾಃ । ಯಾಃ । ಆಘಾರವತೀರಿತ್ಯಾಘಾರ–ವತೀಃ । ತಾಃ । ಆಯತನವತೀರಿತ್ಯಾಯತನ–ವತೀಃ । ಯಾಃ । (೨೭) । ಸೌಮ್ಯಾಃ । ತಾಃ । ಅನಾಯತನಾ ಇತ್ಯನಾ–ಯತನಾಃ ।

---

### ಆಘಾರವಿಧಿಗಾಗಿ ಬ್ರಾಹ್ಮಣ

| | |
|---|---|
| ಆಯತನವತೀಃ ಅನ್ಯಾಃ | ಸ್ಥಾನವುಳ್ಳವುಗಳಾಗಿ ಕೆಲವು ಪುರೋಡಾಶಾದ್ಯಾಹು |
| ಆಹುತಯಃ ಹೂಯಂತೇ ವೈ | ತಿಗಳು ಹೋಮ ಮಾಡಲ್ಪಡುತ್ತವೆಯಷ್ಟೆ. |
| ಅನ್ಯಾಃ ಅನಾಯತನಾಃ | ಬೇರೆಯ ಕೆಲವು ಆಹುತಿಗಳು ಸ್ಥಾನವಿಲ್ಲದವುಗಳು. |
| ಯಾಃ ಆಘಾರವತೀಃ | ಯಾವ ಆಹುತಿಗಳು ಆಘಾರವುಳ್ಳವುಗಳೋ |
| ತಾಃ ಆಯತನವತೀಃ | ಅವುಗಳು ಸ್ಥಾನವುಳ್ಳವುಗಳು. |
| ಯಾಃ ಸೌಮ್ಯಾಃ | ಯಾವುವು ಸೋಮಾಹುತಿಗಳೋ |
| ತಾಃ ಅನಾಯತನಾಃ | ಅವುಗಳು ಸ್ಥಾನವಿಲ್ಲದವುಗಳು. |

---

ಈ ಮೂರು ಸವನಹೋಮಗಳನ್ನು ಆಯಾ ಸವನಗಳು ಮುಗಿದ ಮೇಲೆ ಮಾಡಬೇಕೆಂದು ಆಪಸ್ತಂಬರು ಹೇಳಿರುತ್ತಾರೆ. ಭಟ್ಟಭಾಸ್ಕರರು ಈ ಸ್ರುವಾಹುತಿಗಳನ್ನು ಬಹಿಷ್ಪವಮಾನ, ಮಾಧ್ಯಂದಿನಪವಮಾನ, ಆರ್ಭವ ಪವಮಾನಗಳ ಆರಂಭದಲ್ಲಿ ಮಾಡಬೇಕೆಂದು ಹೇಳಿರುತ್ತಾರೆ.

ಐಂದ್ರವಾಯವಮಾದಾಯಾಽಽಘಾರಮಾಘಾರಯೇ

ದಧ್ವರೋ ಯಜ್ಞೋಽಯಮಸ್ತು ದೇವಾ ಓಷಧೀಭ್ಯಃ

ಪಶವೇ ನೋ ಜನಾಯ

---

ಐಂದ್ರವಾಯವಮಿತ್ಯೈಂದ್ರ-ವಾಯವಮ್ । ಆದಾಯೇತ್ಯಾ-ದಾಯ । ಆಘಾರಮಿತ್ಯಾ-ಘಾರಮ್ । ಏತಿ । ಘಾರಯೇತ್ । ಅಧ್ವರಃ । ಯಜ್ಞಃ । ಅಯಮ್ । ಅಸ್ತು । ದೇವಾಃ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಪಶವೇ । ನಃ । ಜನಾಯ ।

---

ಪರಿಪ್ಲವೆಯಿಂದ ಆಘಾರಹೋಮವಿಧಿ.

| | |
|---|---|
| ಐಂದ್ರವಾಯವಮ್ ಆದಾಯ | ಐಂದ್ರವಾಯವಗ್ರಹದ ಸೋಮರಸವನ್ನು ತೆಗೆದುಕೊಂಡು [ಎಡಗೈಯಲ್ಲಿ ಇಟ್ಟುಕೊಂಡು ಬಲಗೈಯಲ್ಲಿರುವ *ಪರಿಪ್ಲವಾಪಾತ್ರೆಯಿಂದ] |
| ಆಘಾರಮ್ ಆಘಾರಯೇತ್ | [ನೈರ್‌ಋತ್ಯದಿಂದ ಈಶಾನ್ಯದವರೆಗೆ ಸೋಮರಸವನ್ನು] ಧಾರೆಯಾಗಿ ಹೋಮ ಮಾಡಬೇಕು. [ವಿಧಿ] |

| ಮಂತ್ರ | ವಿನಿಯೋಗ |
|---|---|
| ಅಧ್ವರಃ...ಸೋಮ ॥ | ಆಘಾರಹೋಮವನ್ನು ಮಾಡಲು |

---

✦ದೇವಾಃ=ದೇವತೆಗಳೇ! ಅಯಮ್ ಯಜ್ಞಃ=ಈ ಯಜ್ಞವು; ಓಷಧೀಭ್ಯಃ=ಸಸ್ಯವರ್ಗಕ್ಕೂ; ನಃ=ನಮ್ಮ; ಪಶವೇ=ಗವಾದಿಪಶುಗಳಿಗೂ; ಜನಾಯ=ಪುತ್ರಾದಿ ಪ್ರಜೆಗಳಿಗೂ;

---

* ಹೋಮಸಾಧನವಾದ ಮರದ ಪಾತ್ರೆ.

ವಿಶ್ವಸ್ಮೈ ಭೂತಾಯಾಧ್ವರೋಽಸಿ ಸ ಪಿನ್ವಸ್ವ

ಘೃತವದ್ದೇವ ಸೋಮೇತಿ ಸೌಮ್ಯಾ ಏವ

ತದಾಹುತೀರಾಯತನವತೀಃ ಕರೋತ್ಯಾ-

---

ವಿಶ್ವಸ್ಮೈ । ಭೂತಾಯ । ಅಧ್ವರಃ । ಅಸಿ । ಸಃ । ಪಿನ್ವಸ್ವ । ಘೃತವದಿತಿ ಘೃತ-ವತ್ ।

ದೇವ । ಸೋಮ । ಇತಿ । ಸೌಮ್ಯಾಃ । ಏವ । ತತ್ । ಆಹುತೀರಿತ್ಯಾ-ಹುತೀಃ ।

ಆಯತನವತೀರಿತ್ಯಾಯತನ-ವತೀಃ । ಕರೋತಿ ।

---

ವಿಶ್ವಸ್ಮೈ ಭೂತಾಯ=ಸಮಸ್ತಪ್ರಾಣಿಗಳಿಗೂ; ಅಧ್ವರಃ=ಹಿಂಸಾರಹಿತವಾಗಿ; ಅಸ್ತು= ಆಗಲಿ; [ಅಧ್ವರ=ಓ! ಯಜ್ಞವೇ! ಓ! ಸೋಮವೇ!] ಅಧ್ವರಃ ಅಸಿ=ನೀನು ಅಧ್ವರನೆಂದು [ಹಿಂಸೆ ಮಾಡದೇ ಇರುವವನೆಂದು] ಪ್ರಸಿದ್ಧನಾಗಿ ಇರುವೆ; ದೇವ ಸೋಮ= ಸೋಮದೇವನೇ! ಸಃ ತ್ವಮ್=ಅಂತಹ ನೀನು; ಘೃತವತ್=ತುಪ್ಪದಂತೆ/ನೀರಿನಂತೆ ಇರುವ; ಪಿನ್ವಸ್ವ=[ಸೋಮರಸದಿಂದ ತೃಪ್ತನಾಗಿ ನಮ್ಮನ್ನು] ತೃಪ್ತಿಪಡಿಸು. ಇತಿ= ಹೀಗೆ [ಹೋಮವನ್ನು ಮಾಡಬೇಕು]

---

## ಆಘಾರಹೋಮದ ಫಲದ ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ತತ್ ಸೌಮ್ಯಾಃ ಏವ ಆಹುತೀಃ ಆಯತನವತೀಃ ಕರೋತಿ | ಆ ಆಘಾರಹೋಮದಿಂದ ಸೋಮಾಹುತಿಗಳನ್ನೂ ಸ್ಥಾನವುಳ್ಳವುಗಳನ್ನಾಗಿ ಮಾಡುತ್ತಾನೆ. |

---

ಆಘಾರಹೋಮದ ವಿಧಿಗಾಗಿ ಇದು ಉಪೋದ್ಘಾತವಾಗಿದೆ. ಕೆಲವು ಆಹುತಿಗಳು ಸ್ಥಾನವುಳ್ಳವುಗಳು. ಕೆಲವು ಹೋಮಗಳು ಸ್ಥಾನವಿಲ್ಲದವುಗಳಾಗಿವೆ. ಆಘಾರದ ಅನಂತರ ಮಾಡುವ ಹೋಮಗಳಿಗೆ ಕ್ಲೃಪ್ತವಾದ ಸ್ಥಾನವು ಇದೆ. ಆಘಾರವಿಲ್ಲದ ಸೋಮಾಹುತಿಗಳು ಸ್ಥಾನವಿಲ್ಲದವುಗಳಾಗಿವೆ. ಐಂದ್ರವಾಯವಗ್ರಹದ ಸೋಮರಸವನ್ನು

ಯತನವಾನ್ಭವತಿ ಯ ಏವಂ ವೇದಾಥೋ ದ್ಯಾವಾಪೃಥಿವೀ

ಏವ ಘೃತೇನ ವ್ಯುನತ್ತಿ ತೇ ವ್ಯುತ್ತೇ ಉಪಜೀವನೀಯೇ

ಭವತ ಉಪಜೀವನೀಯೋ ಭವತಿ ಯ ಏವಂ ವೇದೈ-

---

ಆಯತನವಾನಿತ್ಯಾಯತನ-ವಾನ್ । ಭವತಿ । ಯಃ । ಏವಮ್ । ವೇದ । ಅಥೋ ಇತಿ ।

ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಏವ । ಘೃತೇನ । ವೀತಿ । ಉನತ್ತಿ । ತೇ ಇತಿ ।

ವ್ಯುತ್ತೇ ಇತಿ ವಿ-ಉತ್ತೇ । ಉಪಜೀವನೀಯೇ ಇತ್ಯುಪ-ಜೀವನೀಯೇ । ಭವತಃ ।

ಉಪಜೀವನೀಯ ಇತ್ಯುಪ-ಜೀವನೀಯಃ । ಭವತಿ । ಯಃ । ಏವಮ್ । ವೇದ ।

---

| | |
|---|---|
| ಆಯತನವಾನ್ ಭವತಿ ಯಃ ಏವಮ್ ವೇದ | ಯಾವನು ಹೀಗೆ ತಿಳಿದಿರುತ್ತಾನೆಯೋ ಅವನೂ ಒಳ್ಳೆಯ ಸ್ಥಾನವನ್ನು ಪಡೆದವನಾಗಿರುತ್ತಾನೆ. |
| ಅಥೋ ದ್ಯಾವಾಪೃಥಿವೀ ಏವ | ಮತ್ತು ದ್ಯುಲೋಕ-ಭೂಲೋಕಗಳನ್ನೇ |
| ಘೃತೇನ ವ್ಯುನತ್ತಿ | ತುಪ್ಪದಂತೆ ಇರುವ ಸೋಮರಸದಿಂದ ಚೆನ್ನಾಗಿ ತೋಯಿಸಿ ತೃಪ್ತವಾಗುವಂತೆ ಮಾಡುತ್ತಾನೆ. |
| ತೇ ವ್ಯುತ್ತೇ | ಆ ಭೂಲೋಕ-ಸ್ವರ್ಗಗಳು ಚೆನ್ನಾಗಿ ತೋಯಿಸಲ್ಪಟ್ಟವುಗಳಾಗಿ |
| ಉಪಜೀವನೀಯೇ ಭವತಃ | ಆಶ್ರಯಿಸಿ ಜೀವಿಸಲು ಯೋಗ್ಯವಾದವುಗಳಾಗಿ ಆಗುತ್ತವೆ. |
| ಯಃ ಏವಮ್ ವೇದ | ಹೀಗೆ ಯಾವನು ತಿಳಿದಿರುವನೋ ಅವನೂ |
| ಉಪಜೀವನೀಯಃ ಭವತಿ | ಬೇರೆಯವರಿಗೆ ಜೀವನಾಶ್ರಯನಾಗುತ್ತಾನೆ. |

---

ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿರುವ ಪರಿಪ್ಲವಾಪಾತ್ರೆಯಿಂದ ನೈರ್ಋತ್ಯದಿಂದ ಈಶಾನ್ಯದವರೆಗೆ ಆಘಾರಹೋಮವನ್ನು ಮಾಡಬೇಕು.

ಹೇ! ದೇವತೆಗಳೇ! ಈ ಯಜ್ಞವು ಸಮಸ್ತರಿಗೂ ಹಿಂಸಾರಹಿತವಾಗಿರಲಿ.

ಏಷ ತೇ ರುದ್ರ ಭಾಗೋ ಯಂ ನಿರಯಾಚಥಾಸ್ತಂ

ಜುಷಸ್ವ ವಿದೇರ್ಗೌಪತ್ಯಗ್ಂ ರಾಯಸ್ಪೋಷಗ್ಂ

ಸುವೀರ್ಯಗ್ಂ ಸಂವಥ್ಸರೀಣಾಗ್ಂ ಸ್ವಸ್ತಿಮ್ ॥

---

ಏಷಃ । ತೇ । ರುದ್ರ । ಭಾಗಃ । ಯಮ್ । ನಿರಯಾಚಥಾ ಇತಿ ನಿಃ-ಅಯಾಚಥಾಃ । ತಮ್ । ಜುಷಸ್ವ । ವಿದೇಃ । ಗೌಪತ್ಯಮ್ । ರಾಯಃ । ಪೋಷಮ್ । ಸುವೀರ್ಯಮಿತಿ ಸು-ವೀರ್ಯಮ್ । ಸಂವಥ್ಸರೀಣಾಮಿತಿ ಸಂ-ವಥ್ಸರೀಣಾಮ್ । ಸ್ವಸ್ತಿಮ್ ॥

---

| ಮಂತ್ರ | ವಿನಿಯೋಗ |
|---|---|
| ಏಷ...ಸ್ವಸ್ತಿಮ್ ॥ | ಮಂಥಿಸಂಸ್ರಾವಹೋಮವನ್ನು ಮಾಡಲು |

---

✦ರುದ್ರ=ರುದ್ರದೇವನೇ! **ಯಮ್ ನಿರಯಾಚಥಾಃ**=ಯಾವ ಭಾಗವನ್ನು ದೇವತೆಗಳಿಂದ ಬೇರೆಯಾಗಿ ಕೇಳಿ ಪಡೆದೆಯೋ; **ಏಷಃ ತೇ ಭಾಗಃ**=ಇದು ನಿನ್ನ ಭಾಗವಾಗಿದೆ; **ತಮ್ ಜುಷಸ್ವ**=ಅದನ್ನು ಸೇವಿಸಿ ತೃಪ್ತನಾಗು; [ನೀನು] **ಗೌಪತ್ಯಮ್**=ಗೋರಕ್ಷಣೆಯನ್ನೂ/ಗೋಸ್ವಾಮಿತ್ವವನ್ನೂ; **ರಾಯಃ ಪೋಷಮ್**=ಧನಸಮೃದ್ಧಿಯನ್ನೂ; **ಸುವೀರ್ಯಮ್**=ಒಳ್ಳೆಯ ಪುತ್ರರನ್ನೂ; **ಸಂವಥ್ಸರೀಣಾಮ್ ಸ್ವಸ್ತಿಮ್**=ಸಂವತ್ಸರದಲ್ಲಿ ಬೆಳೆಯುವ ಸಸ್ಯಗಳ/ಸಂವತ್ಸರ ಕಾಲವಿರುವ ಅಭಿವೃದ್ಧಿಯನ್ನೂ/ಯೋಗಕ್ಷೇಮವನ್ನೂ; **ವಿದೇಃ**=ತಿಳಿದವನಾಗಿದ್ದೀಯೆ.[ಅದೆಲ್ಲವನ್ನೂ ಅನುಗ್ರಹಿಸು]

---

**ಹೇ! ಸೋಮನೇ! ಯಜ್ಞವು ಅಧ್ವರವೆಂದು ಪ್ರಸಿದ್ಧವಾಗಿದೆ. ನೀನು ಸೋಮರಸದಿಂದ ತೃಪ್ತಿಪಟ್ಟು ನಮ್ಮನ್ನೂ ತೃಪ್ತಿಪಡಿಸು.**

**ಈ ಮಂತ್ರದಿಂದ ಆಘಾರಹೋಮವನ್ನು ಅನುಷ್ಠಿಸಬೇಕು. ಈ ಮಂತ್ರದಿಂದ- 'ತಸ್ಮಾತ್ ಯಜ್ಞೋ ವಧೋಽವಧಃ' ಎಂದು ಯಜ್ಞಕ್ಕೆ ಇರುವ ಅಧ್ವರ ಎಂಬ ಹೆಸರನ್ನು-ಸಮರ್ಥಿಸಿರುತ್ತಾರೆ.**

ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್ಸ

ನಾಭಾನೇದಿಷ್ಠಂ ಬ್ರಹ್ಮಚರ್ಯಂ ವಸಂತಂ ನಿರಭಜತ್ಸ

ಆಗಚ್ಛತ್ಸೋಽಬ್ರವೀತ್ಕಥಾ ಮಾ ನಿರಭಾಗಿತಿ

---

ಮನುಃ । ಪುತ್ರೇಭ್ಯಃ । ದಾಯಮ್ । ವೀತಿ । ಅಭಜತ್ । ಸಃ । ನಾಭಾನೇದಿಷ್ಠಮ್ । ಬ್ರಹ್ಮಚರ್ಯಮಿತಿ ಬ್ರಹ್ಮ-ಚರ್ಯಮ್ । ವಸಂತಮ್ । ನಿರಿತಿ । ಅಭಜತ್ । ಸಃ । ಏತಿ । ಆಗಚ್ಛತ್ । ಸಃ । ಅಬ್ರವೀತ್ । ಕಥಾ । ಮಾ । ನಿರಿತಿ । ಅಭಾಕ್ । ಇತಿ ।

---

## ಮಂಥಿಸಂಸ್ರಾವಹೋಮದ ಬ್ರಾಹ್ಮಣ

| | |
|---|---|
| ಮನುಃ ಪುತ್ರೇಭ್ಯಃ ದಾಯಮ್ ವ್ಯಭಜತ್ | ಮನುವು ತನ್ನ ಮಕ್ಕಳಿಗೆ ದಾಯ[ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗ] ವಿಭಾಗವನ್ನು ಮಾಡಿಕೊಟ್ಟನು. |
| ಸಃ *ನಾಭಾನೇದಿಷ್ಠಮ್ ಬ್ರಹ್ಮಚರ್ಯಮ್ ವಸಂತಮ್ ನಿರಭಜತ್ | ಆ ಮನುವು ಬ್ರಹ್ಮಚಾರಿಯಾಗಿ ಗುರುಕುಲ ವಾಸ ಮಾಡುತ್ತಿದ್ದ ನಾಭಾನೇದಿಷ್ಠನೆಂಬ ಕಿರಿಯ ಮಗನಿಗೆ ಭಾಗವನ್ನು ಕೊಡದೆ ಬಿಟ್ಟು ಬಿಟ್ಟನು. |
| ಸಃ ಆಗಚ್ಛತ್ | ಅವನು ವಿದ್ಯಾಭ್ಯಾಸವನ್ನು ಮುಗಿಸಿ ಬಂದನು. |
| ಸಃ ಕಥಾ ಮಾ ನಿರಭಾಕ್ ಇತಿ ಅಬ್ರವೀತ್ | ಅವನು ತನಗೆ ಏಕೆ ಭಾಗವನ್ನು ಕೊಡಲಿಲ್ಲವೆಂದು ತಂದೆಯನ್ನು ಕೇಳಿದನು. |

---

*ಭಾನಾಂ ನೇದಿಷ್ಠಃ=ಭಾನೇದಿಷ್ಠಃ=ತೇಜಸ್ಸುಗಳ ಸಮೀಪದಲ್ಲಿ ಇರುವವನು. ನ ಭಾನೇದಿಷ್ಠಃ= ಅಭಾನೇದಿಷ್ಠಃ=ಹಾಗಿಲ್ಲದಿರುವವನು; ನ ಅಭಾನೇದಿಷ್ಠಃ=ನಾಭಾನೇದಿಷ್ಠಃ=ಹಾಗಿಲ್ಲದೇ ಇರುವವನೇ ಅಲ್ಲ ಅಂದರೆ, ಎಂದೂ ತೇಜಸ್ವಿ=ತೇಜಸ್ವಿತಮ ಎಂಬ ಶಬ್ದಾರ್ಥವನ್ನು ಭ.ಭಾ.ಮಿಶ್ರರು ವಿವರಿಸಿ, ಇದು ಶಬ್ದವ್ಯುತ್ಪತ್ತಿ ಮಾತ್ರವೆಂದೂ ಪೂಜ್ಯರಾದ ಋಷಿಗಳಿಗೆ ಅದು ಸಂಜ್ಞೆ ಎಂದೂ ವಿವರಿಸಿದ್ದಾರೆ.

ನ ತ್ವಾ ನಿರಭಾಕ್ಷಮಿತ್ಯಬ್ರವೀದಂಗಿರಸ ಇಮೇ

ಸತ್ರಮಾಸತೇ ತೇ [(೨೯)ಸುವರ್ಗಂ]ಸುವರ್ಗಂ ಲೋಕಂ

ನ ಪ್ರಜಾನಂತಿ ತೇಭ್ಯ ಇದಂ ಬ್ರಾಹ್ಮಣಂ ಬ್ರೂಹಿ ತೇ

ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ-

---

ನ । ತ್ವಾ । ನಿರಿತಿ । ಅಭಾಕ್ಷಮ್ । ಇತಿ । ಅಬ್ರವೀತ್ । ಅಂಗಿರಸಃ । ಇಮೇ । ಸತ್ರಮ್ ।

ಆಸತೇ । ತೇ ।(೨೯)। ಸುವರ್ಗಮಿತಿ ಸುವಃ-ಗಮ್ । ಲೋಕಮ್ । ನ । ಪ್ರೇತಿ ।

ಜಾನಂತಿ । ತೇಭ್ಯಃ । ಇದಮ್ । ಬ್ರಾಹ್ಮಣಮ್ । ಬ್ರೂಹಿ । ತೇ । ಸುವರ್ಗಮಿತಿ

ಸುವಃ-ಗಮ್ । ಲೋಕಮ್ । ಯಂತಃ । ಯೇ । ಏಷಾಮ್ । ಪಶವಃ ।

---

| | |
|---|---|
| (ಸಃ)ತ್ವಾ ನ ನಿರಭಾಕ್ಷಮ್ ಇತಿ ಅಬ್ರವೀತ್ | [ಅದಕ್ಕೆ] ನಾನು ನಿನಗೆ ಭಾಗವನ್ನು ತಪ್ಪಿಸಿಲ್ಲವೆಂದು ಹೇಳಿದನು. |
| ಇಮೇ ಅಂಗಿರಸಃ ಸತ್ರಮ್ ಆಸತೇ | ಈ ಅಂಗಿರೋಮಹರ್ಷಿಗಳು ಬಹುದಿನಸಾಧ್ಯವಾದ ಸತ್ರಯಾಗವನ್ನು [ಸ್ವರ್ಗವನ್ನು ಪಡೆಯುವುದಕ್ಕಾಗಿ] ಅನುಷ್ಠಿಸುತ್ತಿರುತ್ತಾರೆ. |
| ತೇ ಸುವರ್ಗಮ್ ಲೋಕಮ್ ನ ಪ್ರಜಾನಂತಿ | [ಆದರೆ] ಅವರು ಸ್ವರ್ಗಪ್ರಾಪ್ತಿಯ ಉಪಾಯವನ್ನು ತಿಳಿದಿಲ್ಲ. |
| ತೇಭ್ಯಃ ಇದಮ್ ಬ್ರಾಹ್ಮಣಮ್ ಬ್ರೂಹಿ | ಅವರಿಗೆ ನೀನು ಅಧ್ಯಯನ ಮಾಡಿರುವ ನಾಭಾನೇದಿಷ್ಠಶಸ್ತ್ರ ಮತ್ತು ಅದರ ಬ್ರಾಹ್ಮಣವನ್ನು ತಿಳಿಯ ಹೇಳು. |
| ತೇ ಸುವರ್ಗಮ್ ಲೋಕಮ್ ಯಂತಃ ಯೇ ಏಷಾಮ್ ಪಶವಃ | ಬಳಿಕ ಅವರು ಸ್ವರ್ಗಕ್ಕೆ ಹೋಗುವವರಾಗಿ [ಯಜ್ಞಕ್ಕಾಗಿ ಉಪಯೋಗಿಸಿದ ಮೇಲೆ] ಯಾವ ಪಶುಗಳು ಉಳಿದಿರುತ್ತವೆಯೋ |

ಸ್ತಾಗ್ಂಸ್ತೇ ದಾಸ್ಯಂತೀತಿ ತದೇಭ್ಯೋಽಬ್ರವೀತ್ತೇ ಸುವರ್ಗಂ

ಲೋಕಂ ಯಂತೋ ಯ ಏಷಾಂ ಪಶವ ಆಸನ್ತಾನಸ್ಮಾ

ಅದದುಸ್ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛ-

---

ತಾನ್ । ತೇ । ದಾಸ್ಯಂತಿ । ಇತಿ । ತತ್ । ಏಭ್ಯಃ । ಅಬ್ರವೀತ್ । ತೇ । ಸುವರ್ಗಮಿತಿ

ಸುವಃ-ಗಮ್ । ಲೋಕಮ್ । ಯಂತಃ । ಯೇ । ಏಷಾಮ್ । ಪಶವಃ । ಆಸನ್ । ತಾನ್ ।

ಅಸ್ಮೈ । ಅದದುಃ । ತಮ್ । ಪಶುಭಿರಿತಿ ಪಶು-ಭಿಃ । ಚರಂತಮ್ ।

ಯಜ್ಞವಾಸ್ತಾವಿತಿ ಯಜ್ಞ-ವಾಸ್ತೌ । ರುದ್ರಃ । ಆಗಚ್ಛತ್ ।

---

| | |
|---|---|
| ತಾನ್ ತೇ ದಾಸ್ಯಂತಿ ಇತಿ | ಅವುಗಳನ್ನು ನಿನಗೆ ಕೊಡುತ್ತಾರೆ ಎಂದು ಹೇಳಿದನು. [ಇದು ನಿನ್ನ ಭಾಗವಾಗಿದೆ] |
| ತತ್ ಏಭ್ಯಃ ಅಬ್ರವೀತ್ | ಅದರಂತೆ ನಾಭಾನೇದಿಷ್ಠನು ಅಂಗಿರೋಮಹರ್ಷಿಗಳಿಗೆ ಆ ನಾಭಾನೇದಿಷ್ಠಶಸ್ತ್ರ-ಬ್ರಾಹ್ಮಣಗಳನ್ನು ಹೇಳಿದನು. |
| ತೇ ಸುವರ್ಗಮ್ ಲೋಕಮ್ ಯಂತಃ | ಆ ಅಂಗಿರೋಮಹರ್ಷಿಗಳು ಸತ್ರಯಾಗವನ್ನು ಮುಗಿಸಿ, ಸ್ವರ್ಗಕ್ಕೆ ಹೋಗುತ್ತಾ |
| ಯೇ ಏಷಾಮ್ ಪಶವಃ ಆಸನ್ | ಯಾವ ಪಶುಗಳು ತಮ್ಮದಾಗಿ ಉಳಿದಿದ್ದವೋ |
| ತಾನ್ ಅಸ್ಮೈ ಅದದುಃ | ಆ ಪಶುಗಳನ್ನು ನಾಭಾನೇದಿಷ್ಠನಿಗೆ ಕೊಟ್ಟರು. |

**ಯಜ್ಞಶೇಷವು ರುದ್ರನ ಭಾಗವೆಂಬ ವಿಚಾರ**

| | |
|---|---|
| ಯಜ್ಞವಾಸ್ತೌ ಪಶುಭಿಃ ಚರಂತಮ್ ತಮ್ | ಯಜ್ಞಭೂಮಿಯಲ್ಲಿ ಆ ಅಂಗಿರೋಮುನಿಗಳು ನೀಡಿದ ಪಶುಗಳೊಡನೆ ಸಂಚರಿಸುತ್ತಿದ್ದ ಆ ನಾಭಾನೇದಿಷ್ಠನ ಬಳಿಗೆ |
| ರುದ್ರಃ ಆಗಚ್ಛತ್ | ರುದ್ರದೇವನು ಬಂದನು. |

ಥ್ಸೋಽಬ್ರವೀನ್ಮಮ ವಾ ಇಮೇ ಪಶವ ಇತ್ಯದುರ್ವೈ

[೩೦] ಮಹ್ಯಮಿಮಾನಿತ್ಯಬ್ರವೀನ್ನ ವೈ ತಸ್ಯ ತ ಈಶತ

ಇತ್ಯಬ್ರವೀದ್ಯದ್ಯಜ್ಞವಾಸ್ತೌ ಹೀಯತೇ ಮಮ ವೈ ತದಿತಿ

ತಸ್ಮಾದ್ಯಜ್ಞವಾಸ್ತು ನಾಭ್ಯವೇತ್ಯಗ್ಂ

---

ಸಃ । ಅಬ್ರವೀತ್ । ಮಮ । ವೈ । ಇಮೇ । ಪಶವಃ । ಇತಿ । ಅದುಃ । ವೈ ॥೩೦॥ ಮಹ್ಯಮ್ ।
ಇಮಾನ್ । ಇತಿ । ಅಬ್ರವೀತ್ । ನ । ವೈ । ತಸ್ಯ । ತೇ । ಈಶತೇ । ಇತಿ । ಅಬ್ರವೀತ್ ।
ಯತ್ । ಯಜ್ಞವಾಸ್ತಾವಿತಿ ಯಜ್ಞ–ವಾಸ್ತೌ । ಹೀಯತೇ । ಮಮ । ವೈ । ತತ್ । ಇತಿ ।
ತಸ್ಮಾತ್ । ಯಜ್ಞವಾಸ್ತ್ವಿತಿ ಯಜ್ಞ–ವಾಸ್ತು । ನ । ಅಭ್ಯವೇತ್ಯಮಿತ್ಯಭಿ–ಅವೇತ್ಯಮ್ ।

---

| | |
|---|---|
| ಸಃ ಇಮೇ ಪಶವಃ ಮಮ ವೈ ಇತಿ ಅಬ್ರವೀತ್ | ಆ ರುದ್ರನು ಈ ಪಶುಗಳು ನನ್ನವು ಎಂದು ಹೇಳಿದನು. |
| ಮಹ್ಯಮ್ ಇಮಾನ್ ಅದುಃ ವೈ ಇತಿ ಅಬ್ರವೀತ್ | [ಆ ನಾಭಾನೇದಿಷ್ಠನು] ಈ ಪಶುಗಳನ್ನು ಅಂಗಿರೋಮುನಿಗಳು ನನಗೆ ಕೊಟ್ಟರು. ಆದ್ದರಿಂದ ನನ್ನವೇ ಎಂದನು. |
| ತಸ್ಯ ವೈ ತೇ ನ ಈಶತೇ ಇತಿ ಅಬ್ರವೀತ್ | [ಆಗ ಆ ರುದ್ರನು] ಈ ಯಜ್ಞಶೇಷರೂಪವಾದ ಪಶುಗಳಿಗೆ ಆ ಅಂಗಿರೋಮುನಿಗಳು ಒಡೆಯರಲ್ಲವಾದುದರಿಂದ ಅವರಿತ್ತ ಪಶುಗಳು ನಿನ್ನವಲ್ಲ ಎಂದು ಹೇಳಿದನು. |
| ಯತ್ ಯಜ್ಞವಾಸ್ತೌ ಹೀಯತೇ ತತ್ ಮಮ ವೈ ಇತಿ | ಯಾಗಶಾಲೆಯಲ್ಲಿ ಉಳಿದಿರುವುದೆಲ್ಲವೂ ನನ್ನದು [ಆದ್ದರಿಂದ ಅಂಗಿರಸರು ಈ ಪಶುಗಳಿಗೆ ಒಡೆಯರಲ್ಲ ಎಂದು ರುದ್ರನು ನಾಭಾನೇದಿಷ್ಠನಿಗೆ ಹೇಳಿದನು] |
| ತಸ್ಮಾತ್ ಯಜ್ಞವಾಸ್ತು ನ ಅಭ್ಯವೇತ್ಯಮ್ | ಆದುದರಿಂದ ರುದ್ರನ ಅನುಮತಿಯಿಲ್ಲದೆ ಯಾಗಭೂಮಿಯಲ್ಲಿ ಯಜ್ಞಸಮಾಪ್ತಿಯಾದ ಮೇಲೆ ಪ್ರವೇಶಿಸಬಾರದು. |

॥ ಸೋಽಬ್ರವೀದ್ಯಜ್ಞೇ ಮಾಽಽಭಜಾಥ ತೇ ಪಶೂನ್ನಾಭಿಮಗ್ಗ್ಂಸ್ಯ ಇತಿ ತಸ್ಮಾ ಏತಂ ಮಂಥಿನಸ್ಸಗ್ಗ್ಂಸ್ರಾವಮಜುಹೋ-

---

ಸಃ । ಅಬ್ರವೀತ್ । ಯಜ್ಞೇ । ಮಾ । ಆ । ಭಜ । ಅಥ । ತೇ । ಪಶೂನ್ । ನ । ಅಭೀತಿ। ಮಗ್ಗ್ಂಸ್ಯೇ । ಇತಿ । ತಸ್ಮೈ । ಏತಮ್ । ಮಂಥಿನಃ । ಸಗ್ಗ್ಂಸ್ರಾವಮಿತಿ ಸಂ-ಸ್ರಾವಮ್ । ಅಜುಹೋತ್ ।

---

ಮಂಥಿಸಂಸ್ರಾವಹೋಮವಿಧಿ; ಅರ್ಥವಾದ

| | |
|---|---|
| ಸಃ ಯಜ್ಞೇ ಮಾ ಆ ಭಜ ಅಥ ತೇ ಪಶೂನ್ ನ ಅಭಿಮಗ್ಗ್ಂಸ್ಯೇ ಇತಿ ಅಬ್ರವೀತ್ | ಆ ರುದ್ರನು 'ಯಜ್ಞದಲ್ಲಿ ನನ್ನನ್ನು ಆರಾಧಿಸು. ಅನಂತರ ನಾನು ನಿನ್ನ ಪಶುಗಳನ್ನು ಹಿಂಸಿಸುವುದಿಲ್ಲ/ಹಿಡಿಯುವುದಿಲ್ಲ',ಎಂದು ಹೇಳಿದನು. |
| ತಸ್ಮೈ ಏತಮ್ ಮಂಥಿನಃ ಸಗ್ಗ್ಂಸ್ರಾವಮ್ ಅಜುಹೋತ್ | ನಾಭಾನೇದಿಷ್ಠನು ರುದ್ರನಿಗಾಗಿ ಮಂಥಿ ಸಂಸ್ರಾವಹೋಮವನ್ನು ಮಾಡಿದನು. |

---

ಈ ಆಘಾರಹೋಮದಿಂದ ಸೋಮಾಹುತಿಗಳು ಸ್ಥಾನವುಳ್ಳವುಗಳಾಗುತ್ತವೆ. ಹೀಗೆ ತಿಳಿದವನೂ ಲೋಕದಲ್ಲಿ ಉತ್ತಮಸ್ಥಾನವನ್ನು ಪಡೆಯುತ್ತಾನೆ. ಈ ಸೋಮಾಘಾರದಿಂದ ದ್ಯಾವಾಪೃಥಿವಿಗಳು ತೃಪ್ತಿ ಹೊಂದಿ ಜೀವನಾಧಾರವಾಗುತ್ತವೆ. ಹೀಗೆ ತಿಳಿದವನೂ ಬೇರೆಯವರಿಗೆ ಜೀವನಾಶ್ರಯನಾಗುತ್ತಾನೆ. ಇದು ಜ್ಞಾನದ ಪ್ರಶಂಸೆಯಾಗಿದೆ.

ಈ ಮಂಥಿಸಂಸ್ರಾವಹೋಮವು ರುದ್ರನ ಭಾಗವಾಗಿದೆ. ರುದ್ರನು ಇದನ್ನು ಕೇಳಿ ಪಡೆದಿರುತ್ತಾನೆ.

ಹೇ! ರುದ್ರನೇ! ನೀನು ಈ ಹೋಮವನ್ನು ಕೇಳಿ ಪಡೆದಿರುವೆ. ಈ ಹವಿರ್ಭಾಗವನ್ನು ಸೇವಿಸಿ, ನೀನು ತೃಪ್ತನಾಗು. ನೀನು ಪ್ರಸನ್ನನಾಗಿ ಪಶು-ಪುತ್ರ-ಸಸ್ಯಾದಿಗಳನ್ನು ಕರುಣಿಸು. ಈ ಹೋಮದಿಂದ ಪ್ರಸನ್ನನಾದ ರುದ್ರನು ನಮಗೆ ಸರ್ವವಿಧವಾದ ಸ್ವಸ್ತಿಯನ್ನೂ ನೀಡಲಿ.

ತ್ತತೋ ವೈ ತಸ್ಯ ರುದ್ರಃ ಪಶೂನ್ನಾಭ್ಯಮನ್ಯತ ಯತ್ರೈತ

ಮೇವಂ ವಿದ್ವಾನ್ಮಂಥಿನಸ್ಸಗ್ಂಸ್ರಾವಂ ಜುಹೋತಿ

---

ತತಃ । ವೈ । ತಸ್ಯ । ರುದ್ರಃ । ಪಶೂನ್ । ನ । ಅಭೀತಿ । ಅಮನ್ಯತ । ಯತ್ರ । ಏತಮ್ ।

ಏವಮ್ । ವಿದ್ವಾನ್ । ಮಂಥಿನಃ । ಸಗ್ಂಸ್ರಾವಮಿತಿ ಸಂ–ಸ್ರಾವಮ್ । ಜುಹೋತಿ ।

---

| | |
|---|---|
| ತತಃ ವೈ ತಸ್ಯ ಪಶೂನ್ ರುದ್ರಃ ನ ಅಭ್ಯಮನ್ಯತ | ಬಳಿಕ ರುದ್ರನು ಅವನ ಪಶುಗಳನ್ನು ಹಿಂಸಿಸಲಿಲ್ಲ. |
| ಯತ್ರ ಏವಮ್ ವಿದ್ವಾನ್ ಏತಮ್ ಮಂಥಿನಃ ಸಗ್ಂಸ್ರಾವಮ್ ಜುಹೋತಿ | ಎಲ್ಲಿ ವಿದ್ವಾಂಸನಾದ ಯಜಮಾನನು ಹೀಗೆ ಸಂಸ್ರಾವಹೋಮವನ್ನು ಅನುಷ್ಠಿಸುತ್ತಾನೆಯೋ |

---

ಮಂಥಿಸಂಸ್ರಾವಹೋಮವನ್ನು ವಿಧಿಸುವ ಬ್ರಾಹ್ಮಣದಲ್ಲಿ ಈ ನಾಭಾನೇದಿಷ್ಠನ ಉಪಾಖ್ಯಾನವು ಬಂದಿದೆ. ಮಕ್ಕಳೆಲ್ಲರಿಗೂ ಪಾಲನ್ನು ಕೊಡಬೇಕೆಂಬ ವಿಷಯದಲ್ಲಿ ಆಪಸ್ತಂಬರು ***ಮನುಃ ಪುತ್ರೇಭ್ಯಃ ದಾಯಂ ವ್ಯಭಜತ್** ಎಂದು ಉದಾಹರಿಸಿರುತ್ತಾರೆ. ಈ ಪ್ರಕರಣವು ಮಂಥಿಸಂಸ್ರಾವಹೋಮದ ಬ್ರಾಹ್ಮಣವಾಗಿ ಇಲ್ಲಿ ಬಂದಿದೆ.

ಮನುವು ತನ್ನ ಮಕ್ಕಳಿಗೆ ಪಿತ್ರಾರ್ಜಿತಆಸ್ತಿಯಲ್ಲಿ ವಿಭಾಗ ಮಾಡಿ ಕೊಡುವಾಗ ಕಿರಿಯವನಾದ ನಾಭಾನೇದಿಷ್ಠನಿಗೆ ಭಾಗವನ್ನು ಕೊಡದೆ ಬಿಡುತ್ತಾನೆ. ಗುರುಕುಲದಿಂದ ಹಿಂದಿರುಗಿ ಬಂದ ಅವನು ಭಾಗವನ್ನು ಕೇಳಿದಾಗ ನಾಭಾನೇದಿಷ್ಠ ಶಸ್ತ್ರ ಮತ್ತು ಬ್ರಾಹ್ಮಣವನ್ನು ಹೇಳಿ ಅದನ್ನು ಅಂಗಿರೋಮಹರ್ಷಿಗಳ ಯಾಗದಲ್ಲಿ ಹೇಳುವಂತೆ ತಿಳಿಸುತ್ತಾನೆ. ನಾಭಾನೇದಿಷ್ಠನು ಅಂತೆಯೇ ಮಾಡಿ ಯಾಗವು ಮುಗಿದ ನಂತರ ಅಲ್ಲಿರುವ ಪಶುಗಳನ್ನು ಪಡೆಯಲು ಯತ್ನಿಸುತ್ತಾನೆ. ರುದ್ರನು ಯಜ್ಞಭೂಮಿಯಲ್ಲಿ ಉಳಿಯುವ ವಸ್ತುಗಳಿಗೆ ತಾನು ಒಡೆಯನೆಂದೂ ತನಗೆ ಹವಿರ್ಭಾಗವನ್ನಿತ್ತರೆ ಮಾತ್ರ ಪಶುಗಳನ್ನು ಪಡೆಯಬಹುದೆಂದೂ ಹೇಳುತ್ತಾನೆ.

---

*ಆಪ.ಧ.ಸೂತ್ರ.೨.೧೪.೧೧

ನ ತತ್ರ ರುದ್ರಃ ಪಶೂನಭಿಮನ್ಯತೇ ॥೩೧-9॥

[ದಧಾತ್ವಾಯತನವತೀರ್ಯಾ ಉಪಜೀವನೀಯೋ ಭವತಿ

ತೇಽದುರ್ವ್ಯೈ ಯತ್ರ್ಯೈತಮೇಕಾದಶ ಚ ॥]

---

ನ । ತತ್ರ । ರುದ್ರಃ । ಪಶೂನ್ । ಅಭೀತಿ । ಮನ್ಯತೇ ॥೩೧॥

---

| | |
|---|---|
| ತತ್ರ ರುದ್ರಃ ಪಶೂನ್ ನ ಅಭಿಮನ್ಯತೇ | ಅಲ್ಲಿ ರುದ್ರನು ಪಶುಗಳನ್ನು ಹಿಂಸಿಸುವುದಿಲ್ಲ. |

---

ಅಂತೆಯೇ ನಾಭಾನೇದಿಷ್ಠನು ಮಂಥಿಸಂಸ್ರಾವಹೋಮವನ್ನು ಅನುಷ್ಠಿಸಿ ಪಶುಗಳನ್ನು ಪಡೆಯುತ್ತಾನೆ.

ಇದು ಮಂಥಿಸಂಸ್ರಾವಹೋಮದ ವಿಧಿ ಮತ್ತು ಅರ್ಥವಾದವಾಗಿದೆ.

ಯಜ್ಞವು ಸಮಾಪ್ತಿಯಾದ ಮೇಲೆ ರುದ್ರನ ಅನುಮತಿಯಿಲ್ಲದೆ ಯಾಗಭೂಮಿಯನ್ನು ಪ್ರವೇಶಿಸಬಾರದು ಎಂದು ಶ್ರುತಿಯು ತಿಳಿಸುತ್ತಿದೆ.

ಯಜ್ಞಸಮಾಪ್ತಿ ಎಂದರೆ ಅಗ್ನಿಗಳು ಆರುವವರೆಗೆ ಎಂದು ಕೆಲವರು ಹೇಳುತ್ತಾರೆ. ಮಳೆಯು ಬೀಳುವವರೆಗೆ ಎಂದೂ ಕೆಲವರು ಹೇಳುತ್ತಾರೆ. ಹೀಗೆ ಯಾಗ ಸಮಾಪ್ತಿಯು ಎಲ್ಲಿಯವರೆಗೆ ಆದ ಮೇಲೆ ಎಂಬುದರಲ್ಲಿ ಅಭಿಪ್ರಾಯಭೇದಗಳಿವೆ ಎಂದು ಮಿಶ್ರರು ತಿಳಿಸಿರುತ್ತಾರೆ.



## ॥ ದಶಮೋಽನುವಾಕಃ ॥

**ಜುಷ್ಟೋ ವಾಚೋ ಭೂಯಾಸಂ ಜುಷ್ಟೋ ವಾಚಸ್ಪತಯೇ ದೇವಿ ವಾಕ್ । ಯದ್ವಾಚೋ ಮಧುಮತ್ತಸ್ಮಿನ್ಮಾ ಧಾಃ ಸ್ವಾಹಾ ಸರಸ್ವತ್ಯೈ ॥**

---

ಜುಷ್ಟಃ । ವಾಚಃ । ಭೂಯಾಸಮ್ । ಜುಷ್ಟಃ । ವಾಚಃ । ಪತಯೇ । ದೇವಿ । ವಾಕ್ ॥

ಯತ್ । ವಾಚಃ । ಮಧುಮದಿತಿ ಮಧು-ಮತ್ । ತಸ್ಮಿನ್ನ್ । ಮಾ । ಧಾಃ ।

ಸ್ವಾಹಾ । ಸರಸ್ವತ್ಯೈ ॥

---

ಒಂಭತ್ತನೆಯ ಅನುವಾಕದಲ್ಲಿ ಆಘಾರ-ಸಂಸ್ರಾವಹೋಮಾದಿಗಳು ಹೇಳಲ್ಪಟ್ಟವು. ಈ ಹತ್ತನೆಯ ಅನುವಾಕದಲ್ಲಿ ಪ್ರವೃತಹೋಮಾದಿಗಳು ಹೇಳಲ್ಪಡುತ್ತವೆ.

ಋತ್ವಿಗ್ವರಣಾನಂತರ ಆ ಪ್ರವೃತರಾದ ಋತ್ವಿಜರು ಎರಡು ಪ್ರವೃತಹೋಮಗಳನ್ನು ಅನುಷ್ಠಿಸಬೇಕು.

| ಮಂತ್ರ | ವಿನಿಯೋಗ |
|---|---|
| **ಜುಷ್ಟೋ...ಸರಸ್ವತ್ಯೈ ॥** | ಮೊದಲನೆಯ ಪ್ರವೃತಹೋಮವನ್ನು ಮಾಡಲು |

---

✦[ನಾನು] **ವಾಚಃ**=ವಾಗ್ದೇವಿಗೆ; **ಜುಷ್ಟಃ**=ಪ್ರಿಯನಾದವನು; **ಭೂಯಾಸಮ್**= ಆಗುವೆನು; **ವಾಚಃ ಪತಯೇ**=ಮಾತಿನ ಪಾಲಕನಾದ ದೇವನಿಗೆ/ಮನಸ್ಸಿಗೆ/ಪ್ರಾಣಕ್ಕೆ; **ಜುಷ್ಟಃ**=ಇಷ್ಟನಾದವನಾಗಿ; **ಭೂಯಾಸಮ್**=ಆಗುವೆನು; **ದೇವಿ ವಾಕ್**= ವಾಗ್ದೇವಿಯೇ! **ವಾಚಃ ಯತ್ ಮಧುಮತ್**=ಮಾತಿನ ಮಧುರವಾದ ಪದಸಮೂಹವು ಯಾವುದಿದೆಯೋ; **ತಸ್ಮಿನ್ ಮಾ ಧಾಃ**=ಅದರಲ್ಲಿ ನನ್ನನ್ನು ನೆಲೆಗೊಳಿಸು. **ಸರಸ್ವತ್ಯೈ ಸ್ವಾಹಾ**= ಸರಸ್ವತೀದೇವಿಗೆ ಈ ಆಜ್ಯವು ಹುತವಾಗಲಿ.

ಋಚಾ ಸ್ತೋಮಗ್ಂ ಸಮರ್ಧಯ ಗಾಯತ್ರೇಣ ರಥಂತರಮ್ । ಬೃಹದ್ಗಾಯತ್ರವರ್ತನಿ ॥

---

ಋಚಾ । ಸ್ತೋಮಮ್ । ಸಮಿತಿ । ಅರ್ಧಯ । ಗಾಯತ್ರೇಣ । ರಥಂತರಮಿತಿ ರಥಮ್-ತರಮ್ ॥ ಬೃಹತ್ । ಗಾಯತ್ರವರ್ತನೀತಿ ಗಾಯತ್ರ-ವರ್ತನಿ ॥

---

| ಮಂತ್ರ | ವಿನಿಯೋಗ |
|---|---|
| ಋಚಾ...ಗಾಯತ್ರವರ್ತನಿ ॥ | ಎರಡನೆಯ ಪ್ರವೃತಹೋಮದ ಮಂತ್ರ. |

---

✦[ವಾಗ್ದೇವಿಯೇ!] **ಋಚಾ**=ಸಾಮಾಧಾರಭೂತವಾದ ಋಕ್ಕುಗಳಿಂದ; **ಸ್ತೋಮಮ್**=ಸಾಮಸ್ತೋತ್ರಗಳನ್ನು/ಸಾಮಾವೃತ್ತಿಗಳನ್ನು; **ಸಮರ್ಧಯ**= ಸಮೃದ್ಧವನ್ನಾಗಿ ಮಾಡು. **ಗಾಯತ್ರೇಣ ರಥಂತರಮ್**=ಗಾಯತ್ರಸಾಮದಿಂದ ರಥಂತರಸ್ತೋತ್ರವನ್ನು; ಸಮರ್ಧಯ=ಸಮೃದ್ಧಿಗೊಳಿಸು. ***ಗಾಯತ್ರವರ್ತನಿ**= ಗಾಯತ್ರಸಾಮದ ಮಾರ್ಗವಿರುವಂತೆ; **ಬೃಹತ್** ಸಮರ್ಧಯ=ಬೃಹತ್ಸ್ತೋತ್ರ ವನ್ನು ಪರಿಪೂರ್ಣವನ್ನಾಗಿ ಮಾಡು.

---

ನಾನು ವಾಗ್ದೇವಿಗೂ, ಮಾತಿನ ಪಾಲಕನಾದ ದೇವನಿಗೆ/ಮನಸ್ಸಿಗೆ/ಪ್ರಾಣಕ್ಕೆ ಪ್ರಿಯನಾಗುವಂತಾಗಲಿ. ವಾಗ್ದೇವಿಯೇ! ನಿನ್ನ ಮಧುರವಾದ ಪದಗಳಲ್ಲಿ ನನ್ನನ್ನು ನೆಲೆಗೊಳಿಸು. ಈ ಆಜ್ಯವು ವಾಗ್ದೇವಿಯಾದ ಸರಸ್ವತಿಗೆ ಹುತವಾಗಲಿ.

ವಾಗ್ದೇವಿಯೇ! ಸಾಮಾಧಾರಭೂತವಾದ ಋಕ್ಕುಗಳಿಂದ ಸ್ತೋತ್ರಗಳನ್ನು ಸಂಪೂರ್ಣವಾಗುವಂತೆ ಮಾಡು. ಗಾಯತ್ರಸಾಮದಿಂದ ಬೃಹತ್-ರಥಂತರ ಸ್ತೋತ್ರಗಳನ್ನು ಪರಿಪೂರ್ತಿಗೊಳಿಸು. ನಿನ್ನ ಅನುಗ್ರಹದಿಂದ ನಮ್ಮ ಋಕ್ಸಾಮಾದಿ ಗಳು ನ್ಯೂನತೆಯು ಇಲ್ಲದೆ ಪರಿಪೂರ್ಣವಾಗಲಿ.

---

* ಗಾಯತ್ರಸ್ಯ ವರ್ತನೀ ಯಸ್ಯ ತತ್=ಗಾಯತ್ರವರ್ತನಿ-ಬೃಹತ್

**ಯಸ್ತೇ ದ್ರಪ್ಸಃ ಸ್ಕಂದತಿ ಯಸ್ತೇ ಅಗ್ಂಶುರ್ಬಾಹುಚ್ಯುತೋ ಧಿಷಣಯೋರುಪಸ್ಥಾತ್ । ಅಧ್ವರ್ಯೋರ್ವಾ ಪರಿ ಯಸ್ತೇ ಪವಿತ್ರಾಥ್ಸ್ವಾಹಾಕೃತಮಿಂದ್ರಾಯ ತಂ ಜುಹೋಮಿ ॥**

---

ಯಃ । ತೇ । ದ್ರಪ್ಸಃ । ಸ್ಕಂದತಿ । ಯಃ । ತೇ । ಅಗ್ಂಶುಃ । ಬಾಹುಚ್ಯುತ ಇತಿ ಬಾಹು-ಚ್ಯುತಃ । ಧಿಷಣಯೋಃ । ಉಪಸ್ಥಾದಿತ್ಯುಪ-ಸ್ಥಾತ್ ॥ ಅಧ್ವರ್ಯೋಃ । ವಾ । ಪರೀತಿ । ಯಃ । ತೇ । ಪವಿತ್ರಾತ್ । ಸ್ವಾಹಾಕೃತಮಿತಿ ಸ್ವಾಹಾ-ಕೃತಮ್ । ಇಂದ್ರಾಯ । ತಮ್ । ಜುಹೋಮಿ ॥

---

| ಮಂತ್ರ | ವಿನಿಯೋಗ |
|---|---|
| ಯಸ್ತೇ...ಜುಹೋಮಿ ॥ | ಮೂರು ವೈಪ್ರುಷಹೋಮಗಳಲ್ಲಿ ಮೊದಲನೆಯ ವೈಪ್ರುಷಹೋಮದ ಮಂತ್ರ |

---

✦[ಎಲೈ! ಸೋಮನೇ! ] **ಯಃ ತೇ ದ್ರಪ್ಸಃ**=ಯಾವ ನಿನ್ನ ಸೋಮರಸದ ಬಿಂದುವು; **ಸ್ಕಂದತಿ**=ಹಾರುತ್ತದೆಯೋ; **ಧಿಷಣಯೋಃ ಉಪಸ್ಥಾತ್**=ಅಧಿಷವಣಫಲಕಗಳ ಮೇಲ್ಭಾಗದಿಂದ [ಹೊರಬೀಳುತ್ತದೆಯೋ] [ಅಥವಾ] **ಅಧ್ವರ್ಯೋಃ ಬಾಹುಚ್ಯುತಃ**=ಅಧ್ವರ್ಯುವಿನ ತೋಳಿನಿಂದ ಜಾರಿ; **ಪರಿ**=ಸುತ್ತಲೂ [ನೆಲದಲ್ಲಿ ಬೀಳುತ್ತದೆಯೋ] **ಪವಿತ್ರಾತ್**=ದಶಾಪವಿತ್ರದಿಂದ; **ಯಃ ತೇ ದ್ರಪ್ಸಃ**=ಯಾವ ನಿನ್ನ ಸೋಮರಸವು [ಬೀಳುತ್ತದೆಯೋ] **ವಾ**=ಅಥವಾ; **ತೇ**=ನಿನ್ನ; **ಯಃ ಅಗ್ಂಶುಃ**=ಯಾವ ಬಳ್ಳಿಯ ಚೂರು [ಸೋಮಲತೆಯ ಚೂರು] [ಅಧ್ವರ್ಯುವಿನ ಬಾಹು ಮೊದಲಾದವುಗಳಿಂದ ಜಾರಿ ನೆಲದಲ್ಲಿ ಬೀಳುತ್ತದೆಯೋ] **ತಮ್**=ಆ ಸೋಮರಸಬಿಂದುವನ್ನು /ಸೋಮವಲ್ಲಿಯ ಚೂರನ್ನು; **ಸ್ವಾಹಾಕೃತಮ್**=ಸ್ವಾಹಾಕಾರ ಮಾಡಿ;**ಇಂದ್ರಾಯ ಜುಹೋಮಿ**=ಇಂದ್ರನಿಗಾಗಿ ಹೋಮವನ್ನು ಮಾಡುತ್ತೇನೆ.

**ಯೋ ದ್ರಪ್ಸೋ ಅಗ್ಂಶುಃ ಪತಿತಃ ಪೃಥಿವ್ಯಾಂ ಪರಿವಾಪಾ**

**[..ವಾಪಾತ್(೩೨)ಪ್ರರೋಡಾ...]ತ್ಪುರೋಡಾಶಾತ್ಕರಂಭಾತ್ ।**

**ಧಾನಾಸೋಮಾನ್ಮಂಥಿನ ಇಂದ್ರ ಶುಕ್ರಾಥ್ಸ್ವಾಹಾಕೃತ**

**ಮಿಂದ್ರಾಯ ತಂ ಜುಹೋಮಿ ॥**

---

**ಯಃ । ದ್ರಪ್ಸಃ । ಅಗ್ಂಶುಃ । ಪತಿತಃ । ಪೃಥಿವ್ಯಾಮ್ । ಪರಿವಾಪಾದಿತಿ ಪರಿ-ವಾಪಾತ್ । ಪುರೋಡಾಶಾತ್ । ಕರಂಭಾತ್ ॥ ಧಾನಾಸೋಮಾದಿತಿ ಧಾನಾ-ಸೋಮಾತ್ । ಮಂಥಿನಃ । ಇಂದ್ರ । ಶುಕ್ರಾತ್ । ಸ್ವಾಹಾಕೃತಮಿತಿ ಸ್ವಾಹಾ-ಕೃತಮ್ । ಇಂದ್ರಾಯ । ತಮ್ । ಜುಹೋಮಿ ॥**

---

| ಮಂತ್ರ | ವಿನಿಯೋಗ |
|---|---|
| **ಯೋ ದ್ರಪ್ಸೋ...ಜುಹೋಮಿ ॥** | ಎರಡನೆಯ ವೈಪ್ರುಷಹೋಮದ ಮಂತ್ರ. |

---

✦**ಇಂದ್ರ**=ಹೇ! ಇಂದ್ರನೇ! **ಯಃ ದ್ರಪ್ಸಃ**=ಯಾವ ಸೋಮರಸದ ಬಿಂದುವು; [ಮತ್ತು] **ಅಗ್ಂಶುಃ**=ಸೋಮಲತೆಯ ಚೂರು; **ಪೃಥಿವ್ಯಾಮ್**=ಭೂಮಿಯಲ್ಲಿ; **ಪತಿತಃ**=ಬಿದ್ದಿದೆಯೋ; **ಪರಿವಾಪಾತ್**=ಸವನೀಯಹವಿಸ್ಸಾದ ಲಾಜದಿಂದಲೂ; **ಪುರೋಡಾಶಾತ್**=ಪುರೋಡಾಶದಿಂದಲೂ; **ಕರಂಭಾತ್**=ಸಕ್ತುಪಿಷ್ಟದಿಂದಲೂ; **ಧಾನಾಸೋಮಾತ್**=ಹುರಿದ ಯವಧಾನ್ಯದಿಂದಲೂ, ಸೋಮದಿಂದಲೂ, ಪಯಸ್ಯೆಯಿಂದಲೂ; **ಮಂಥಿನಃ ಶುಕ್ರಾತ್**=ಮಂಥಿ-ಶುಕ್ರಗ್ರಹಗಳಿಂದಲೂ; ಪೃಥಿವ್ಯಾಮ್ ಪತಿತಃ=ಭೂಮಿಯಲ್ಲಿ ಬಿದ್ದಿದೆಯೋ; **ತಮ್**=ಅದನ್ನು; **ಸ್ವಾಹಾಕೃತಮ್**=ಸ್ವಾಹಾಕಾರಪೂರ್ವಕವಾಗಿ; **ಇಂದ್ರಾಯ ಜುಹೋಮಿ**=ಇಂದ್ರನಿಗೆ ಸಮರ್ಪಿಸುತ್ತೇನೆ.

---

**ಸೋಮಲತೆಯನ್ನು ಅಧಿಷವಣಫಲಕಗಳ ಮೇಲೆ ಇಟ್ಟು ಕುಟ್ಟುವಾಗ ಸೋಮರಸದ**

**ಯಸ್ತೇ ದ್ರಪ್ಸೋ ಮಧುಮಾಗ್ಂ ಇಂದ್ರಿಯಾವಾನ್ಥ್ಸ್ವಾಹಾಕೃತಃ ಪುನರಪ್ಯೇತಿ ದೇವಾನ್ । ದಿವಃ ಪೃಥಿವ್ಯಾಃ ಪರ್ಯಂತರಿಕ್ಷಾಥ್ಸ್ವಾಹಾಕೃತಮಿಂದ್ರಾಯ ತಂ ಜುಹೋಮಿ ॥**

---

ಯಃ । ತೇ । ದ್ರಪ್ಸಃ । ಮಧುಮಾನಿತಿ ಮಧು–ಮಾನ್ । ಇಂದ್ರಿಯಾವಾನಿತೀಂದ್ರಿಯ–ವಾನ್ । ಸ್ವಾಹಾಕೃತ ಇತಿ ಸ್ವಾಹಾ–ಕೃತಃ । ಪುನಃ । ಅಪ್ಯೇತೀತ್ಯಪಿ–ಏತಿ । ದೇವಾನ್ ॥ ದಿವಃ । ಪೃಥಿವ್ಯಾಃ । ಪರೀತಿ । ಅಂತರಿಕ್ಷಾತ್ । ಸ್ವಾಹಾಕೃತಮಿತಿ ಸ್ವಾಹಾ–ಕೃತಮ್ । ಇಂದ್ರಾಯ । ತಮ್ । ಜುಹೋಮಿ ॥

---

| ಮಂತ್ರ | ವಿನಿಯೋಗ |
|---|---|
| **ಯಸ್ತೇ ದ್ರಪ್ಸಃ....ಜುಹೋಮಿ ॥** | ಮೂರನೆಯ ವೈಪ್ರುಷಹೋಮವನ್ನು ಮಾಡಲು. |

---

✦[ಎಲೈ! ಸೋಮನೇ!] **ಮಧುಮಾನ್**=ಮಧುರವಾಗಿರುವ; **ಇಂದ್ರಿಯಾವಾನ್**=ಇಂದ್ರಿಯಶಕ್ತಿಯನ್ನುಂಟುಮಾಡುವ; **ಯಃ ತೇ ದ್ರಪ್ಸಃ**=ಯಾವ ನಿನ್ನ ರಸದ ಬಿಂದುವು; **ದಿವಃ**=ದ್ಯುಲೋಕದಿಂದಲೂ; **ಪೃಥಿವ್ಯಾಃ**=ಭೂಮಿಯಿಂದಲೂ; **ಅಂತರಿಕ್ಷಾತ್**=ಅಂತರಿಕ್ಷದಿಂದಲೂ; **ಪರಿ**=ಸುತ್ತಲೂ ಚ್ಯುತವಾಗಿ; **ಸ್ವಾಹಾಕೃತಃ**=[ನನ್ನಿಂದ] ಸ್ವಾಹಾಕಾರಪೂರ್ವಕವಾಗಿ ಕೊಡಲ್ಪಟ್ಟು; **ಪುನಃ**=ಮತ್ತೆ; **ದೇವಾನ್ ಅಪ್ಯೇತಿ**=ದೇವತೆಗಳನ್ನು ಹೊಂದುತ್ತದೆಯೋ; **ತಮ್**=ಆ ಸೋಮರಸದ ಬಿಂದುವನ್ನು; **ಸ್ವಾಹಾಕೃತಮ್**=ಸ್ವಾಹಾಕಾರದಿಂದ ಕೊಡಲ್ಪಟ್ಟದ್ದನ್ನಾಗಿ ಮಾಡಿ; **ಇಂದ್ರಾಯ ಜುಹೋಮಿ**=ಇಂದ್ರನಿಗಾಗಿ ಹೋಮ ಮಾಡುತ್ತೇನೆ.

---

ಬಿಂದುವಾಗಲೀ, ಸೋಮಲತೆಯ ಚೂರಾಗಲೀ ಜಾರಿ ನೆಲಕ್ಕೆ ಬೀಳಬಹುದು. ಆದನ್ನು ಸ್ವಾಹಾಕಾರಪೂರ್ವಕವಾಗಿ ಇಂದ್ರನಿಗೆ ಸಮರ್ಪಿಸುತ್ತೇನೆ.

# ಅಧ್ವರ್ಯುರ್ವಾ ಋತ್ವಿಜಾಂ ಪ್ರಥಮೋ ಯುಜ್ಯತೇ ತೇನ ಸ್ತೋಮೋ ಯೋಕ್ತವ್ಯ ಇತ್ಯಾಹು

---

ಅಧ್ವರ್ಯುಃ । ವೈ । ಋತ್ವಿಜಾಮ್ । ಪ್ರಥಮಃ । ಯುಜ್ಯತೇ । ತೇನ । ಸ್ತೋಮಃ । ಯೋಕ್ತವ್ಯಃ । ಇತಿ । ಆಹುಃ ।

---

## ಬಹಿಷ್ಪವಮಾನಸ್ತೋತ್ರಕ್ಕಾಗಿ ತೆರಳುವಾಗ ಅಧ್ವರ್ಯುವು ಹೇಳಬೇಕಾದ; ಮಂತ್ರದ ವಿಧಿ

| ಬ್ರಾಹ್ಮಣಭಾಗ | ವಿವರಣೆ |
|---|---|
| ಋತ್ವಿಜಾಮ್ ಅಧ್ವರ್ಯುಃ ವೈ | ಋತ್ವಿಜರಲ್ಲಿ ಅಧ್ವರ್ಯುವೇ |
| ಪ್ರಥಮಃ ಯುಜ್ಯತೇ | ಮೊದಲನೆಯವನಾಗಿ ಹೋಗುತ್ತಾನೆ. |
| ತೇನ ಸ್ತೋಮಃ ಯೋಕ್ತವ್ಯಃ | ಅವನಿಂದಲೇ ಬಹಿಷ್ಪವಮಾನಸ್ತೋತ್ರವು |
| ಇತಿ ಆಹುಃ | ಆರಂಭಿಸಲ್ಪಡಬೇಕೆಂದು ತಿಳಿದವರು ಹೇಳುತ್ತಾರೆ. |

---

ಪರಿವಾಪಾದಿಗಳು ಸವನೀಯಯಾಗದ ಹವಿಸ್ಸುಗಳು. ಅವುಗಳ ಅಂಶವು ಭೂಮಿಗೆ ಬಿದ್ದರೆ, ಸೋಮದ ಅಂಶಗಳು ಭೂಮಿಗೆ ಬಿದ್ದರೆ, ಮಂಥಿ-ಶುಕ್ರಗ್ರಹಗಳಲ್ಲಿರುವ ಲೇಶವು ನೆಲಕ್ಕೆ ಬಿದ್ದರೆ ಅವೆಲ್ಲವನ್ನೂ ಸ್ವಾಹಾಕಾರಪೂರ್ವಕವಾಗಿ ಇಂದ್ರನಿಗೆ ಸಮರ್ಪಿಸುತ್ತೇನೆ.

ಎಲೈ! ಸೋಮನೇ! ನಿನ್ನ ರಸವು ಮಧುರವಾದುದು. ಇಂದ್ರಿಯಶಕ್ತಿಯನ್ನು ವೃದ್ಧಿ ಮಾಡಬಲ್ಲದು. ಇದರ ಬಿಂದುವು ಲೋಕತ್ರಯದಲ್ಲಿ ಸುತ್ತಲೂ ಹಾರಿ ಸ್ವಾಹಾಕಾರ ಪೂರ್ವಕವಾಗಿ ಕೊಡಲ್ಪಟ್ಟು, ಮತ್ತೆ ದೇವತೆಗಳನ್ನು ಸೇರುತ್ತದೆ. ಇಂತಹ ಸ್ಕನ್ನವಾದ ಸೋಮರಸಬಿಂದುವನ್ನು 'ಸ್ವಾಹಾ' ಎಂದು ಹೇಳಿ ಇಂದ್ರನಿಗಾಗಿ ಕೊಡುತ್ತೇನೆ.

ಬಹಿಷ್ಪವಮಾನಸ್ತೋತ್ರಕ್ಕಾಗಿ ಅಧ್ವರ್ಯು, ಪ್ರಸ್ತೋತಾ, ಪ್ರತಿಹರ್ತಾ, ಉದ್ಗಾತಾ, ಬ್ರಹ್ಮಾ, ಹಾಗೂ ಯಜಮಾನ- ಈ ಆರು ಜನರು ಇದೇ ಕ್ರಮದಲ್ಲಿ ಹೋಗುತ್ತಾರೆ. ಆಗ ಅಧ್ವರ್ಯುವು ದರ್ಭಮುಷ್ಟಿಯನ್ನು ಕೈಯಲ್ಲಿ ಹಿಡಿದು ಅಲ್ಲಾಡಿಸುತ್ತಾ ಮುಂದೆ ಹೋಗುತ್ತಾನೆ. ಅವನು ಆಗ ಹೇಳಬೇಕಾದ ಮಂತ್ರದ ವಿಧಿಗಾಗಿ ಈ ಬ್ರಾಹ್ಮಣವಿದೆ.

ವಾಗಗ್ರೇಗಾ ಅಗ್ರ ಏತ್ವೃಜುಗಾ ದೇವೇಭ್ಯೋ

ಯಶೋ ಮಯಿ ದಧತೀ ಪ್ರಾಣಾನ್ಪಶುಷು ಪ್ರಜಾಂ

ಮಯಿ [(೩೩)] ಚ ಯಜಮಾನೇ ಚೇತ್ಯಾಹ

---

ವಾಕ್ । ಅಗ್ರೇಗಾ ಇತ್ಯಗ್ರೇ-ಗಾಃ । ಅಗ್ರೇ । ಏತು । ಋಜುಗಾ ಇತ್ಯೃಜು-ಗಾಃ । ದೇವೇಭ್ಯಃ । ಯಶಃ । ಮಯಿ । ದಧತೀ । ಪ್ರಾಣಾನಿತಿ ಪ್ರ-ಅನಾನ್ । ಪಶುಷು । ಪ್ರಜಾಮಿತಿ ಪ್ರ-ಜಾಮ್ । ಮಯಿ ।[೩೩]। ಚ । ಯಜಮಾನೇ । ಚ । ಇತಿ । ಆಹ ।

---

| ಮಂತ್ರ | ವಿನಿಯೋಗ |
|---|---|
| ವಾಗಗ್ರೇಗಾ....ಯಜಮಾನೇ ಚ ॥ | ಅಧ್ವರ್ಯುವು ಪಠಿಸಲು |

---

✦**ಅಗ್ರೇಗಾಃ**=ಮುಂದೆ ಹೋಗಲು ಸಮರ್ಥವಾಗಿರುವ; **ದೇವೇಭ್ಯಃ**=ದೇವತೆಗಳನ್ನು ಹೊಂದಲು; **ಋಜುಗಾಃ**=ನೇರವಾಗಿ ಹೋಗುವ; **ವಾಕ್**=ವಾಗ್ದೇವಿಯು; **ಮಯಿ**=[ಅಧ್ವರ್ಯುವಾದ]ನನ್ನಲ್ಲಿ; **ಯಶಃ ದಧತೀ**=ಯಶಸ್ಸನ್ನು ನೆಲೆಗೊಳಿಸುತ್ತಾ; **ಪಶುಷು ಪ್ರಾಣಾನ್**=[ಯಜಮಾನನ] ಗವಾದಿಪಶುಗಳಲ್ಲಿ ಪ್ರಾಣಗಳನ್ನೂ; ದಧತೀ=ನೆಲೆಗೊಳಿಸುತ್ತಾ; **ಮಯಿ ಚ ಯಜಮಾನೇ ಚ**=ಅಧ್ವರ್ಯುವಾದ ನನ್ನಲ್ಲಿಯೂ, ಯಜಮಾನನಲ್ಲಿಯೂ; **ಪ್ರಜಾಮ್** ದಧತೀ=ಪುತ್ರಾದಿಪ್ರಜೆಗಳನ್ನು ಪೋಷಿಸುತ್ತಾ; **ಅಗ್ರೇ ಏತು**=[ಯಾಗದ ಆರಂಭವಾಗಿರುವ ಬಹಿಷ್ಪವಮಾನಸ್ತೋತ್ರದಲ್ಲಿ] ಮುಂದೆ ಬರಲಿ.

---

| | |
|---|---|
| ಇತಿ ಆಹ | ಹೀಗೆ ಶ್ರುತಿಯು ಹೇಳುತ್ತದೆ. |

---

ಮೊದಲನೆಯವನಾಗಿ ಹೋಗುವ ಅಧ್ವರ್ಯುವೇ ಸ್ತೋತ್ರವನ್ನು ಆರಂಭಿಸಲು ಅನುಜ್ಞೆಯನ್ನು ಕೊಡುವುದು ಯುಕ್ತವೆಂದು ತಿಳಿದವರು ಹೇಳುತ್ತಾರೆ.

ವಾಗ್ದೇವಿಯು ಅಗ್ರಗಾಮಿನಿ. ಆಕೆಯು ದೇವತೆಗಳ ಬಳಿಗೆ ಸರಳಮಾರ್ಗದಿಂದ ಒಯ್ಯತಕ್ಕವಳು. ಆಕೆಯು ನನ್ನಲ್ಲಿ ಯಶಸ್ಸನ್ನು ಉಂಟುಮಾಡಲಿ. ನನ್ನಲ್ಲಿಯೂ ಯಜಮಾನನಲ್ಲಿಯೂ ಪ್ರಜಾಸಮೃದ್ಧಿಯನ್ನು ಉಂಟು ಮಾಡಲಿ.

ವಾಚಮೇವ ತದ್ಯಜ್ಞಮುಖೇ ಯುನಕ್ತಿ ವಾಸ್ತು ವಾ

ಏತದ್ಯಜ್ಞಸ್ಯ ಕ್ರಿಯತೇ ಯದ್ಗ್ರಹಾನ್ಗೃಹೀತ್ವಾ

ಬಹಿಷ್ಪವಮಾನಗ್ಂ ಸರ್ಪಂತಿ

---

ವಾಚಮ್ । ಏವ । ತತ್ । ಯಜ್ಞಮುಖ ಇತಿ ಯಜ್ಞ–ಮುಖೇ । ಯುನಕ್ತಿ ।

ವಾಸ್ತು । ವೈ । ಏತತ್ । ಯಜ್ಞಸ್ಯ । ಕ್ರಿಯತೇ । ಯತ್ । ಗ್ರಹಾನ್ । ಗೃಹೀತ್ವಾ ।

ಬಹಿಷ್ಪವಮಾನಮಿತಿ ಬಹಿಃ–ಪವಮಾನಮ್ । ಸರ್ಪಂತಿ ।

---

| | |
|---|---|
| ತತ್ ಯಜ್ಞಮುಖೇ ವಾಚಮ್ ಏವ ಯುನಕ್ತಿ | [ಈ ಮಂತ್ರಪಾಠದಿಂದ] ಅಧ್ವರ್ಯುವು ಯಜ್ಞದ ಪ್ರಾರಂಭದ ಬಹಿಷ್ಪವಮಾನಸ್ತೋತ್ರದಲ್ಲಿ ವಾಕ್ಕನ್ನು ನೆಲೆಗೊಳಿಸುತ್ತಾನೆ. |

**ಕಾಲವಿಧಿ; ಪ್ರಶಂಸೆ**

| | |
|---|---|
| ಗ್ರಹಾನ್ ಗೃಹೀತ್ವಾ | [ಐಂದ್ರವಾಯವಾದಿಯಾದ ಋತುಗ್ರಹಗ್ರಹಣಕ್ಕೆ ಮೊದಲಿರುವ] ಸೋಮಗ್ರಹಗಳನ್ನು ಗ್ರಹಣ ಮಾಡಿ |
| ಬಹಿಷ್ಪವಮಾನಮ್ ಸರ್ಪಂತಿ [ಇತಿ] ಯತ್ | ಋತ್ವಿಜರು ಬಹಿಷ್ಪವಮಾನಸ್ತೋತ್ರಕ್ಕಾಗಿ ಹೊರಡುತ್ತಾರೆ ಎಂಬುದು ಯಾವುದುಂಟೋ |
| ಏತತ್ ಯಜ್ಞಸ್ಯ ವಾಸ್ತು ಕ್ರಿಯತೇ ವೈ | ಇದು ಯಜ್ಞಕ್ಕೆ ಗೃಹವನ್ನೇ ಮಾಡಿದಂತಾಗುತ್ತದೆ. |

---

ಐಂದ್ರವಾಯವಾದಿಗ್ರಹಗಳನ್ನು ಗ್ರಹಣ ಮಾಡಿದ ನಂತರ ಬಹಿಷ್ಪವಮಾನ ಸ್ತೋತ್ರಕ್ಕೆ ಋತ್ವಿಜರು ಹೊರಡಬೇಕು.ಇದರಿಂದ ಯಜ್ಞಕ್ಕೆ ನೆಲೆಸಲು ಮನೆಯನ್ನು ಮಾಡಿದಂತಾಗುತ್ತದೆ.

ಬಹಿಷ್ಪವಮಾನಸ್ತೋತ್ರಕ್ಕಾಗಿ ಋತ್ವಿಜರು ಹಿಂದಿರುಗದೇ ಹೋಗುವುದರಿಂದಲೂ, ಸ್ತೋತ್ರವನ್ನು ಆವೃತ್ತಿ ಇಲ್ಲದೆ ಪಾಠ ಮಾಡುವುದರಿಂದಲೂ, ಯಜ್ಞದ ವಿಚ್ಛಿತ್ತಿಯಾದಂತೆ ಆಗಬಹುದು. ಇದಕ್ಕಾಗಿ ಹಿಂದಿರುಗಿದ ನಂತರ ಯಜಮಾನನು ವಿಷ್ಣುದೇವತಾಕ

ಪರಾಂಚೋ ಹಿ ಯಂತಿ ಪರಾಚೀಭಿಃ ಸ್ತುವತೇ

ವೈಷ್ಣವ್ಯರ್ಚಾ ಪುನರೇತ್ಯೋಪತಿಷ್ಠತೇ ಯಜ್ಞೋ ವೈ

ವಿಷ್ಣುರ್ಯಜ್ಞಮೇವಾಕ

---

ಪರಾಂಚಃ । ಹಿ । ಯಂತಿ । ಪರಾಚೀಭಿಃ । ಸ್ತುವತೇ । ವೈಷ್ಣವ್ಯಾ । ಋಚಾ । ಪುನಃ । ಏತ್ಯೇತ್ಯಾ-ಇತ್ಯ । ಉಪೇತಿ । ತಿಷ್ಠತೇ । ಯಜ್ಞಃ । ವೈ । ವಿಷ್ಣುಃ । ಯಜ್ಞಮ್ । ಏವ । ಅಕಃ ।

---

ವೈಷ್ಣವೀ ಋಕ್ಕಿನಿಂದ ಉಪಸ್ಥಾನವಿಧಿ;

| | |
|---|---|
| ಪರಾಂಚಃ ಹಿ ಯಂತಿ | ಋತ್ವಿಜರು [ಬಹಿಷ್ಪವಮಾನಸ್ತೋತ್ರಕ್ಕಾಗಿ] ಹಿಂದಿರುಗದೇ ಹೋಗುತ್ತಾರೆ. ಹೀಗಿರುವುದರಿಂದಲೂ |
| ಪರಾಚೀಭಿಃ ಸ್ತುವತೇ | ಆವೃತ್ತಿಯಿಲ್ಲದ ಋಕ್ಕುಗಳಿಂದ ಸ್ತೋತ್ರವನ್ನು ಮಾಡುತ್ತಾರೆ. ಹೀಗಿರುವುದರಿಂದ [ಯಜ್ಞವಿಚ್ಛಿತ್ತಿಯಾದಂತೆ ಆಗಬಹುದು] |
| ಪುನಃ ಏತ್ಯ | ಬಹಿಷ್ಪವಮಾನಾನಂತರ ಹಿಂದಿರುಗಿ ಬಂದ ಮೇಲೆ |
| ವೈಷ್ಣವ್ಯಾ ಋಚಾ | [ಯಜಮಾನನು] ವಿಷ್ಣುದೇವತಾಕವಾದ ಋಕ್ಕಿನಿಂದ |
| ಉಪತಿಷ್ಠತೇ | ಉಪಸ್ಥಾನ ಮಾಡಬೇಕು. |
| ಯಜ್ಞಃ ವೈ ವಿಷ್ಣುಃ | ವ್ಯಾಪಕನಾದ ವಿಷ್ಣುವು ಯಜ್ಞಸ್ವರೂಪನಷ್ಟೆ. ಈ |
| ಯಜ್ಞಮ್ ಏವ ಅಕಃ | ಉಪಸ್ಥಾನದಿಂದ ಯಜ್ಞವನ್ನೇ ಮಾಡಿದವನಾಗುತ್ತಾನೆ. [ಇದರಿಂದ ಯಜ್ಞವಿಚ್ಛಿತ್ತಿಯಾಗದು] |

---

ವಾದ ಋಕ್ಕಿನಿಂದ ಉಪಸ್ಥಾನವನ್ನು ಮಾಡಬೇಕು.ವಿಷ್ಣುವೇ ಯಜ್ಞಸ್ವರೂಪನು. ಆತನು ಯಜ್ಞವಿಚ್ಛಿತ್ತಿಯಾಗದಂತೆ ಮಾಡಿ ನಮಗೆ ಸುಖವನ್ನು ಕೊಡಲಿ. ಅವನು ನಮ್ಮ ಅಪರಾಧಗಳನ್ನು ಸಹಿಸಿ ಕ್ಷಮಿಸುವವನು.

ವಿಷ್ಣೋ ತ್ವಂ ನೋ ಅಂತಮಶ್ಶರ್ಮ ಯಚ್ಛ ಸಹಂತ್ಯ ।
ಪ್ರ ತೇ ಧಾರಾ ಮಧುಶ್ಚುತ ಉಥ್ಸಂ ದುಹ್ರತೇ ಅಕ್ಷಿತ
ಮಿತ್ಯಾಹ ಯದೇವಾಸ್ಯ ಶಯಾನಸ್ಯೋಪಶುಷ್ಯತಿ

---

ವಿಷ್ಣೋ ಇತಿ । ತ್ವಮ್ । ನಃ । ಅಂತಮಃ । ಶರ್ಮ । ಯಚ್ಛ । ಸಹಂತ್ಯ ॥ ಪ್ರೇತಿ । ತೇ ।
ಧಾರಾಃ । ಮಧುಶ್ಚುತ ಇತಿ ಮಧು-ಶ್ಚುತಃ । ಉಥ್ಸಮ್ । ದುಹ್ರತೇ । ಅಕ್ಷಿತಮ್ ।
ಇತಿ । ಆಹ । ಯತ್ । ಏವ । ಅಸ್ಯ । ಶಯಾನಸ್ಯ । ಉಪಶುಷ್ಯತೀತ್ಯುಪ-ಶುಷ್ಯತಿ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋ...ಅಕ್ಷಿತಮ್ ॥ | ಯಜಮಾನನು ಉಪಸ್ಥಾನ ಮಾಡಲು |

---

✦**ವಿಷ್ಣೋ**=ಪರಮಾತ್ಮನಾದ ವಿಷ್ಣುದೇವನೇ!; **ಸಹಂತ್ಯ**=ನಮ್ಮ ಅಪರಾಧಗಳನ್ನು ಸಹಿಸಿ ಕ್ಷಮಿಸುವವನೇ!; **ತ್ವಮ್**=ನೀನು; **ನಃ ಅಂತಮಃ**=ನಮಗೆ ಹತ್ತಿರದವನಾಗಿರುತ್ತೀಯೆ; **ಶರ್ಮ ಯಚ್ಛ**=ನಮಗೆ ಸುಖವನ್ನು ಕೊಡು. [ಸೋಮದೇವನೇ!] **ಮಧುಶ್ಚುತಃ**=ಮಧುರವಾದ ರಸವನ್ನು ಸುರಿಸುವ; **ತೇ**=ನಿನ್ನ; **ಧಾರಾಃ**=ರಸ ಪ್ರವಾಹಗಳು; **ಅಕ್ಷಿತಮ್**=ಕ್ಷಯರಹಿತವಾದ; **ಉಥ್ಸಮ್**=ಪ್ರವಾಹವನ್ನು; **ಪ್ರ ದುಹ್ರತೇ**=ಹೆಚ್ಚಾಗಿ ಸುರಿಸಲಿ.

| ಬ್ರಾಹ್ಮಣಭಾಗ | ವಿವರಣೆ |
|---|---|
| ಇತಿ ಆಹ | ಹೀಗೆಂದು ಈ ಮಂತ್ರವು ಹೇಳುತ್ತದೆ. |
| ಶಯಾನಸ್ಯ ಅಸ್ಯ | ಮೊದಲೇ ಹಿಡಿದಿಟ್ಟಿರುವುದರಿಂದ ಮಲಗಿದಂತಿರುವ ಈ ಸೋಮರಸದ |
| ಯತ್ ಉಪಶುಷ್ಯತಿ | ಯಾವ ಭಾಗವು ಒಣಗಿದಂತೆ ಇದೆಯೋ |

ತದೇವಾಸ್ಯೈತೇನಾಪ್ಯಾಯಯತಿ ॥೩೪-10॥

[ಪರಿವಾಪಾತ್ತ್ರಜಾಂ ಮಯಿ ದುಹ್ರತೇ ಚತುರ್ದಶ ಚ ॥]

ತತ್ । ಏವ । ಅಸ್ಯ । ಏತೇನ । ಏತಿ । ಪ್ಯಾಯಯತಿ ॥೩೪॥

| | |
|---|---|
| ಏತೇನ ಅಸ್ಯ ತತ್ ಆಪ್ಯಾಯಯತಿ ಏವ | ಈ ಮಂತ್ರದಿಂದ ಅದನ್ನೇ ಪುನಃ ವೃದ್ಧಿ ಹೊಂದುವಂತೆ ಮಾಡುತ್ತಾನೆ. |

ಸೋಮದೇವನೇ! ನೀನು ಸೋಮರಸವು ಕ್ಷೀಣವಾಗದಂತೆ ಮಾಡಿ ಯಜ್ಞವನ್ನು ಪೂರ್ಣ ಮಾಡಿ ಇಷ್ಟಸಿದ್ಧಿಯನ್ನು ಉಂಟು ಮಾಡು.

ಯಜ್ಞವನ್ನೂ, ವಿಷ್ಣುವನ್ನೂ, ಸೋಮನನ್ನೂ ಅಭೇದದಿಂದ ಸ್ತುತಿಸಲಾಗಿದೆ.

## ವಿನಿಯೋಗಸಂಗ್ರಹ

ಜುಷ್ಟೋ1-2 ದ್ವೇ ಪ್ರವತೇ ಯೋಽಸೌ ಜುಹುಯಾದಾಹುತಿದ್ವಯಮ್ ।
3-5ಯಸ್ತ್ರಿಭಿರ್ವ್ಯೃಷೋ ಹೋಮೋ 6ವಾಗಧ್ವರ್ಯುರ್ಬ್ರವೀತಿ ಹಿ ।
7ವಿಷ್ಣೋ ಸೋಮಂ ಸ್ಪೃಶೇದತ್ರ ಮಂತ್ರಾಃ ಸಪ್ತ ಪ್ರಕೀರ್ತಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-7

## ॥ ಏಕಾದಶೋಽನುವಾಕಃ ॥

ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ ।

ಯಶಸಂ ವೀರವತ್ತಮಮ್ ॥

---

ಅಗ್ನಿನಾ । ರಯಿಮ್ । ಅಶ್ನವತ್ । ಪೋಷಮ್ । ಏವ । ದಿವೇದಿವ ಇತಿ ದಿವೇ-ದಿವೇ ॥ ಯಶಸಮ್ । ವೀರವತ್ತಮಮಿತಿ ವೀರವತ್-ತಮಮ್ ॥

---

ಹತ್ತನೆಯ ಅನುವಾಕದಲ್ಲಿ ಬಹಿಷ್ಪವಮಾನಾಂಗವಾದ ಮಂತ್ರಗಳು ಹೇಳಲ್ಪಟ್ಟವು. ಈ ಹನ್ನೊಂದನೆಯ ಅನುವಾಕದಲ್ಲಿ ಕಾಮ್ಯೇಷ್ಟಿ ಯಾಜ್ಯಾ-ಪುರೋನುವಾಕ್ಯೆಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಅಗ್ನಿನಾ...ವೀರವತ್ತಮಮ್ ॥ | ಯಾಗಸಪ್ತಕವುಳ್ಳ ಚಿತ್ರಾಯಾಗದಲ್ಲಿ ಮೊದಲನೆಯದಾದ ಆಗ್ನೇಯಯಾಗದ ಪುರೋನುವಾಕ್ಯೆ. |

---

✦[ಜನವೆಲ್ಲವೂ] **ಅಗ್ನಿನಾ**= ಅಗ್ನಿಯಿಂದ; **ರಯಿಮ್**=ಧನವನ್ನು; **ಅಶ್ನವತ್**= ಹೊಂದುತ್ತದೆ; **ದಿವೇದಿವೇ**=ಪ್ರತಿದಿನವೂ; **ಪೋಷಮ್ ಏವ**=ವೃದ್ಧಿಹೊಂದುತ್ತಿರುವ; **ಯಶಸಮ್**=ಯಶಸ್ಸುಳ್ಳ; **ವೀರವತ್ತಮಮ್**=ಒಳ್ಳೆಯ ಮಕ್ಕಳೆಂಬ [ಸಂಪತ್ತನ್ನೂ ಹೊಂದುತ್ತದೆ] [ಅಗ್ನಿಯೇ!] [ಅಂತಹ ಸಂಪತ್ತನ್ನು ನಮಗೆ ಕೊಡು.]

---

ಅಗ್ನಿದೇವನ ಅನುಗ್ರಹದಿಂದ ಜನವೆಲ್ಲವೂ ದಿನದಿನವೂ ವೃದ್ಧಿ ಹೊಂದುವ ಧನವನ್ನೂ, ಯಶಸ್ಸನ್ನು ಪಡೆದ ಉತ್ತಮ ಪುತ್ರಸಂಪತ್ತನ್ನೂ ಹೊಂದುತ್ತದೆ. ಅಂತಹ ಸಂಪತ್ತನ್ನು ಅಗ್ನಿಯು ಅನುಗ್ರಹಿಸಲಿ.

**ಗೋಮಾಗ್ಂ ಅಗ್ನೇಽವಿಮಾಗ್ಂ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ । ಇಡಾವಾಗ್ಂ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ॥**

---

ಗೋಮಾನಿತಿ ಗೋ-ಮಾನ್ । ಅಗ್ನೇ । ಅವಿಮಾನಿತ್ಯವಿ-ಮಾನ್ । ಅಶ್ವೀ । ಯಜ್ಞಃ । ನೃವತ್ಸಖೇತಿ ನೃವತ್-ಸಖಾ । ಸದಮ್ । ಇತ್ । ಅಪ್ರಮೃಷ್ಯ ಇತ್ಯಪ್ರ-ಮೃಷ್ಯಃ ॥ ಇಡಾವಾನಿತೀಡಾ-ವಾನ್ । ಏಷಃ । ಅಸುರ । ಪ್ರಜಾವಾನಿತಿ ಪ್ರಜಾ-ವಾನ್ । ದೀರ್ಘಃ । ರಯಿಃ । ಪೃಥುಬುಧ್ನ ಇತಿ ಪೃಥು-ಬುಧ್ನಃ । ಸಭಾವಾನಿತಿ ಸಭಾ-ವಾನ್ ॥

---

**ಗೋಮಾಗ್ಂ...ಸಭಾವಾನ್ ॥** ಚಿತ್ರಾಯಾಗದ ಆಗ್ನೇಯ ಹವಿಸ್ಸಿನ ಯಾಜ್ಯಾನುವಾಕ್ಯೆ.

---

✦ಅಸುರ=ಪ್ರಾಣಪ್ರದನಾದ; ಅಗ್ನೇ=ಅಗ್ನಿದೇವನೇ! ಏಷಃ ಯಜ್ಞಃ=[ಮತ್ತೆ ಮತ್ತೆ ಮಾಡಲ್ಪಡುತ್ತಿರುವ] ಈ ಯಾಗಸಮೂಹವು; **ಗೋಮಾನ್**=ಒಳ್ಳೆಯ ಗೋವುಗಳಿಂದ ಕೂಡಿದುದೂ; **ಅವಿಮಾನ್**=ಕುರಿಗಳಿಂದ ಕೂಡಿದುದೂ, **ಅಶ್ವೀ**=ಕುದುರೆಗಳಿಂದ ಕೂಡಿದುದೂ; **ನೃವತ್ಸಖಾ**=ಮನುಷ್ಯರಾದ ಋತ್ವಿಜರಿಂದ ಕೂಡಿದ ದೇವತೆಗಳಿಂದ ಯುಕ್ತವಾದುದೂ; **ಸದಮ್ ಇತ್**=ಯಾವಾಗಲೂ; **ಅಪ್ರಮೃಷ್ಯಃ**=ತಿರಸ್ಕರಿಸಲು ಅಸಾಧ್ಯವಾದುದೂ; **ಇಡಾವಾನ್**=ಅನ್ನಯುಕ್ತವಾದುದೂ; **ಪ್ರಜಾವಾನ್**=ಪುತ್ರಸಂಪತ್ಪ್ರದವಾದುದೂ; **ದೀರ್ಘಃ**=ಅವಿಚ್ಛಿನ್ನವಾದುದೂ; **ರಯಿಃ**=ಸಂಪತ್ಪ್ರದವಾದುದೂ; **ಪೃಥುಬುಧ್ನಃ**=ವಿಸ್ತೀರ್ಣವಾದ ಮೂಲವುಳ್ಳದುದೂ /ಮೂಲಭೂತವಾದ ಮಂತ್ರಗಳಲ್ಲಿಯೂ, ಅನುಷ್ಠಾನಗಳಲ್ಲಿಯೂ ವೈಕಲ್ಯರಹಿತವಾದುದೂ; **ಸಭಾವಾನ್**=ಒಳ್ಳೆಯ ವಿದ್ವಾಂಸರಿಂದ ಕೂಡಿದ ಸಭೆಯಿಂದ ಕೂಡಿದುದೂ [ಆಗಲಿ]

---

ಅಗ್ನಿದೇವನು ಪ್ರಾಣಪ್ರದನು. ಆತನು ಅನುಗ್ರಹದಿಂದ ಸಂಪತ್ತನ್ನೂ ಕೊಡಲಿ. ಯಜ್ಞಾನುಷ್ಠಾನವು ನ್ಯೂನತೆಯಿಲ್ಲದೆ ಸಾಂಗವಾಗಿ ನಡೆದು ನಮ್ಮ ಸಕಲ ಇಷ್ಟಾರ್ಥಗಳನ್ನೂ ನಾವು ಪಡೆಯುವಂತಾಗಲಿ.

# ಆ ಪ್ಯಾಯಸ್ವ* ಸಂ ತೇ ।

ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ । ಭವಾ ವಾಜಸ್ಯ ಸಂಗಥೇ ॥ ಸಂ ತೇ ಪಯಾಗ್ಂಸಿ ಸಮು ಯಂತು ವಾಜಾಸ್ಸಂವೃಷ್ಣಿಯಾನ್ಯಭಿಮಾತಿಷಾಹಃ । ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಗ್ಂಸ್ಯುತ್ತಮಾನಿ ಧಿಷ್ವ ॥

---

ಏತಿ । ಪ್ಯಾಯಸ್ವ । ಸಮಿತಿ । ಏತು । ತೇ । ವಿಶ್ವತಃ । ಸೋಮ । ವೃಷ್ಣಿಯಮ್ ॥ ಭವ । ವಾಜಸ್ಯ । ಸಂಗಥ ಇತಿ ಸಂ-ಗಥೇ ॥ ಸಮಿತಿ । ತೇ । ಪಯಾಗ್ಂಸಿ । ಸಮಿತಿ । ಉ । ಯಂತು । ವಾಜಾಃ । ಸಮಿತಿ । ವೃಷ್ಣಿಯಾನಿ । ಅಭಿಮಾತಿಷಾಹ ಇತ್ಯಭಿಮಾತಿ-ಸಾಹಃ । ಆಪ್ಯಾಯಮಾನಃ । ಅಮೃತಾಯ । ಸೋಮ । ದಿವಿ । ಶ್ರವಾಗ್ಂಸಿ । ಉತ್ತಮಾನೀತ್ಯುತ್-ತಮಾನಿ । ಧಿಷ್ವ ॥

---

**ಆಪ್ಯಾಯಸ್ವ...ಸಂಗಥೇ ॥** ಚಿತ್ರಾಯಾಗದ ಸೌಮ್ಯ ಹವಿಸ್ಸಿನ ಪುರೋನುವಾಕ್ಯೆ.

**ಸಂ ತೇ...ಧಿಷ್ವ ॥** ಸೌಮ್ಯ ಹವಿಸ್ಸಿನ ಯಾಜ್ಯಾನುವಾಕ್ಯೆ.

---

✦**ಸೋಮ**=ಸೋಮದೇವನೇ! **ಆಪ್ಯಾಯಸ್ವ**=ನೀನು ವೃದ್ಧಿಹೊಂದು; **ತೇ**=ನಿನ್ನ/ನಿನ್ನಿಂದ; **ವೃಷ್ಣಿಯಮ್**=ಶಕ್ತಿಯು; **ವಿಶ್ವತಃ**=ಎಲ್ಲ ಕಡೆಗಳಿಂದಲೂ; **ಸಮ್ ಏತು**=ನಮ್ಮನ್ನು ಸೇರಿಕೊಳ್ಳಲಿ; **ವಾಜಸ್ಯ**=ಅನ್ನದ; **ಸಂಗಥೇ**=ಸೇರಿಕೊಳ್ಳುವಿಕೆಯಲ್ಲಿ; **ಭವ**=ನೀನು ಅನುಗ್ರಹಪ್ರದನಾಗು; ✦**ಸೋಮ**=ಸೋಮದೇವನೇ! **ಅಭಿಮಾತಿಷಾಹಃ**=ಪಾಪನಾಶಕನಾದ/ಶತ್ರುನಾಶಕನಾದ; **ತೇ**=ನಿನ್ನ [ಅನುಗ್ರಹದಿಂದ] **ಪಯಾಗ್ಂಸಿ** = ಕ್ಷೀರಾದಿಗಳು; **ಸಮ್ ಉ ಯಂತು**=ನಮ್ಮನ್ನು ಬಂದು ಸೇರಲಿ. **ವಾಜಾಃ**=ಅನ್ನಗಳೂ;

---

* ಈ ಎರಡು ಮಂತ್ರಗಳು ನಾಲ್ಕನೆಯ ಕಾಂಡದಲ್ಲಿ ಆಮ್ನಾತವಾಗಿವೆ. ಇಲ್ಲಿ ಅವುಗಳ ಪ್ರತೀಕವಿದೆ.

ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ ।
ಅಸ್ಮಾಕಮಸ್ತು ಕೇವಲಃ ॥

---

ಇಹ । ತ್ವಷ್ಟಾರಮ್ । ಅಗ್ರಿಯಮ್ । ವಿಶ್ವರೂಪಮಿತಿ ವಿಶ್ವ-ರೂಪಮ್ । ಉಪೇತಿ। ಹ್ವಯೇ ॥ ಅಸ್ಮಾಕಮ್ । ಅಸ್ತು । ಕೇವಲಃ ॥

---

ಇಹ...ಕೇವಲಃ ॥ ಚಿತ್ರಾಯಾಗದ ತ್ವಾಷ್ಟ್ರಹವಿಸ್ಸಿನ ಪುರೋನುವಾಕ್ಯೆ.

---

**ಸಮ್ ಉ ಯಂತು**=ಬಂದು ನಮ್ಮನ್ನು ಕೂಡಿಕೊಳ್ಳಲಿ; **ಆಪ್ಯಾಯಮಾನಃ**=ನೀನು ವೃದ್ಧಿ ಹೊಂದಿದವನಾಗಿ; **ಅಮೃತಾಯ**= [ನಮ್ಮ] ಮರಣವಿಲ್ಲದಿರುವಿಕೆಗಾಗಿ/ ಶಾಶ್ವತಸುಖಕ್ಕಾಗಿ; **ದಿವಿ**=ದ್ಯುಲೋಕದಲ್ಲಿ; **ಉತ್ತಮಾನಿ ಶ್ರವಾಗ್ಂಸಿ**=ಉತ್ತಮವಾದ ಶ್ರೇಯಸ್ಕರವಾದ ಅನ್ನಗಳನ್ನು; **ಧಿಷ್ವ**=ಅನುಗ್ರಹಿಸು. ✦**ಇಹ**=ಈ ಯಾಗ ಕರ್ಮದಲ್ಲಿ; **ಅಗ್ರಿಯಮ್**=ಶ್ರೇಷ್ಠನಾದ; **ವಿಶ್ವರೂಪಮ್**=ಗರ್ಭದಲ್ಲಿ ವಿವಿಧ ರೂಪಗಳನ್ನು ಮಾಡುವ ವಿಶ್ವರೂಪನಾದ; **ತ್ವಷ್ಟಾರಮ್**=ತ್ವಷ್ಟೃದೇವನನ್ನು; **ಉಪಹ್ವಯೇ**=ಆಹ್ವಾನಿಸುತ್ತೇನೆ. **ಅಸ್ಮಾಕಮ್**=ನಮಗೆ; **ಕೇವಲಃ ಅಸ್ತು**=[ಅವನು] ಅಸಾಧಾರಣರಕ್ಷಕನಾಗಲಿ.

---

ಸೋಮದೇವನೇ! ನೀನು ವೃದ್ಧಿಹೊಂದು. ನಿನ್ನ ಅನುಗ್ರಹದಿಂದ ನಮಗೆ ಎಲ್ಲ ಕಡೆಗಳಿಂದಲೂ ಸರ್ವವಿಧವಾದ ಶಕ್ತಿಯೂ ಪ್ರಾಪ್ತವಾಗಲಿ. ಅನ್ನಸಮೃದ್ಧಿಯೂ ಲಭಿಸಲಿ. ಹೀಗೆ ಅನುಗ್ರಹಿಸು.

ಸೋಮದೇವನೇ! ನೀನು ಪಾಪಪರಿಹಾರಕನು. ನಿನ್ನ ಅನುಗ್ರಹದಿಂದ ಕ್ಷೀರಾದಿಗಳೂ, ಅನ್ನಸಮೃದ್ಧಿಯೂ, ಸರ್ವವಿಧವಾದ ಬಲಗಳೂ ನಮಗೆ ಲಭಿಸಲಿ. ನೀನು ನಮಗೆ ಅಮೃತತ್ವವನ್ನು ಕೊಡು. ದೇವಲೋಕದಲ್ಲಿ ಉತ್ತಮವಾದ ಅನ್ನವು ಸಿಕ್ಕುವಂತೆ ಮಾಡು. ದೇವತೆಗಳಿಗೆ ಕೊಡಲು ಉತ್ತಮವಾದ ಹವಿಸ್ಸನ್ನು ಕರುಣಿಸು.

'ರೇತಸ ಏವ ಸಿಕ್ತಸ್ಯ ಬಹುಶೋ ರೂಪಾಣಿ ವಿಕರೋತಿ' ಎಂಬ ಶ್ರುತಿಯಂತೆ ತ್ವಷ್ಟೃದೇವನು ವಿಶ್ವರೂಪಗಳಿಗೆ ಕಾರಣನಾದ ಶ್ರೇಷ್ಠದೇವನು. ಆ ದೇವನನ್ನು ಈ

ತನ್ನಸ್ತುರೀಪಮಧ ಪ್ರೋಷಯಿತ್ನು ದೇವತ್ವಷ್ಟರ್ವಿ ರರಾಣಃ ಸ್ಯಸ್ವ । ಯತೋ ವೀರಃ[(೧)ಕರ್ಮಣ್ಯಃ] ಕರ್ಮಣ್ಯ ಸ್ಸುದಕ್ಷೋ ಯುಕ್ತಗ್ರಾವಾ ಜಾಯತೇ ದೇವಕಾಮಃ ॥

---

ತತ್ । ನಃ । ತುರೀಪಮ್ । ಅಧ । ಪ್ರೋಷಯಿತ್ನು । ದೇವ । ತ್ವಷ್ಟಃ । ವೀತಿ । ರರಾಣಃ । ಸ್ಯಸ್ವ ॥ ಯತಃ । ವೀರಃ ।೩೫। ಕರ್ಮಣ್ಯಃ । ಸುದಕ್ಷ ಇತಿ ಸು-ದಕ್ಷಃ । ಯುಕ್ತಗ್ರಾವೇತಿ ಯುಕ್ತ-ಗ್ರಾವಾ । ಜಾಯತೇ । ದೇವಕಾಮ ಇತಿ ದೇವ-ಕಾಮಃ ॥

---

ತನ್ನಸ್ತುರೀಪಂ...ಕಾಮಃ ॥ ಚಿತ್ರಾಯಾಗದ ತ್ವಾಷ್ಟ್ರ ಹವಿಸ್ಸಿನ ಯಾಜ್ಯಾನುವಾಕ್ಯೆ.

---

✦ದೇವ ತ್ವಷ್ಟಃ=ತ್ವಷ್ಟೃದೇವನೇ! ರರಾಣಃ=ದಾನಶೀಲನಾದ [ನೀನು] ತುರೀಪಮ್=ಬೇಗನೇ ಪ್ರಾಪ್ತವಾಗುವ; ಅಧ=ಮತ್ತು; ಪ್ರೋಷಯಿತ್ನು=ಪೋಷಿಸುವ; ತತ್=ಆ ಪಶ್ವಾದಿಧನವನ್ನು; ನಃ ವಿ ಸ್ಯಸ್ವ=ನಮಗೆ ವಿಶೇಷವಾಗಿ ಕೊಡು; ಯತಃ=ಯಾವ ಧನದಿಂದ; ಕರ್ಮಣ್ಯಃ=ವೈದಿಕ-ಲೌಕಿಕಕರ್ಮಶೀಲನಾದ; ಸುದಕ್ಷಃ =ಉತ್ಸಾಹವುಳ್ಳವನಾಗಿ ಬೇಗನೆ ಕೆಲಸ ಮಾಡಬಲ್ಲ; ಯುಕ್ತಗ್ರಾವಾ= ಸೋಮಾಭಿಷವಕ್ಕೆ ಕಲ್ಲುಗಳನ್ನು ಹೂಡಿರುವ/ಸೋಮಯಾಜಿಯಾದ; ದೇವಕಾಮಃ=ಇಂತಹ ದೇವಾರಾಧಕನು ಬೇಕೆಂದು ದೇವತೆಗಳು ಬಯಸುವ/ದೇವತೆಗಳನ್ನು ಸೇವಿಸಲು ಬಯಸುವವನಾದ; ವೀರಃ ಜಾಯತೇ=ಸತ್ಪುತ್ರನು ಜನಿಸುವನೋ; [ಅಂತಹ ಪಶ್ವಾದಿಧನಸಂಪತ್ತನ್ನು ನಮಗೆ ಅನುಗ್ರಹಿಸು]

---

ಯಾಗಕ್ಕೆ ಆಹ್ವಾನಿಸುತ್ತೇನೆ. ಆತನು ನಮಗೆ ಅಸಾಧಾರಣನಾದ ರಕ್ಷಕನಾಗಲಿ.

ಹೇ! ತ್ವಷ್ಟೃದೇವನೇ! ಯಾವ ಪಶ್ವಾದಿಸಂಪತ್ತಿನಿಂದ ಕರ್ಮಶೀಲನೂ, ಉತ್ಸಾಹಿಯೂ, ಸೋಮಯಾಜಿಯೂ, ದೇವತಾರಾಧಕನೂ ಆದ ಸತ್ಪುತ್ರನು ಜನಿಸುವನೋ ಅಂತಹ ಪಶ್ವಾದಿಸಂಪತ್ತನ್ನು ನಮಗೆ ಅನುಗ್ರಹಿಸು. ಚಿತ್ರೇಷ್ಟಿಯು ಪಶುಕಾಮನಿಗೆ ವಿಹಿತವಾಗಿರುವುದರಿಂದ ಪಶುಧನವೆಂದು ಹೇಳಿದೆ.

ಶಿವಸ್ತ್ವಷ್ಟರಿಹಾऽಗಹಿ ವಿಭುಃ ಪೋಷ ಉತ ತ್ಮನಾ । ಯಜ್ಞೇ ಯಜ್ಞೇ ನ ಉದವ ॥ ಪಿಶಙ್ಗರೂಪಸ್ಸುಭರೋ ವಯೋಧಾ ಶ್ರುಷ್ಟೀ ವೀರೋ ಜಾಯತೇ ದೇವಕಾಮಃ ।

---

ಶಿವಃ । ತ್ವಷ್ಟಃ । ಇಹ । ಏತಿ । ಗಹಿ । ವಿಭುರಿತಿ ವಿ–ಭುಃ । ಪೋಷೇ । ಉತ । ತ್ಮನಾ ॥ ಯಜ್ಞೇಯಜ್ಞ ಇತಿ ಯಜ್ಞೇ–ಯಜ್ಞೇ । ನಃ । ಉದಿತಿ । ಅವ ॥ ಪಿಶಙ್ಗರೂಪ ಇತಿ ಪಿಶಙ್ಗ–ರೂಪಃ । ಸುಭರ ಇತಿ ಸು–ಭರಃ । ವಯೋಧಾ ಇತಿ ವಯಃ–ಧಾಃ । ಶ್ರುಷ್ಟೀ। ವೀರಃ । ಜಾಯತೇ । ದೇವಕಾಮ ಇತಿ ದೇವ–ಕಾಮಃ ॥

---

**ಶಿವಸ್ತ್ವಷ್ಟಃ...ಉದವ ॥** ಈ ತ್ವಾಷ್ಟ್ರಹವಿಸ್ಸಿಗಾಗಿಯೇ ವೈಕಲ್ಪಿಕವಾದ ಪುರೋನುವಾಕ್ಯೆ

**ಪಿಶಂಗರೂಪಃ..ಪಾಥಃ ॥** ಈ ತ್ವಾಷ್ಟ್ರಹವಿಸ್ಸಿಗಾಗಿಯೇ ವೈಕಲ್ಪಿಕವಾದ ಯಾಜ್ಯಾನುವಾಕ್ಯೆ.

---

✦**ತ್ವಷ್ಟಃ**=ತ್ವಷ್ಟೃದೇವನೇ! **ಶಿವಃ**=ಮಂಗಳಕರನಾದ ನೀನು; **ಇಹ ಆ ಗಹಿ**=ಈ ಯಾಗಕ್ಕೆ ಬಾ. **ಉತ**=ಮತ್ತು; [ನೀನು] **ಪೋಷೇ**=ನಮ್ಮ ಪೋಷಣೆಯಲ್ಲಿ; **ತ್ಮನಾ ವಿಭುಃ**=ಮತ್ತೊಬ್ಬರ ಅಪೇಕ್ಷೆಯಿಲ್ಲದೆ ಸ್ವಯಂಸಮರ್ಥನು; [ನೀನು] **ಯಜ್ಞೇ ಯಜ್ಞೇ**=ಸರ್ವಯಜ್ಞಗಳಲ್ಲಿಯೂ; **ನಃ**=ನಮ್ಮನ್ನು **ಉತ್ ಅವ**=ಚೆನ್ನಾಗಿ ರಕ್ಷಿಸು.

✦[ಯಾವ ತ್ವಷ್ಟೃವಿನ ಅನುಗ್ರಹದಿಂದ] **ಪಿಶಙ್ಗರೂಪಃ**=ವಿವಿಧರೂಪಗಳುಳ್ಳ/ಧರ್ಮಾರ್ಥಕಾಮಗಳನ್ನು ಸೇವಿಸುವ; **ಸುಭರಃ**=ಬಂಧುಗಳನ್ನು ಚೆನ್ನಾಗಿ ಪೋಷಿಸುವ; **ವಯೋಧಾಃ**=ದೀರ್ಘಾಯುಸ್ಸನ್ನು ಹೊಂದಿರುವ; **ಶ್ರುಷ್ಟೀ**=ಶೀಘ್ರವಾಗಿ ಕೆಲಸ ಮಾಡುವ ಸತ್ಯವಾದಿಯಾದ; **ದೇವಕಾಮಃ ವೀರಃ ಜಾಯತೇ**=ದೇವತೆಗಳನ್ನು ಆರಾಧಿಸುವ ಕಾಮನೆಯುಳ್ಳ/ದೇವತೆಗಳು ಇಂತಹ ಯಜನಶೀಲನನ್ನು ಅಪೇಕ್ಷಿಸುವ ಸತ್ಪುತ್ರನು ಜನಿಸುವನೋ; [ಅಂತಹ] **ತ್ವಷ್ಟಾ**=ತ್ವಷ್ಟೃದೇವನು;

ಪ್ರಜಾಂ ತ್ವಷ್ಟಾ ವಿ ಷ್ಯತು ನಾಭಿಮಸ್ಮೇ ಅಥಾ ದೇವಾನಾ ಮಪ್ಯೇತು ಪಾಥಃ ॥ ಪ್ರ ಣೋ ದೇವ್ಯಾ ನೋ ದಿವಃ ॥

ಪ್ರಜಾಮಿತಿ ಪ್ರ-ಜಾಮ್ । ತ್ವಷ್ಟಾ । ವೀತಿ । ಸ್ಯತು । ನಾಭಿಮ್ । ಅಸ್ಮೇ ಇತಿ । ಅಥ । ದೇವಾನಾಮ್ । ಅಪೀತಿ । ಏತು । ಪಾಥಃ ॥ ಪ್ರೇತಿ । ನಃ । ದೇವೀ । ಏತಿ । ನಃ । ದಿವಃ ॥

*ಪ್ರ ಣೋ ದೇವೀ...ಅವತು ॥ ಸರಸ್ವತೀದೇವತಾಕವಾದ ಚಿತ್ರಾಯಾಗಹವಿಸ್ಸಿನ
*ಆ ನೋ ದಿವಃ...ಶೃಣೋತು ॥ ಪುರೋನುವಾಕ್ಯೆ-ಯಾಜ್ಯಾನುವಾಕ್ಯೆಗಳು.

ನಾಭಿಮ್=ಬಂಡಿಯನ್ನು ಧರಿಸುವ ಚಕ್ರದ ಅಚ್ಚಿನಂತೆ ಕುಲವನ್ನು ಪೋಷಿಸುವ; ಪ್ರಜಾಮ್=ಪುತ್ರಪೌತ್ರಾದಿಪ್ರಜೆಯನ್ನು; ಅಸ್ಮೇ= ನಮಗೆ; ವಿಷ್ಯತು=ವಿಶೇಷವಾಗಿ ಕೊಡಲಿ. ಅಥ=ಬಳಿಕ; ದೇವಾನಾಮ್ ಅಪಿ=ದೇವತೆಗಳಿಗೂ ಕೂಡ; ಪಾಥಃ= ಹವೀರೂಪವಾದ ಅನ್ನವನ್ನು; ಏತು=ಆ ಪ್ರಜೆಯು ಪಡೆಯಲಿ/ದೇವತೆಗಳಿಗೂ ಹೊಂದಿಸಲಿ.

ಸುಖವನ್ನು ಕೊಡುವ, ನಮ್ಮ ಪೋಷಣೆಯಲ್ಲಿ ಸ್ವಯಂಪ್ರಭುವಾದ ತ್ವಷ್ಟೃದೇವನೇ! ನೀನು ನಮ್ಮ ಯಜ್ಞಕ್ಕೆ ಬಾ. ಹವಿಸ್ಸನ್ನು ಸ್ವೀಕರಿಸು. ಎಲ್ಲಾ ಯಾಗಗಳಲ್ಲಿಯೂ ನಮ್ಮನ್ನು ಚೆನ್ನಾಗಿ ಪಾಲಿಸು.

ತ್ರಿವರ್ಗಸೇವನೆಯೇ ಮುಂತಾದ ಉತ್ತಮವಾದ ಗುಣಗಳಿಂದ ಕೂಡಿದ ಪುತ್ರನು ತ್ವಷ್ಟೃದೇವನ ಅನುಗ್ರಹದಿಂದ ಜನಿಸಲಿ. ಆ ದೇವನು ವಂಶೋದ್ಧಾರಕರಾದ ಪುತ್ರ ಪೌತ್ರಾದಿಗಳನ್ನೂ ಕೊಡಲಿ. ದೇವತೆಗಳಿಗೆ ಹವಿಸ್ಸನ್ನು ಆ ಪ್ರಜೆಯು ಸಮರ್ಪಿಸಿ, ದೇವತೆಗಳ ಅನುಗ್ರಹವನ್ನು ಪಡೆಯಲಿ.

* ಅನ್ನವನ್ನು ಅನುಗ್ರಹಿಸುವುದರಿಂದ ವಾಜಿನೀವತಿಯಾದ ಸರಸ್ವತಿಯು ನಮ್ಮ ಬುದ್ಧಿಯ ರಕ್ಷಕಳು. ಅವಳು ಅನ್ನವನ್ನೂ, ಬುದ್ಧಿಯನ್ನೂ ಕೊಟ್ಟು ನಮ್ಮನ್ನು ರಕ್ಷಿಸಲಿ.

* ಪ್ರಥಮ ಕಾಂಡದ ೮ನೆಯ ಪ್ರಪಾಠಕದ ಕಡೆಯ ಅನುವಾಕದಲ್ಲಿ ಈ ಮಂತ್ರಗಳ ಪದವಿವರಣೆಯು ಇದೆ. ಇಲ್ಲಿ ತಾತ್ಪರ್ಯವನ್ನು ಮಾತ್ರ ನೀಡಿದೆ.

**ಪೀಪಿವಾಗ್ಂಸಗ್ಂ ಸರಸ್ವತಸ್ಸ್ತನಂ ಯೋ ವಿಶ್ವದರ್ಶತಃ।**

**ಧುಕ್ಷೀಮಹಿ ಪ್ರಜಾಮಿಷಮ್ ॥ [(೩೬)]**

---

ಪೀಪಿವಾಗ್ಂಸಮ್ । ಸರಸ್ವತಃ । ಸ್ತನಮ್ । ಯಃ । ವಿಶ್ವದರ್ಶತ ಇತಿ ವಿಶ್ವ-ದರ್ಶತಃ ॥ ಧುಕ್ಷೀಮಹಿ । ಪ್ರಜಾಮಿತಿ ಪ್ರ-ಜಾಮ್ । ಇಷಮ್ ॥ (೩೬)

---

**ಪೀಪಿವಾಗ್ಂಸಂ...ಇಷಮ್ ॥** ಚಿತ್ರಾಯಾಗದ ಸರಸ್ವದ್ದೇವತಾಕವಾದ ಹವಿಸ್ಸಿನ ಪುರೋನುವಾಕ್ಯೆ.

---

✦**ಯಃ ವಿಶ್ವದರ್ಶತಃ**=ಯಾವುದು [ಕಾಮಧೇನುವಿನ ಕೆಚ್ಚಲಿನಂತೆ] ಎಲ್ಲವನ್ನೂ ಕೊಡಬಲ್ಲದೆಂದು ಎಲ್ಲರಿಗೂ ತಿಳಿದಿದೆಯೋ; [ಆ] **ಪೀಪಿವಾಗ್ಂಸಮ್**= ಲೋಕವನ್ನು ವೃದ್ಧಿಗೊಳಿಸುವ; **ಸರಸ್ವತಃ ಸ್ತನಮ್**=ಯಾಗರೂಪನಾದ ಸರಸ್ವದ್ದೇವನ ಕೆಚ್ಚಲಿನಿಂದ; **ಪ್ರಜಾಮ್**=ಪುತ್ರಾದಿಪ್ರಜೆಗಳನ್ನೂ; **ಇಷಮ್**=ಅನ್ನವನ್ನೂ; **ಧುಕ್ಷೀಮಹಿ**=ಕರೆದುಕೊಳ್ಳುತ್ತೇವೆ.

---

*ಯಾಗದಿಂದ ಸೇವ್ಯಳಾದ ಆ ಸರಸ್ವತಿಯು ದ್ಯುಲೋಕದಿಂದ ಅಥವಾ ಮಹತ್ತಾದ ಪರ್ವತದಿಂದ ನಮ್ಮ ಯಾಗಕ್ಕೆ ಬರಲಿ. ನಮ್ಮ ಆಹ್ವಾನವನ್ನು ಆಲಿಸಲಿ. ನಾವೀಯುವ ಹವಿಸ್ಸನ್ನು ಅಪೇಕ್ಷಿಸಲಿ. ಲೋಕಕ್ಕೆ ನೀರನ್ನು ಕರುಣಿಸುವ ಆ ಸರಸ್ವತಿಯು ಶಕ್ತವಾದ ನಮ್ಮ ಮಾತನ್ನು ಕೇಳಲಿ. ಯಜ್ಞಕ್ಕೆ ಆಗಮಿಸಲಿ.

ಯಾಗರೂಪನಾದ ಸರಸ್ವದ್ದೇವನ ಅನುಗ್ರಹದಿಂದ ಎಲ್ಲವನ್ನೂ ಪಡೆಯಬಲ್ಲೆವೆಂಬುದನ್ನು ಈ ಮಂತ್ರವು ತಿಳಿಸುತ್ತಿದೆ. ಚಿತ್ರಾಯಾಗದಲ್ಲಿ ಸರಸ್ವದ್ದೇವನ ಹವಿಸ್ಸಿಗೆ ಇದು ಪುರೋನುವಾಕ್ಯವಾಗಿದೆ.

ನಾವು ಹಸುವಿನಿಂದ ಹಾಲನ್ನು ಕರೆದುಕೊಳ್ಳುವಂತೆ ಸರಸ್ವಂತನ ಯಾಗದಿಂದ ಪುತ್ರಾದಿಗಳನ್ನೂ ಅನ್ನವನ್ನೂ ಪಡೆಯುತ್ತೇವೆ. ಇಲ್ಲಿ ಯಾಗವನ್ನು ಸರಸ್ವಂತನ ಸರ್ವೇಷ್ಟಪ್ರದವಾದ ಕೆಚ್ಚಲೆಂಬುದಾಗಿ ಹೋಲಿಸಲಾಗಿದೆ.

---

* ತೈ.ಸಂ .೧-೮-೧೪

ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಷಾಂ ತೇ ಸುಮ್ನಮೀಮಹೇ ॥ ಯಸ್ಯ ವ್ರತಂ ಪಶವೋ ಯಂತಿ ಸರ್ವೇ ಯಸ್ಯ ವ್ರತಮುಪತಿಷ್ಠಂತ ಆಪಃ ।

---

ಯೇ । ತೇ । ಸರಸ್ವಃ । ಊರ್ಮಯಃ । ಮಧುಮಂತ ಇತಿ ಮಧು-ಮಂತಃ । ಘೃತಶ್ಚುತ ಇತಿ ಘೃತ-ಶ್ಚುತಃ ॥ ತೇಷಾಮ್ । ತೇ । ಸುಮ್ನಮ್ । ಈಮಹೇ ॥ ಯಸ್ಯ । ವ್ರತಮ್ । ಪಶವಃ । ಯಂತಿ । ಸರ್ವೇ । ಯಸ್ಯ । ವ್ರತಮ್ । ಉಪತಿಷ್ಠಂತ ಇತ್ಯುಪ-ತಿಷ್ಠಂತೇ । ಆಪಃ ॥

---

**ಯೇತೇ ಸರಸ್ವ...ಈಮಹೇ ॥** ಅದೇ ಹವಿಸ್ಸಿನ ವೈಕಲ್ಪಿಕವಾದ ಪುರೋನುವಾಕ್ಯೆ.

**ಯಸ್ಯ...ಹುವೇಮ ॥** ಚಿತ್ರಾಯಾಗದ ಸರಸ್ವದ್ದೇವತಾಕವಾದ ಹವಿಸ್ಸಿನ ಯಾಜ್ಯಾನುವಾಕ್ಯೆ.

---

✦**ಸರಸ್ವಃ**=ಸರಸ್ವಂತದೇವನೇ!/ಸಮುದ್ರದೇವನೇ! **ಮಧುಮಂತಃ**=ಮಧುವಿನಂತೆ ಸಿಹಿಯಾದ; **ಘೃತಶ್ಚುತಃ**=ತುಪ್ಪದಂತೆ ಪುಷ್ಟಿಕರವಾದ ನೀರನ್ನು ಸುರಿಸುವ; **ತೇ ಯೇ ಊರ್ಮಯಃ**=ನಿನ್ನ ಯಾವ ಅಲೆಗಳು ಇವೆಯೋ/ಗೋವುಗಳು ಇವೆಯೋ; **ತೇ**= ನಿನ್ನ; **ತೇಷಾಮ್**=ಆ ಅಲೆಗಳಿಂದ ಉಂಟಾಗುವ; **ಸುಮ್ನಮ್**=ಸುಖವನ್ನು; **ಈಮಹೇ** =ಹೊಂದುತ್ತೇವೆ/ಹೊಂದೋಣ. ✦**ಯಸ್ಯ**=ಯಾವ ಸರಸ್ವದ್ದೇವನ; **ವ್ರತಮ್**= ಕರ್ಮವನ್ನು; **ಸರ್ವೇ ಪಶವಃ**=ದ್ವಿಪಾದ-ಚತುಷ್ಪಾದ ಪ್ರಾಣಿಗಳೆಲ್ಲವೂ; **ಯಂತಿ**= ಅನುಸರಿಸುತ್ತವೆಯೋ; **ಯಸ್ಯ ವ್ರತಮ್**=ಯಾವ ದೇವನ ಕಾರ್ಯವನ್ನು; **ಆಪಃ ಉಪತಿಷ್ಠಂತೇ**= ನೀರುಗಳು ಅನುಸರಿಸುತ್ತವೆಯೋ;

---

ಸರಸ್ವಂತದೇವನೇ!/ಸಮುದ್ರದೇವನೇ! ನಿನ್ನ ಅಲೆಗಳು ಮಧುರವಾದ ಪುಷ್ಟಿಕರವಾದ ನೀರನ್ನು ಮೋಡಗಳ ಉತ್ಪತ್ತಿಗೆ ಕಾರಣವಾಗಿ ನಮಗೆ ಕೊಡುತ್ತವೆ.

ಯಸ್ಯ ವ್ರತೇ ಪುಷ್ಟಿಪತಿರ್ನಿವಿಷ್ಟಸ್ತಗ್ಂ ಸರಸ್ವಂತಮವಸೇ ಹುವೇಮ ॥ ದಿವ್ಯಗ್ಂ ಸುಪರ್ಣಂ ವಯಸಂ ಬೃಹಂತಮಪಾಂ ಗರ್ಭಂ ವೃಷಭಮೋಷಧೀನಾಮ್ । ಅಭೀಪತೋ ವೃಷ್ಟ್ಯಾ ತರ್ಪಯಂತಂ ತಗ್ಂ ಸರಸ್ವಂತಮವಸೇ ಹುವೇಮ ॥

---

ಯಸ್ಯ । ವ್ರತೇ । ಪುಷ್ಟಿಪತಿರಿತಿ ಪುಷ್ಟಿ–ಪತಿಃ । ನಿವಿಷ್ಟ ಇತಿ ನಿ–ವಿಷ್ಟಃ । ತಮ್ । ಸರಸ್ವಂತಮ್ । ಅವಸೇ । ಹುವೇಮ ॥ ದಿವ್ಯಮ್ । ಸುಪರ್ಣಮಿತಿ ಸು–ಪರ್ಣಮ್ । ವಯಸಮ್ । ಬೃಹಂತಮ್ । ಅಪಾಮ್ । ಗರ್ಭಮ್ । ವೃಷಭಮ್ । ಓಷಧೀನಾಮ್ ॥ ಅಭೀಪತಃ । ವೃಷ್ಟ್ಯಾ । ತರ್ಪಯಂತಮ್ । ತಮ್ । ಸರಸ್ವಂತಮ್ । ಅವಸೇ । ಹುವೇಮ ॥

---

ದಿವ್ಯಗ್ಂ...ಹುವೇಮ ॥ ಅದೇ ಹವಿಸ್ಸಿನ ವೈಕಲ್ಪಿಕವಾದ ಯಾಜ್ಯೆ.

---

**ಯಸ್ಯ ವ್ರತೇ**=ಯಾವನ ಕರ್ಮದಲ್ಲಿ; **ಪುಷ್ಟಿಪತಿಃ**=ಪುಷ್ಟಿಗೆ ಆಶ್ರಯನಾದ ಯಜಮಾನನು; **ನಿವಿಷ್ಟಃ**=ನೆಲೆಗೊಂಡಿರುತ್ತಾನೆಯೋ; **ತಮ್ ಸರಸ್ವಂತಮ್**=ಆ ಸರಸ್ವಂತ ದೇವನನ್ನು; **ಅವಸೇ ಹುವೇಮ**=ರಕ್ಷಣೆಗಾಗಿ ಆಹ್ವಾನಿಸುತ್ತೇವೆ. ✦**ದಿವ್ಯಮ್**=ಅಂತರಿಕ್ಷದಲ್ಲಿ ಸಂಚರಿಸುವ; **ಸುಪರ್ಣಮ್**=ಒಳ್ಳೆಯ ರೆಕ್ಕೆಗಳುಳ್ಳ; **ವಯಸಮ್**=ಪಕ್ಷಿರೂಪನಾದ; **ಬೃಹಂತಮ್**=ಮಹಾಂತನಾದ; **ಅಪಾಮ್ ವೃಷಭಮ್**=ನೀರನ್ನು ಸುರಿಸುವ; **ಓಷಧೀನಾಮ್ ಗರ್ಭಮ್**=ಸಸ್ಯಗಳ ತೆನೆಯಂತಿರುವ; **ಅಭೀಪತಃ ವೃಷ್ಟ್ಯಾ ತರ್ಪಯಂತಮ್**=ಮಳೆಯ ರೂಪದಿಂದ ಎಲ್ಲೆಡೆಯಲ್ಲಿಯೂ ಬೀಳುವುದರಿಂದ ಲೋಕವನ್ನು ಸಂತೋಷಪಡಿಸುವ; **ತಮ್ ಸರಸ್ವಂತಮ್**=ಆ ಸರಸ್ವಂತನನ್ನು; **ಅವಸೇ ಹುವೇಮ**=ರಕ್ಷಣೆಗಾಗಿ [ಯಜ್ಞಕ್ಕೆ] ಆಹ್ವಾನಿಸುತ್ತೇವೆ.

**ಸಿನೀವಾಲಿ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ ।**

**ಜುಷಸ್ವ ಹವ್ಯ [ಹವ್ಯಮ್(೩೭)ಆಹುತ]ಮಾಹುತಂ**

**ಪ್ರಜಾಂ ದೇವಿ ದಿದಿಡ್ಢಿ ನಃ ।**

ಸಿನೀವಾಲಿ । ಪೃಥುಷ್ಟುಕ ಇತಿ ಪೃಥು-ಸ್ತುಕೇ । ಯಾ । ದೇವಾನಾಮ್ । ಅಸಿ । ಸ್ವಸಾ ॥ ಜುಷಸ್ವ । ಹವ್ಯಮ್ ।(೩೭)। ಆಹುತಮಿತ್ಯಾ-ಹುತಮ್ । ಪ್ರಜಾಮಿತಿ ಪ್ರ-ಜಾಮ್ । ದೇವಿ । ದಿದಿಡ್ಢಿ । ನಃ ॥

**ಸಿನಿವಾಲಿ..ನಃ ॥** ಚಿತ್ರಾಯಾಗದ ಸಿನೀವಾಲಿದೇವತಾಕವಾದ ಹವಿಸ್ಸಿನ ಪುರೋನುವಾಕ್ಯೆ.

✦**ಯಾ**=ಯಾವ ನೀನು; **ದೇವಾನಾಮ್ ಸ್ವಸಾ ಅಸಿ**=ದೇವತೆಗಳಿಗೆ ಸಹೋದರಿಯಂತೆ [ಹಿತಕಾರಿಣಿಯಾಗಿದ್ದೀಯೋ] **ಸಾ**=ಅಂತಹ; **ಪೃಥುಷ್ಟುಕೇ**=ಹೆಚ್ಚಾದ ಸ್ತೋತ್ರಗಳುಳ್ಳ; ***ಸಿನೀವಾಲಿ**=ಅಮಾವಾಸ್ಯೆಯ ಅಭಿಮಾನಿಯಾದ ಸಿನೀವಾಲಿಯೇ! **ಆಹುತಮ್ ಹವ್ಯಮ್ ಜುಷಸ್ವ**=[ನಾವು ಯಜ್ಞದಲ್ಲಿ] ಸಮರ್ಪಿಸುವ ಹವ್ಯವನ್ನು ಸ್ವೀಕರಿಸು. **ದೇವಿ**=ದೇವಿಯೇ! **ನಃ**=ನಮ್ಮ; **ಪ್ರಜಾಮ್**=ಮಕ್ಕಳೇ ಮೊದಲಾದ ಪ್ರಜೆಯನ್ನು; **ದಿದಿಡ್ಢಿ**=ವೃದ್ಧಿಗೊಳಿಸು.

**ಅವುಗಳಿಂದ ಒದಗುವ ಸುಖವನ್ನು ನಿನ್ನ ಅನುಗ್ರಹದಿಂದ ನಾವು ಪಡೆಯುವಂತೆ ಆಗಲಿ.**

**ಸರಸ್ವಂತನು ಜಲದೇವತೆಯು. ಆತನಿಗೆ ಸಮರ್ಪಿಸುವ ಯಾಗದ ಆಹುತಿಗಳು ಮೋಡಗಳಾಗಿ ಮಾರ್ಪಟ್ಟು ಮಳೆಯನ್ನು ಸುರಿಸುತ್ತವೆ. ಆ ನೀರಿನಿಂದ ಸಸ್ಯಗಳು ಬೆಳೆಯುತ್ತವೆ. ಆ ಸಸ್ಯಗಳಿಂದ ಎರಡು ಕಾಲಿನ ಪ್ರಾಣಿಗಳೂ ನಾಲ್ಕು ಕಾಲಿನ ಪ್ರಾಣಿಗಳೂ ಜೀವಿಸುತ್ತವೆ. ಯಜಮಾನನೂ ಪುಷ್ಟಿಯನ್ನು ಪಡೆಯುತ್ತಾನೆ. ಆ ಸರಸ್ವಂತನನ್ನು ನಮ್ಮ ರಕ್ಷಣೆಗಾಗಿ ಈ ಯಾಗದಲ್ಲಿ ಆಹ್ವಾನಿಸುತ್ತೇವೆ.**

*'ಸಾ ದೃಷ್ಟೇಂದುಃ ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ' ಎಂಬಂತೆ ಚಂದ್ರನು ಸ್ವಲ್ಪವೇ ಕಾಣಿಸುವ ಅಮಾವಾಸ್ಯೆಯು 'ಸಿನೀವಾಲಿ' ಎನಿಸುತ್ತದೆ.

ಯಾ ಸುಪಾಣಿಸ್ಸ್ವಂಗುರಿಸ್ಸುಷೂಮಾ ಬಹುಸೂವರೀ ।
ತಸ್ಯೈ ವಿಶ್ಪತ್ನಿಯೈ ಹವಿಸ್ಸಿನೀವಾಲ್ಯೈ ಜುಹೋತನ ॥
ಇಂದ್ರಂ ವೋ ವಿಶ್ವತಸ್ಪರೀಂದ್ರಂ ನರಃ ॥

---

ಯಾ । ಸುಪಾಣಿರಿತಿ ಸು-ಪಾಣಿಃ । ಸ್ವಂಗುರಿರಿತಿ ಸು-ಅಂಗುರಿಃ । ಸುಷೂಮೇತಿಸು-ಸೂಮಾ । ಬಹುಸೂವರೀತಿ ಬಹು-ಸೂವರೀ ॥ ತಸ್ಯೈ । ವಿಶ್ಪತ್ನಿಯೈ । ಹವಿಃ । ಸಿನೀವಾಲ್ಯೈ । ಜುಹೋತನ ॥ ಇಂದ್ರಮ್ । ವಃ । ವಿಶ್ವತಃ । ಪರೀತಿ । ಇಂದ್ರಮ್ । ನರಃ ॥

---

ಯಾ ಸುಪಾಣಿಃ...ಜುಹೋತನ ॥ ಸಿನೀವಾಲಿಯಾಗಹವಿಸ್ಸಿನ ಯಾಜ್ಯೆ.

*ಇಂದ್ರಂ...ಕೇವಲಃ ॥ ಚಿತ್ರಾಯಾಗದ ಕೊನೆಯ ಹವಿಸ್ಸಾದ ಐಂದ್ರ ಹವಿಸ್ಸಿನ ಪುರೋನುವಾಕ್ಯೆ.

*ಇಂದ್ರಂ ನರೋ...ನಃ ॥ ಆದೇ ಐಂದ್ರಹವಿಸ್ಸಿನ ಯಾಜ್ಯಾನುವಾಕ್ಯೆ.

---

✦ಯಾ=ಯಾವ ಸಿನೀವಾಲಿದೇವಿಯು; ಸುಪಾಣಿಃ=ಒಳ್ಳೆಯ ಕೈಯುಳ್ಳವಳೋ [ಇಷ್ಟಾರ್ಥಗಳನ್ನು ಕೊಡುವ ಕೈಯುಳ್ಳವಳೋ] ಸ್ವಂಗುರಿಃ=ಒಳ್ಳೆಯ ಬೆರಳುಗಳುಳ್ಳವಳೋ; ಸುಷೂಮಾ=ಒಳ್ಳೆಯ ಪ್ರಜೆಗಳನ್ನು ಉಂಟು ಮಾಡುವವಳೋ; ಬಹುಸೂವರೀ=ಅನೇಕ ಯಾಗಗಳಿಗೆ ಪ್ರವರ್ತಕಳಾಗಿದ್ದಾಳೆಯೋ; ವಿಶ್ಪತ್ನಿಯೈ=ಪ್ರಜಾಪಾಲಕಳಾದ; ತಸ್ಯೈ ಸಿನೀವಾಲ್ಯೈ=ಆ ಸಿನೀವಾಲಿದೇವಿಗೆ; ಹವಿಃ=ಹವಿಸ್ಸನ್ನು; ಜುಹೋತನ=[ಹೇ! ಋತ್ವಿಗ್ಯಜಮಾನರೇ!] ನೀವು ಸಮರ್ಪಿಸಿರಿ.

---

ಇಲ್ಲಿ ಸರಸ್ವಂತನನ್ನು ಅಂತರಿಕ್ಷದಲ್ಲಿ ಸಂಚರಿಸುವ, ಒಳ್ಳೆಯ ರೆಕ್ಕೆಗಳುಳ್ಳ, ದೊಡ್ಡದಾದ ಪಕ್ಷಿಯಂತೆ ವರ್ಣಿಸಲಾಗಿದೆ. ಸರಸ್ವಂತನು ಅಂತರಿಕ್ಷದಲ್ಲಿ ಚಲಿಸುವ ಮೋಡಗಳಿಗೆ ಕಾರಣನಾಗಿ ಮಳೆಯನ್ನು ಸುರಿಸುತ್ತಾನೆ. ಸಸ್ಯಗಳು ಚೆನ್ನಾಗಿ ಬೆಳೆಯುವಂತೆ ಮಾಡುತ್ತಾನೆ.

---

* ತೈ.ಸಂ.1.6.12ನೆಯ ಅನುವಾಕದಲ್ಲಿ ಪದಶಃ ವಿವರಣೆಯಿದೆ. ಇಲ್ಲಿ ಪ್ರತೀಕಪಾಠದ ತಾತ್ಪರ್ಯವನ್ನು ನೀಡಿದೆ.

**ಅಸಿತವರ್ಣಾ ಹರಯಸ್ಸುಪರ್ಣಾ ಮಿಹೋ ವಸಾನಾ**

**ದಿವಮುತ್ಪತಂತಿ । ತ ಆಽವವೃತ್ರನ್ಸ್ಸದನಾನಿ**

**ಕೃತ್ವಾಽಽದಿತ್ಪೃಥಿವೀ ಘೃತೈರ್ವ್ಯುದ್ಯತೇ ।**

---

ಅಸಿತವರ್ಣಾ ಇತ್ಯಸಿತ–ವರ್ಣಾಃ । ಹರಯಃ । ಸುಪರ್ಣಾ ಇತಿ ಸು–ಪರ್ಣಾಃ ।

ಮಿಹಃ । ವಸಾನಾಃ । ದಿವಮ್ । ಉದಿತಿ । ಪತಂತಿ ॥ ತೇ । ಏತಿ । ಅವವೃತ್ರನ್ನ್ ।

ಸದನಾನಿ । ಕೃತ್ವಾ । ಆತ್ । ಇತ್ । ಪೃಥಿವೀ । ಘೃತೈಃ । ವೀತಿ । ಉದ್ಯತೇ ॥

---

**ಅಸಿತವರ್ಣಾಃ...ವ್ಯುದ್ಯತೇ ॥** ಕಾರೀರೀಷ್ಟಿಯಲ್ಲಿ ಕರೀರಪಿಷ್ಟಪಿಂಡಗಳ ಧೂಮಾನುಮಂತ್ರಣವನ್ನು ಮಾಡಲು

---

✦**ಅಸಿತವರ್ಣಾಃ**=ಕಪ್ಪಾಗಿರುವ; **ಹರಯಃ**=ನೀರಿನ ರಸವನ್ನು ಹೀರಿಕೊಳ್ಳುವ; **ಸುಪರ್ಣಾಃ**=ಒಳ್ಳೆಯ ರೆಕ್ಕೆಗಳುಳ್ಳ ಪಕ್ಷಿಗಳಂತಿರುವ ಧೂಮಗಳು; **ಮಿಹಃ**=ನೀರನ್ನು ಸುರಿಸುವ ಮೋಡಗಳಾಗಿ; **ವಸಾನಾಃ**=ಸೂರ್ಯಮಂಡಲಾದಿಗಳನ್ನು ಮುಚ್ಚುವವುಗಳಾಗಿ; **ದಿವಮ್ ಉತ್ಪತಂತಿ**=ಆಕಾಶಕ್ಕೆ ಏರುತ್ತವೆ; **ತೇ**=ಆ ಮೇಘರೂಪವಾದ [ಸುರಿಸುವ ಸ್ವಭಾವವನ್ನು ಹೊಂದಿರುವ] ಮೋಡಗಳು; **ಸದನಾನಿ ಕೃತ್ವಾ**=ತಮ್ಮಲ್ಲಿ ನೀರಿನ ಸ್ಥಾನಗಳನ್ನು ಮಾಡಿಕೊಂಡು, **ಆ ಅವವೃತ್ರನ್ನ್**=ಮಳೆಯನ್ನು ಸುರಿಸಲು ಬರುತ್ತವೆ; **ಆತ್ ಇತ್**=ಅನಂತರವೇ; **ಪೃಥಿವೀ**=ಭೂಮಿಯು; **ಘೃತೈಃ**=ತುಪ್ಪದಂತಿರುವ ನೀರುಗಳಿಂದ; **ವ್ಯುದ್ಯತೇ**=ವಿಶೇಷವಾಗಿ ತೋಯಿಸಲ್ಪಡುತ್ತದೆ.

---

ಸರ್ವಪ್ರಾಣಿಗಳ ಪುಷ್ಟಿಗೂ ಕಾರಣ ನಾಗುತ್ತಾನೆ. ವಿಶೇಷವಾಗಿ ಯಜಮಾನನನ್ನು ಪೋಷಿಸುತ್ತಾನೆ. ಇಂತಹ ಜಲದೇವ ನಾದ ಸರಸ್ವಂತನನ್ನು ರಕ್ಷಣೆಗಾಗಿ ಈ ಯಾಗಕ್ಕೆ ಆಹ್ವಾನಿಸುತ್ತೇವೆ.

ಹೇ! ಸಿನೀವಾಲಿ! ನಾವು ಯಜ್ಞದಲ್ಲಿ ನೀಡುವ ಹವಿಸ್ಸನ್ನು ಸ್ವೀಕರಿಸು. ನಮ್ಮ ಮಕ್ಕಳನ್ನು ವೃದ್ಧಿಗೊಳಿಸು. ಅಮಾವಾಸ್ಯೆಯ ಯಾಗದ ಕಾಲವಾದುದರಿಂದ ಸಿನೀವಾಲಿಯನ್ನು ದೇವತೆಗಳಿಗೆ ಸ್ವಸಾ[ಸೋದರಿ]ಎಂದು ಹೇಳಲಾಗಿದೆ. ಸಿನೀವಾಲಿಯು ಅಮಾವಾಸ್ಯಾಭಿಮಾನಿ

**ಹಿರಣ್ಯಕೇಶೋ ರಜಸೋ ವಿಸಾರೇಽಹಿರ್ಧುನಿರ್ವಾತ ಇವ ಧ್ರಜೀಮಾನ್ । ಶುಚಿಭ್ರಾಜಾ ಉಷಸೋ [ಉಷಸಃ(೩೮)] ನವೇದಾ ಯಶಸ್ವತೀರಪಸ್ಯುವೋ ನ ಸತ್ಯಾಃ ॥**

---

ಹಿರಣ್ಯಕೇಶ ಇತಿ ಹಿರಣ್ಯ-ಕೇಶಃ । ರಜಸಃ । ವಿಸಾರ ಇತಿ ವಿ-ಸಾರೇ । ಅಹಿಃ । ಧುನಿಃ । ವಾತಃ । ಇವ । ಧ್ರಜೀಮಾನ್ ॥ ಶುಚಿಭ್ರಾಜಾ ಇತಿ ಶುಚಿ-ಭ್ರಾಜಾಃ । ಉಷಸಃ ।(೩೮)। ನವೇದಾಃ । ಯಶಸ್ವತೀಃ । ಅಪಸ್ಯುವಃ । ನ । ಸತ್ಯಾಃ ॥

---

**ಹಿರಣ್ಯಕೇಶೋ...ನ ಸತ್ಯಾಃ ॥** ಪುನರ್ನವಾ ಗಿಡದ [ಕೊಮ್ಮೆಗಿಡ] ಪೊದೆಯನ್ನು ಅಗ್ನಿಯಲ್ಲಿ ಪ್ರಹರಣ ಮಾಡಿದ ನಂತರ ಆದರ ಧೂಮವನ್ನು ಅನುಮಂತ್ರಣ ಮಾಡಲು.

---

✦**ಹಿರಣ್ಯಕೇಶಃ**=[ಅಗ್ನಿಯ ಕೇಶದಂತಿರುವ ಅಗ್ನಿಜ್ವಾಲೆಯೊಡನೆ ಹುಟ್ಟಿ ಬಂದಿರುವುದರಿಂದ] ಹಿರಣ್ಯಕೇಶವಾಗಿರುವ; [ಆ ಪುನರ್ನವಾಧೂಮವು;] **ರಜಸಃ ವಿಸಾರೇ ಸತಿ**=ಮೋಡಗಳ ರೂಪದಲ್ಲಿ ಹರಡಿಕೊಳ್ಳಲಾಗಿ; **ಅಹಿಃ**=ಅಂತರಿಕ್ಷದಲ್ಲಿ ಸಂಚರಿಸುತ್ತಾ ಇರುವುದಾಗಿ; **ವಾತಃ ಇವ ಧುನಿಃ**=ವಾಯುವಿನಂತೆ ಚಲನಶೀಲವಾಗಿ; **ಧ್ರಜೀಮಾನ್**=ಶೀಘ್ರಗತಿಯುಳ್ಳದ್ದಾಗಿ [ಆಗಲಿ]. **ಶುಚಿಭ್ರಾಜಾಃ**=ಮಿಂಚುಗಳಿಂದ ಪ್ರಕಾಶಿಸುತ್ತಿರಲಿ; **ಉಷಸಃ ನವೇದಾಃ**=[ಆಕಾಶವನ್ನು ಆವರಿಸಿ] ಉಷಃಕಾಲವೂ ತಿಳಿಯದಂತೆ ಮಾಡುವುದಾಗಿರಲಿ; **ಯಶಸ್ವತೀಃ**=ಭೂಮಿಯನ್ನು ಸುಕ್ಷೇತ್ರವೆಂಬ ಕೀರ್ತಿಯನ್ನು ಪಡೆಯುವಂತೆ [ಮಾಡಲಿ]. **ಅಪಸ್ಯುವಃ ನ ಸತ್ಯಾಃ**=ನೀರನ್ನು ಅಪೇಕ್ಷಿಸುವಂತೆ ಇರುವ ಭೂಮಿಗೆ ನೀರನ್ನು ಒದಗಿಸಿ, ಸಸ್ಯಗಳ ಬೆಳೆಗೆ ಕಾರಣವಾಗಿ, ಅಮೋಘವಾದ ಪ್ರಯತ್ನವುಳ್ಳವುಗಳಾಗಲಿ.

---

ದೇವತೆಯಾಗಿದ್ದಾಳೆ. ಸಿನೀವಾಲಿದೇವಿಗೆ ತಿಳಿಸಿರುವ ವಿಶೇಷಣಪದಗಳು ವಿಶಿಷ್ಟ ಅರ್ಥವನ್ನು ನೀಡುತ್ತವೆ. ಒಳ್ಳೆಯ ಕೈಗಳು,ಒಳ್ಳೆಯ ಬೆರಳುಗಳು ಸಿನೀವಾಲಿಯ

**ಆ ತೇ ಸುಪರ್ಣಾ ಅಮಿನಂತ ಏವೈಃ ಕೃಷ್ಣೋ ನೋನಾವ ವೃಷಭೋ ಯದೀದಮ್ । ಶಿವಾಭಿರ್ನ ಸ್ಮಯಮಾನಾಭಿ ರಾऽಗಾತ್ಪತಂತಿ ಮಿಹಃ ಸ್ತನಯಂತ್ಯಭ್ರಾ ॥**

ಏತಿ । ತೇ । ಸುಪರ್ಣಾ ಇತಿ ಸು-ಪರ್ಣಾಃ । ಅಮಿನಂತ । ಏವೈಃ । ಕೃಷ್ಣಃ । ನೋನಾವ । ವೃಷಭಃ । ಯದಿ । ಇದಮ್ ॥ ಶಿವಾಭಿಃ । ನ । ಸ್ಮಯಮಾನಾಭಿಃ । ಏತಿ । ಅಗಾತ್ । ಪತಂತಿ । ಮಿಹಃ । ಸ್ತನಯಂತಿ । ಅಭ್ರಾ ॥

**ಆ ತೇ..ಅಭ್ರಾ ॥** ಈ ಧೂಮಾಭಿಮಂತ್ರಣಕ್ಕಾಗಿ ವಿಕಲ್ಪವಾಗಿ ವಿಹಿತವಾಗಿರುವ ಮೂರು ಮಂತ್ರಗಳಲ್ಲಿ ಮೊದಲನೆಯದು.

✦[ಎಲೈ! ಪುನರ್ನವಾಸ್ತಂಬವೇ!] **ತೇ**=ನಿನ್ನ [ಧೂಮಗಳು] **ಸುಪರ್ಣಾಃ**=ಒಳ್ಳೆಯ ರೆಕ್ಕೆಗಳುಳ್ಳ ಹಕ್ಕಿಗಳಂತೆ ಮೇಲಕ್ಕೆ ಹಾರಿ; **ಏವೈಃ**=ಮತ್ತೆ ಮೋಡವಾಗಿ ಬರುವಿಕೆಯಿಂದ; **ಆ ಅಮಿನಂತ**=ಎಲ್ಲ ಕಡೆಗಳಲ್ಲಿಯೂ ನೀರನ್ನು ಸುರಿಸಿದವು/**ಸುರಿಸುತ್ತವೆ; ಕೃಷ್ಣಃ**=ಕಪ್ಪಾಗಿರುವ ಮೋಡವು; **ವೃಷಭಃ**=ನೀರನ್ನು ಸುರಿಸುತ್ತದೆ; **ನೋನಾವ**=ಗುಡುಗಿನ ರೂಪದಲ್ಲಿ ಗರ್ಜಿಸುತ್ತದೆ; **ಯದಿ ಇದಮ್**[**ಪ್ರವರ್ತತೇ**] =ಯಾವಾಗ ಇದು ಸಂಭವಿಸುತ್ತದೆಯೋ [ಆಗ]; **ಶಿವಾಭಿಃ ನ ಸ್ಮಯಮಾನಾಭಿಃ**= ಅನುಗ್ರಹಬುದ್ಧಿಯಿರುವಂತೆ ನಗುವಿನಿಂದ ಕೂಡಿದ/ಮಿಂಚುಗಳಿಂದ ಕೂಡಿದ [ಮೋಡಗಳು] **ಆ ಅಗಾತ್**=ಬರುತ್ತವೆ; **ಮಿಹಃ**=ಮೋಡಗಳು; **ಪತಂತಿ**=ಕೆಳಗೆ ಮಳೆಯನ್ನು ಸುರಿಸುತ್ತವೆ. **ಅಭ್ರಾ**=ಮೇಘಗಳು; **ಸ್ತನಯಂತಿ**=ಗುಡುಗುತ್ತವೆ. [ಇಂತಹ ಮಹಿಮೆಯು ನಿನ್ನದಾಗಿದೆ.]

**ದಾನಶೀಲತೆಯನ್ನು ತಿಳಿಸುತ್ತವೆ. ಸುಷೂಮಾ, ಬಹುಸೂವರೀ ಪದಗಳು ಆಕೆಯ ಪ್ರಜಾಸಂಪತ್ತಿಯ ಪ್ರದಾನವನ್ನೂ, ಯಜ್ಞಸಹಕಾರಿತ್ವವನ್ನೂ ಹೇಳುತ್ತವೆ. ಅಂತಹ ಪ್ರಜಾಪಾಲಕಳಿಗೆ ಹವಿಸ್ಸನ್ನು ಅರ್ಪಿಸಿ, ಇಷ್ಟಾರ್ಥಗಳನ್ನು ಪಡೆಯಿರಿ.**

**ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ ।**

**ಯದೇಷಾಂ ವೃಷ್ಟಿರಸರ್ಜಿ ॥**

---

ವಾಶ್ರಾ । ಇವ । ವಿದ್ಯುದಿತಿ ವಿ-ದ್ಯುತ್ । ಮಿಮಾತಿ । ವತ್ಸಮ್ । ನ । ಮಾತಾ ।

ಸಿಷಕ್ತಿ ॥ ಯತ್ । ಏಷಾಮ್ । ವೃಷ್ಟಿಃ । ಅಸರ್ಜಿ ॥

---

**ವಾಶ್ರೇವ..ಅಸರ್ಜಿ ॥** ಇದು ಎರಡನೆಯ ಪುನರ್ನವಾಧೂಮಾಭಿಮಂತ್ರಣಮಂತ್ರ.

---

✦**ಯತ್ ಏಷಾಮ್**=ಯಾವಾಗ ಈ ಮರುತ್ತುಗಳಿಗೆ ಸಂಬಂಧಿಸಿದ; **ವೃಷ್ಟಿಃ ಅಸರ್ಜಿ**=ಮಳೆಯು ಬೀಳುತ್ತದೆಯೋ; ತದಾ=ಆಗ; **ವಿದ್ಯುತ್**=ಮಿಂಚು; **ವಾಶ್ರಾ ಇವ**=ಗುಡುಗುಗಳೆಂಬ ಧ್ವನಿಯಿಂದ ವಾಯುಗಳನ್ನು ಕೂಗುತ್ತಿದೆಯೋ ಎಂಬಂತೆ; **ಮಿಮಾತಿ**=ತೋರುತ್ತದೆ; **ಮಾತಾ**=ತಾಯಿಹಸುವು; **ವತ್ಸಮ್ ನ**=ಕರುವನ್ನು ಹೇಗೆ ಕೂಡಿಕೊಳ್ಳುತ್ತದೆಯೋ ಹಾಗೆ; **ಸಿಷಕ್ತಿ**=[ವಾಯುವಿನೊಡನೆ] ಕೂಡಿಕೊಳ್ಳುತ್ತದೆ. [ಇಂತಹ ಸುವೃಷ್ಟಿಯು ಉಂಟಾಗಲಿ]

---

ಎಲೈ! ಋತ್ವಿಗ್ಯಜಮಾನರೇ! ನಾವೆಲ್ಲರೂ ಎಲ್ಲ ದೇವತೆಗಳಿಗಿಂತಲೂ ಹೆಚ್ಚಾಗಿ ಇಂದ್ರನನ್ನೇ ಆಹ್ವಾನಿಸುತ್ತೇವೆ. ಅವನು ಕೇವಲವಾಗಿ ನಮಗೇ ರಕ್ಷಕನಾಗಿರಲಿ.

ಪರಲೋಕಸಾಧಕವಾದ ಕರ್ಮಗಳನ್ನು ಮಾಡುವಾಗ ಮನುಷ್ಯರು ಎಲ್ಲ ದೇವತೆಗಳ ಯಾಗಹವಿಸ್ಸುಗಳಲ್ಲಿಯೂ ಅರ್ಧಭಾಗಕ್ಕೆ ಅರ್ಹನಾದ ಇಂದ್ರನನ್ನೇ ಆಹ್ವಾನಿಸುತ್ತಾರೆ. ಇಂದ್ರನು ಶೂರನು. ಮನುಷ್ಯರಿಗೆ ಬಲವನ್ನು ಕೊಡತಕ್ಕವನು. ಅಂತಹ ಹೇ! ಇಂದ್ರನೇ! ನೀನು ನಮಗೆ ಗೋವುಗಳ ಕೊಟ್ಟಿಗೆಯಲ್ಲಿ ವೃದ್ಧಿಯನ್ನು ಮಾಡು.

ಸೂರ್ಯನ ಕಿರಣಗಳಿಂದ ನೀರು ಆವಿಯಾಗಿ ಸಂಗ್ರಹಿಸಲ್ಪಡುತ್ತದೆ. ಹೀಗೆ ಉತ್ತರಾಯಣದಲ್ಲಿ ಸಂಗ್ರಹಿಸಲ್ಪಟ್ಟ ನೀರು ದಕ್ಷಿಣಾಯನದಲ್ಲಿ ಮಳೆಯಾಗಿ ಸುರಿಯುತ್ತದೆ. [ಭ.ಭಾ.ಭಾ]

ಈ ಕರೀರಪಿಷ್ಟಪಿಂಡಿಯ ಹೊಗೆಗಳು ಕಪ್ಪಾಗಿ ನೀರನ್ನು ಸಂಗ್ರಹಿಸುತ್ತಾ ಮೋಡಗಳಾಗಿ ಆಕಾಶದಲ್ಲಿ ಸಂಚರಿಸುತ್ತಾ ಆಕಾಶದಲ್ಲಿ ಮೇಲಕ್ಕೆ ಏರುತ್ತವೆ. ಅನಂತರ ನೀರಿನ ಸ್ಥಾನವಾಗಿ ಮಳೆಯನ್ನು ಸುರಿಸಲು ಬರುತ್ತವೆ. ಅನಂತರ ಭೂಮಿಯು ತುಪ್ಪದಂತೆ

**ಪರ್ವತಶ್ಚಿನ್ಮಹಿ ವೃದ್ಧೋ ಬಿಭಾಯ ದಿವಶ್ಚಿತ್ಸಾನು ರೇಜತ ಸ್ವನೇ ವಃ । ಯತ್ಕ್ರೀಡಥ ಮರುತ [(ಮರುತಃ(೩೯)]ಋಷ್ಟಿ- ಮಂತ ಆಪ ಇವ ಸಧ್ರಿಯಂಚೋ ಧವಧ್ವೇ ॥**

---

ಪರ್ವತಃ । ಚಿತ್ । ಮಹಿ । ವೃದ್ಧಃ । ಬಿಭಾಯ । ದಿವಃ । ಚಿತ್ । ಸಾನು । ರೇಜತ । ಸ್ವನೇ । ವಃ ॥ ಯತ್ । ಕ್ರೀಡಥ । ಮರುತಃ ।(೩೯)। ಋಷ್ಟಿಮಂತ ಇತ್ಯೃಷ್ಟಿ-ಮಂತಃ । ಆಪಃ । ಇವ । ಸಧ್ರಿಯಂಚಃ । ಧವಧ್ವೇ ॥

---

**ಪರ್ವತಃ...ಧವಧ್ವೇ ॥** ಪುನರ್ನವಾಧೂಮಾಭಿಮಂತ್ರಣದ ಮೂರನೆಯ ಮಂತ್ರ.

---

✦**ಮರುತಃ**=ವಾಯುದೇವತೆಗಳೇ! **ಋಷ್ಟಿಮಂತಃ**=ವಜ್ರಾಯುಧವನ್ನು [ಸಿಡಿಲನ್ನು] ಹೊಂದಿದ ನೀವು; **ಯತ್ ಕ್ರೀಡಥ**=ಯಾವಾಗ ಆಟವಾಡುತ್ತಿರೋ [ಆಗ]; **ವಃ ಸ್ವನೇ**=ನಿಮ್ಮ ಗರ್ಜನೆಯಲ್ಲಿ/ಗುಡುಗಿನಲ್ಲಿ; **ಮಹಿ ವೃದ್ಧಃ**=ಅಡ್ಡಲಾಗಿಯೂ, ಎತ್ತರವಾಗಿಯೂ ದೊಡ್ಡದಾಗಿರುವ; **ಪರ್ವತಃ ಚಿತ್**=ಪರ್ವತವೂ ಕೂಡ; **ಬಿಭಾಯ**=ಹೆದರುತ್ತದೆ; **ದಿವಃ ಚಿತ್**=ಅಂತರಿಕ್ಷ/ದ್ಯುಲೋಕದಿಂದಲೂ ಮೇಲೆ ಇರುವಂತೆ ಎತ್ತರವಾಗಿರುವ; **ಸಾನು**=ಪರ್ವತಮಧ್ಯಪ್ರದೇಶವೂ; **ರೇಜತ**=ಕಂಪಿಸುತ್ತದೆ; **ಆಪಃ ಇವ**=ವ್ಯಾಪಿಸಿರುವ ನೀರಿನಂತೆ; **ಸಧ್ರಿಯಂಚಃ**=ಜೊತೆಗೂಡಿದವರಾಗಿ; **ಧವಧ್ವೇ**=ನೀವು ಧಾವಿಸಿರಿ. [ಹೀಗೆ ಧೂಮವು ಸುವೃಷ್ಟಿಯನ್ನು ಕರುಣಿಸಲಿ]

---

**ಪುಷ್ಟಿಕರವಾದ ನೀರಿನಿಂದ ಚೆನ್ನಾಗಿ ತೋಯಿಸಲ್ಪಡುತ್ತದೆ. ಈ ರೀತಿ ಸುವೃಷ್ಟಿಯಾಗಲಿ.**

**ಪುನರ್ನವಾಧೂಮವು ಹಿರಣ್ಯವರ್ಣವುಳ್ಳ ಅಗ್ನಿಜ್ವಾಲೆಯೊಡನೆ ಜನಿಸಿದೆ. ಮೇಘರೂಪವಾಗಿ ಅಂತರಿಕ್ಷವನ್ನು ವ್ಯಾಪಿಸುತ್ತದೆ. ಚಲನಶೀಲವಾಗಿದೆ. ಗಾಳಿಯಂತೆ ಕಂಪನಶೀಲವಾಗಿಯೂ ಶೀಘ್ರಗತಿಯುಳ್ಳದ್ದಾಗಿಯೂ ಆಗಲಿ. ಆ ಪುನರ್ನವ ಧೂಮವು ಮಿಂಚುಗಳಿಂದ ಪ್ರಕಾಶವುಳ್ಳದ್ದಾಗಿ, ಆಕಾಶವನ್ನು ವ್ಯಾಪಿಸಿ, ಉಷಃಕಾಲವು**

ಅಭಿಕ್ರಂದ ಸ್ತನಯ ಗರ್ಭಮಾಧಾ ಉದನ್ವತಾ

ಪರಿದೀಯಾ ರಥೇನ । ದೃತಿಗ್ಂ ಸುಕರ್ಷ ವಿಷಿತಂ

ನ್ಯಂಚಗ್ಂ ಸಮಾ ಭವಂತೂದ್ವತಾ ನಿಪಾದಾಃ ।

---

ಅಭೀತಿ । ಕ್ರಂದ । ಸ್ತನಯ । ಗರ್ಭಮ್ । ಏತಿ । ಧಾಃ । ಉದನ್ವತೇತ್ಯುದನ್-ವತಾ ।

ಪರೀತಿ । ದೀಯ । ರಥೇನ ॥ ದೃತಿಮ್ । ಸ್ವಿತಿ । ಕರ್ಷ । ವಿಷಿತಮಿತಿ ವಿ-ಸಿತಮ್ ।

ನ್ಯಂಚಮ್ । ಸಮಾಃ । ಭವಂತು । ಉದ್ವತೇತ್ಯುತ್-ವತಾ । ನಿಪಾದಾ ಇತಿ ನಿ-ಪಾದಾಃ ॥

---

ಅಭಿಕ್ರಂದ...ನಿಪಾದಾಃ ॥

ಕಪ್ಪು ಕುದುರೆಗೆ ಕರಿಬಟ್ಟೆಯನ್ನು ಸುತ್ತಲೂ ಬಿಗಿಯಾಗಿ ಕಟ್ಟಲು.

---

✦[ಎಲೈ!ಕೃಷ್ಣಾಶ್ವವೇ!] **ಅಭಿಕ್ರಂದ**=ಸುತ್ತಲೂ ಹೇಷಾರವವನ್ನು ಮಾಡು; **ಸ್ತನಯ**=ಗುಡುಗಿನಂತೆ ಗರ್ಜಿಸು; **ಗರ್ಭಮ್ ಆಧಾಃ**=ಮೇಘಗಳಲ್ಲಿ ಜಲರೂಪವಾದ ಗರ್ಭವನ್ನು ಸ್ಥಾಪಿಸು; **ಉದನ್ವತಾ**=ಜಲಪೂರ್ಣವಾದ; **ರಥೇನ**=ಮೇಘವೆಂಬ ರಥದಿಂದ; **ಪರಿದೀಯ**=ಸುತ್ತಲೂ ಸಂಚರಿಸು; **ವಿಷಿತಮ್**=ಬಾಯಿ ತೆರೆದಿರುವ; **ನ್ಯಂಚಮ್**=ಅಧೋಮುಖವಾಗಿರುವ; **ದೃತಿಮ್**=ಜಲಪೂರ್ಣವಾದ ಚರ್ಮದ ಚೀಲದಂತಿರುವ ಮೋಡವನ್ನು; **ಸುಕರ್ಷ**=ಚೆನ್ನಾಗಿ ಆಕರ್ಷಿಸು,[ಈ ಮಳೆಯಿಂದ] **ನಿಪಾದಾಃ**=ತಗ್ಗಾಗಿರುವ ಪ್ರದೇಶಗಳು; [ಜಲಪೂರ್ಣವಾಗಿ] **ಉದ್ವತಾ**=ಎತ್ತರವಾದ ಪ್ರದೇಶಗಳೊಡನೆ; **ಸಮಾಃ ಭವಂತು**=ಒಂದೇ ಸಮನಾಗಿರಲಿ.

---

ತಿಳಿಯದಂತೆ ಮಾಡಲಿ. ನೀರನ್ನು ಬಯಸುವ ನೆಲಕ್ಕೆ ಮಳೆಯ ನೀರನ್ನು ಸುರಿಸಿ, ಸಸ್ಯವೃದ್ಧಿಗೆ ಕಾರಣವಾಗಿ ಭೂಮಿಯು ಸುಕ್ಷೇತ್ರವೆಂಬ ಕೀರ್ತಿಯನುಗಳಿಸುವಂತೆ ಮಾಡಲಿ.

ಪುನರ್ನವಾಸ್ತಂಬವೇ! ನಿನ್ನ ಧೂಮವು ಹಕ್ಕಿಯಂತೆ ಮೇಲೆ ಹೋಗಿ ಮೋಡವಾಗುತ್ತದೆ. ಜಲಭರಿತವಾಗಿ ಕೆಳಕ್ಕೆ ಬರುತ್ತದೆ. ಕಪ್ಪಾದ ಮೋಡವು ಮಿಂಚು-ಗುಡುಗುಗಳಿಂದ ಕೂಡಿ ಲೋಕಾನುಗ್ರಹಬುದ್ಧಿಯಿಂದ ಮಳೆಯನ್ನು ಸುರಿಸುತ್ತದೆ.

ತ್ವಂ ತ್ವಾ ಚಿದಚ್ಯುತಾಗ್ನೇ ಪಶುರ್ನ ಯವಸೇ । ಧಾಮಾ ಹ ಯತ್ತೇ ಅಜರ ವನಾ ವೃಶ್ಚಂತಿ ಶಿಕ್ವಸಃ ॥ ಅಗ್ನೇ ಭೂರೀಣಿ ತವ ಜಾತವೇದೋ ದೇವ ಸ್ವಧಾವೋಽಮೃತಸ್ಯ ಧಾಮ ।

ತ್ವಮ್ । ತ್ವಾ । ಚಿತ್ । ಅಚ್ಯುತಾ । ಅಗ್ನೇ । ಪಶುಃ । ನ । ಯವಸೇ ॥ ಧಾಮ । ಹ । ಯತ್ । ತೇ । ಅಜರ । ವನಾ । ವೃಶ್ಚಂತಿ । ಶಿಕ್ವಸಃ ॥ ಅಗ್ನೇ । ಭೂರೀಣಿ । ತವ । ಜಾತವೇದ ಇತಿ ಜಾತ-ವೇದಃ । ದೇವ । ಸ್ವಧಾವ ಇತಿ ಸ್ವಧಾ-ವಃ । ಅಮೃತಸ್ಯ । ಧಾಮ ॥

ತ್ವಂ ತ್ವಾ...ಶಿಕ್ವಸಃ ॥ *ಧಾಮಚ್ಛದಗ್ನಿಯ ಅಷ್ಟಾಕಪಾಲ ಹವಿಸ್ಸಿನ ಪುರೋನುವಾಕ್ಯೆ.
ಅಗ್ನೇ...ಪೃಷ್ಟಬಂಧೋ ॥ ಧಾಮಚ್ಛದಗ್ನಿಯಾಗದ ಯಾಜ್ಯಾನುವಾಕ್ಯೆ.

✦ಅಜರ=ವಿನಾಶರಹಿತನಾದ; ಅಗ್ನೇ=ಅಗ್ನಿದೇವನೇ! ತ್ವಮ್=ನೀನು; ಯತ್ ವನಾ=ಯಾವ ನೀರುಗಳು; ತೇ=ನಿನ್ನ; ಧಾಮ=ಆಶ್ರಯವಾದ ಆಹವನೀಯಸ್ಥಾನವನ್ನೂ; ಶಿಕ್ವಸಃ=ಜ್ವಾಲೆಗಳನ್ನೂ; ವೃಶ್ಚಂತಿ ಹ=ನಾಶಗೊಳಿಸುತ್ತವೆಯೋ; ತ್ವಾ ಚಿತ್=ಅವುಗಳನ್ನು; ಅಚ್ಯುತಾ=ನಾಶರಹಿತವನ್ನಾಗಿ/ಆಹುತಿಯ ಮೂಲಕ ಮೋಡಗಳಾಗಿ ಮಾರ್ಪಟ್ಟು ಅದರಿಂದ ಮಳೆಯಾಗುವಂತೆ ಮಾಡುತ್ತೀಯೆ; ಪಶುಃ ನ ಯವಸೇ=ಹಸುವು ಹುಲ್ಲನ್ನು ತಿನ್ನಲು [ಆ ಹುಲ್ಲು ಹಾಲಾಗಿ ಪರಿಣಮಿಸುವಂತೆ ಮಾಡುತ್ತದೆ. ಹಾಗೆಯೇ ನೀನೂ ಮಳೆಗೆ ಕಾರಣವಾಗು] ✦ಜಾತವೇದಃ=ಜಗತ್ತೆಲ್ಲವನ್ನೂ ತಿಳಿದಿರುವ; ಅಗ್ನೇ ದೇವ= ಅಗ್ನಿದೇವನೇ! ಅಮೃತಸ್ಯ ತವ=ನಾಶರಹಿತನಾದ ನಿನ್ನ; ಧಾಮ=ಸ್ಥಾನಗಳು; ಭೂರೀಣಿ=ಹಲವು ಇವೆ. ದೇವ=ಪ್ರಕಾಶಮಾನನಾದ; ಸ್ವಧಾವಃ=ಅನ್ನವನ್ನು ಹೊಂದಿರುವ;

ತಾಯಿ ಹಸುವು ಕರುವನ್ನು ಕೂಗಿ ಕರೆಯುವಂತೆ ಮಳೆಯು ಸುರಿಯುವಾಗ

* ವೃಷ್ಟಿಗಾಗಿ ವಿಹಿತವಾದ ಮೂರು ಹವಿರ್ಯಾಗದಲ್ಲಿ ಮೊದಲನೆಯದು.

ಯಾಶ್ಚ(೩೯)ಮಾಯಾ ಮಾಯಿನಾಂ ವಿಶ್ವಮಿನ್ವ ತ್ವೇ ಪೂರ್ವೀಃ ಸ್ಸಂದಧುಃ ಪೃಷ್ಟಬಂಧೋ ॥ ದಿವೋ ನೋ ವೃಷ್ಟಿಂ ಮರುತೋ ರರೀಧ್ವಂ ಪ್ರಪಿನ್ವತ ವೃಷ್ಣೋ ಅಶ್ವಸ್ಯ ಧಾರಾಃ । ಅರ್ವಾಙೇತೇನ ಸ್ತನಯಿತ್ನುನೇಹ್ಯಪೋ ನಿಷಿಂಚನ್ನಸುರಃ ಪಿತಾ ನಃ ॥

---

ಯಾಃ । ಚ [(೩೯)] ಮಾಯಾಃ । ಮಾಯಿನಾಮ್ । ವಿಶ್ವಮಿನ್ವೇತಿ ವಿಶ್ವಂ–ಇನ್ವ । ತ್ವೇ ಇತಿ । ಪೂರ್ವೀಃ । ಸಂದಧುರಿತಿ ಸಂ–ದಧುಃ । ಪೃಷ್ಟಬಂಧೋ ಇತಿ ಪೃಷ್ಟ–ಬಂಧೋ ॥ ದಿವಃ । ನಃ । ವೃಷ್ಟಿಮ್ । ಮರುತಃ । ರರೀಧ್ವಮ್ । ಪ್ರೇತಿ । ಪಿನ್ವತ । ವೃಷ್ಣಃ । ಅಶ್ವಸ್ಯ । ಧಾರಾಃ ॥ ಅರ್ವಾಙ್ । ಏತೇನ । ಸ್ತನಯಿತ್ನುನಾ । ಏತಿ । ಇಹ । ಅಪಃ । ನಿಷಿಂಚನ್ನಿತಿ ನಿ–ಸಿಂಚನ್ । ಅಸುರಃ । ಪಿತಾ । ನಃ ।

---

**ದಿವೋ ನೋ...ನಃ ॥** ಎರಡನೆಯದಾದ ಮಾರುತಯಾಗದ ಪುರೋನುವಾಕ್ಯೆ.

---

**ವಿಶ್ವಮಿನ್ವ**=ಎಲ್ಲರಿಗೂ ಪ್ರಿಯನಾದ; **ಪೃಷ್ಟಬಂಧೋ**=ಕೇಳಿದವರಿಗೆ ಬಂಧುವಿನಂತೆ ನೆರವಾಗುವ ಅಗ್ನಿದೇವನೇ! **ಪೂರ್ವೀಃ**=ಪ್ರಾಚೀನವಾಗಿರುವ; **ಮಾಯಿನಾಮ್**=ಐಂದ್ರಜಾಲಿಕರ; **ಯಾಃ ಚ ಮಾಯಾಃ**=ಯಾವ ಮಾಯೆಗಳಿವೆಯೋ; **ತಾಃ**=ಅವುಗಳನ್ನು; **ತ್ವೇ**=ನಿನ್ನಲ್ಲಿ; **ಸಂದಧುಃ**=[ದೇವತೆಗಳು] ಇಟ್ಟಿದ್ದಾರೆ. ✦**ಮರುತಃ**=ಮರುದ್ದೇವತೆಗಳೇ! **ನಃ**=ನಮಗಾಗಿ; **ದಿವಃ**=ದ್ಯುಲೋಕ/ಅಂತರಿಕ್ಷದಿಂದ; **ವೃಷ್ಟಿಮ್ ರರೀಧ್ವಮ್**=ಮಳೆಯನ್ನು ಸುರಿಸಿರಿ; **ಅಶ್ವಸ್ಯ**=ವ್ಯಾಪಕನಾದ; **ವೃಷ್ಣಃ**=ಮಳೆಯನ್ನು ಸುರಿಸುವ ಇಂದ್ರನಿಗೆ ಸಂಬಂಧಿಸಿದ; **ಧಾರಾಃ**=ಮಳೆಯ ಜಲಧಾರೆಗಳನ್ನು; **ಪ್ರ ಪಿನ್ವತ**=ಹೆಚ್ಚಾಗಿ ಸುರಿಸಿರಿ; [ಮರುತ್ಸಖನಾದ ಇಂದ್ರದೇವನೇ!] **ಅಸುರಃ**=ಪ್ರಾಣದಾತನಾದ ನೀನು; **ನಃ ಪಿತಾ**=ನಮ್ಮ ಪಾಲಕನು; [ನೀನು] **ಅಪಃ ನಿಷಿಂಚನ್**=ನೀರನ್ನು ಸುರಿಸುತ್ತಾ; **ಏತೇನ**

**ಪಿನ್ವಂತ್ಯಪೋ ಮರುತಸ್ಸುದಾನವಃ ಪಯೋ ಘೃತವದ್ವಿದಥೇಷ್ವಾಭುವಃ । ಅತ್ಯಂ ನ ಮಿಹೇ ವಿನಯಂತಿ ವಾಜಿನಮುತ್ಸಂ ದುಹಂತಿ ಸ್ತನಯಂತಮಕ್ಷಿತಮ್ ॥**

---

ಪಿನ್ವಂತಿ । ಅಪಃ । ಮರುತಃ । ಸುದಾನವ ಇತಿ ಸು-ದಾನವಃ । ಪಯಃ । ಘೃತವದಿತಿ ಘೃತ-ವತ್ । ವಿದಥೇಷು । ಆಭುವ ಇತ್ಯಾ-ಭುವಃ ॥ ಅತ್ಯಮ್ । ನ । ಮಿಹೇ । ವೀತಿ। ನಯಂತಿ । ವಾಜಿನಮ್ । ಉತ್ಸಮ್ । ದುಹಂತಿ । ಸ್ತನಯಂತಮ್ । ಅಕ್ಷಿತಮ್ ॥

---

**ಪಿನ್ವಂತ್ಯಪೋ...ಅಕ್ಷಿತಮ್ ॥** ಎರಡನೆಯ ಯಾಗವಾದ ಮಾರುತ ಯಾಗದ ಯಾಜ್ಯಾನುವಾಕ್ಯೆ.

---

ಸ್ತನಯಿತ್ನುನಾ=ಗುಡುಗುತ್ತಿರುವ ಈ ಮೋಡದೊಡನೆ; **ಅರ್ವಾಙ್ ಏಹಿ**=ನಮಗೆ ಅಭಿಮುಖನಾಗಿ ಬಾ. ✦**ಸುದಾನವಃ**=ಒಳ್ಳೆಯ ಜಲದಾತರಾಗಿರುವ; **ಮರುತಃ**=ಮರುದ್ದೇವತೆಗಳು; **ಆಭುವಃ**=ಋತ್ವಿಗ್ಯಜಮಾನರು; **ವಿದಥೇಷು**=ಯಜ್ಞಗಳಲ್ಲಿ ಸಮರ್ಪಿಸುವ; **ಪಯಃ**=ಹಾಲಿನಂತೆಯೂ; **ಘೃತವತ್**=ತುಪ್ಪದಂತೆಯೂ [ಮಧುರವಾದ]; **ಅಪಃ**=ನೀರುಗಳನ್ನು; **ಪಿನ್ವಂತಿ**=ಸುರಿಸುತ್ತಾರೆ; **ಅತ್ಯಮ್ ನ**=ವೇಗವಾಗಿ ಓಡುವ ಕುದುರೆಯನ್ನು [ಸವಾರರು ಪಳಗಿಸುವಂತೆ] [ಮರುತರು]; **ವಾಜಿನಮ್**=ವೇಗವುಳ್ಳ ಮೇಘವನ್ನು; **ಮಿಹೇ**=ಮಳೆಗಾಗಿ/ಮಳೆಯನ್ನು ಸುರಿಸಲು; **ವಿನಯಂತಿ**=ಪಳಗಿಸುತ್ತಾರೆ. **ಅಕ್ಷಿತಮ್**=ಕ್ಷಯವಿಲ್ಲದ; **ಸ್ತನಯಂತಮ್**=ಗುಡುಗುತ್ತಿರುವ ಮೇಘವನ್ನು; **ಉತ್ಸಮ್ ದುಹಂತಿ**=ನೀರಿನ ಪ್ರವಾಹವು ಒಂದೇ ಸಮನಾಗಿ ಇರುವಂತೆ ಕರೆಯುತ್ತಾರೆ/ಮಳೆಯನ್ನು ಸುರಿಸುವಂತೆ ಮಾಡುತ್ತಾರೆ.

---

**ಮಿಂಚು ಗುಡುಗಿನ ಧ್ವನಿಯಿಂದ ಕರುವಿನಂತಿರುವ ವಾಯುವನ್ನು ಕರೆಯುವಂತೆ ತೋರುತ್ತದೆ. ತಾಯಿಹಸುವು ಕರುವಿನೊಡನೆ ಕೂಡಿದಾಗ ಒಳ್ಳೆಯ ಹಾಲನ್ನು ಕರೆಯುವಂತೆ ಮಿಂಚುಗಾಳಿಯಿಂದ ಕೂಡಿ ಸುವೃಷ್ಟಿಯನ್ನು ತರುತ್ತದೆ. ಇಂತಹ ಲೋಕಪೋಷಕವಾದ ಸುವೃಷ್ಟಿಯು ಪುನರ್ನವಾಧೂಮದಿಂದ ನಮಗೆ ಲಭಿಸಲಿ.**

**ಗಾಳಿಯು ಸಿಡಿಲಿನಿಂದ ಕೂಡಿದ್ದಾಗಿ ಮಳೆಯನ್ನು ಸುರಿಸುತ್ತದೆ. ಆಗ ಉಂಟಾಗುವ**

ಉದಪ್ರುತೋ ಮರುತಸ್ತಾಗ್ಂ ಇಯರ್ತ ವೃಷ್ಟಿಂ [ವೃಷ್ಟಿಮ್ (೪೦)] ಯೇ ವಿಶ್ವೇ ಮರುತೋ ಜುನಂತಿ । ಕ್ರೋಶಾತಿ ಗರ್ದಾ ಕನ್ಯೇವ ತುನ್ನಾ ಪೇರುಂ ತುಂಜಾನಾ ಪತ್ಯೇವ ಜಾಯಾ ॥

---

ಉದಪ್ರುತ ಇತ್ಯುದ-ಪ್ರುತಃ । ಮರುತಃ । ತಾನ್ । ಇಯರ್ತ । ವೃಷ್ಟಿಮ್ । ಯೇ । ವಿಶ್ವೇ । ಮರುತಃ । ಜುನಂತಿ ॥ ಕ್ರೋಶಾತಿ । ಗರ್ದಾ । ಕನ್ಯಾ । ಇವ । ತುನ್ನಾ । ಪೇರುಮ್ । ತುಂಜಾನಾ । ಪತ್ಯಾ । ಇವ । ಜಾಯಾ ॥

---

ಉದಪ್ರುತೋ...ಜಾಯಾ ॥ ಮಾರುತಯಾಗದ ವಿಕಲ್ಪಿತವಾದ ಮತ್ತೊಂದು ಪುರೋನುವಾಕ್ಯೆ.

---

✦ಮರುತಃ=ಮರುದ್ದೇವತೆಗಳೇ! [ನೀವು] **ಉದಪ್ರುತಃ**=ನೀರನ್ನು ಕೊಡುವವರು; [ಆದುದರಿಂದ] **ಯೇ ವಿಶ್ವೇ**=ಯಾವ ಜನರೆಲ್ಲರೂ [ಋತ್ವಿಗ್ಯಜಮಾನಾದಿಗಳು] **ಮರುತಃ**=ಮರುದ್ದೇವತೆಗಳನ್ನು; **ಜುನಂತಿ**=ಮಳೆಗಾಗಿ ಪ್ರಾರ್ಥಿಸುತ್ತಾರೆಯೋ; **ತಾನ್**[ಪ್ರತಿ]=ಅವರನ್ನು ಕುರಿತು; **ಗರ್ದಾ**=ಹಸಿದಿರುವ; **ಕನ್ಯಾ**=ಕನ್ಯೆಯು/ಮಗಳು; **ತುನ್ನಾ**=ಪೀಡಿತಳಾಗಿ; **ಕ್ರೋಶಾತಿ ಇವ**=ಹೇಗೆ ಕೂಗಿಕೊಳ್ಳುವಳೋ ಹಾಗೆ; [ಮಳೆಯಿಲ್ಲದೆ ಇರುವಾಗ ಪ್ರಜೆಯು ಕೂಗಿಕೊಳ್ಳುತ್ತದೆ]**ಪೇರುಮ್ ತುಂಜಾನಾ**= ಹಸಿವು ಬಾಯಾರಿಕೆಗಳಿಂದ ಕೂಡಿದ ಮಗಳನ್ನು ಸಮಾಧಾನಪಡಿಸುತ್ತಾ; **ಪತ್ಯಾ ಇವ ಜಾಯಾ**=ಕೇಳಿದ್ದನ್ನು ಕೊಡುವ ಗಂಡನಿಂದ ಕೂಡಿದ ಹೆಂಡತಿಯಂತೆ/ತಾಯಿ-ತಂದೆಗಳಂತೆ; **ವೃಷ್ಟಿಮ್ ಇಯರ್ತ**= [ಪ್ರಜೆಗಳಿಗೆ ಬೇಕಾದ] ಮಳೆ-ಬೆಳೆಗಳನ್ನು ಕೊಟ್ಟು [ಸಮಾಧಾನಪಡಿಸಿರಿ].

---

ಗುಡುಗಿನ ಶಬ್ದದಿಂದ ಸರ್ವತೋಮುಖವಾಗಿ ಬೆಳೆದಿರುವ ಪರ್ವತವೂ ಹೆದರುತ್ತದೆ. ಅಂತರಿಕ್ಷದಂತೆ ಎತ್ತರವಾಗಿರುವ ಪರ್ವತಸಾನುಪ್ರದೇಶವೂ ನಡುಗುತ್ತದೆ. ಎಲ್ಲೆಲ್ಲಿಯೂ ವ್ಯಾಪಿಸಿರುವ ಮಳೆಯ ನೀರಿನಂತೆ ವಾಯುವೂ ಸಹ ಎಲ್ಲೆಲ್ಲಿಯೂ ನೀರಿನೊಡನೆ ಓಡುತ್ತದೆ. ಹೀಗೆ ಪುನರ್ನವಾಧೂಮವು ನಮಗೆ ಮಳೆಯನ್ನು ಅನುಗ್ರಹಿಸಲಿ.

ಘೃತೇನ ದ್ಯಾವಾಪೃಥಿವೀ ಮಧುನಾ ಸಮುಕ್ಷತ ಪಯಸ್ವತೀಃ ಕೃಣುತಾಪ ಓಷಧೀಃ । ಊರ್ಜಂ ಚ ತತ್ರ ಸುಮತಿಂ ಚ ಪಿನ್ವಥ ಯತ್ರಾ ನರೋ ಮರುತಃ ಸಿಂಚಥಾ ಮಧು ॥

---

ಘೃತೇನ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಮಧುನಾ । ಸಮಿತಿ । ಉಕ್ಷತ । ಪಯಸ್ವತೀಃ । ಕೃಣುತ । ಆಪಃ । ಓಷಧೀಃ ॥ ಊರ್ಜಮ್ । ಚ । ತತ್ರ । ಸುಮತಿಮಿತಿ ಸು-ಮತಿಮ್ । ಚ । ಪಿನ್ವಥ । ಯತ್ರ । ನರಃ । ಮರುತಃ । ಸಿಂಚಥ । ಮಧು ॥

---

ಘೃತೇನ...ಮಧು ॥ ಈ ಯಾಗದ ವಿಕಲ್ಪಿತವಾದ ಮತ್ತೊಂದು ಯಾಜ್ಯಾನುವಾಕ್ಯೆ.

---

✦ನರಃ ಮರುತಃ=ನೀರನ್ನು ಒಯ್ಯುವ ಮರುದ್ದೇವತೆಗಳೇ! ಘೃತೇನ=ತುಪ್ಪದಂತೆ ಪುಷ್ಟಿಕರವಾದ; ಮಧುನಾ=ಮಧುರವಾದ ನೀರಿನಿಂದ; ದ್ಯಾವಾಪೃಥಿವೀ=ದ್ಯುಲೋಕ-ಭೂಲೋಕಗಳನ್ನು; ಸಮುಕ್ಷತ=ಚೆನ್ನಾಗಿ ತೋಯಿಸಿರಿ. ಯತ್ರ=ಎಲ್ಲಿ; ಮಧು =ಮಧುರವಾದ ನೀರನ್ನು; ಸಿಂಚಥ=ಸುರಿಸುತ್ತೀರೋ; ತತ್ರ=ಅಲ್ಲಿ; ಆಪಃ ಓಷಧೀಃ= ನೀರುಗಳನ್ನೂ ಸಸ್ಯಗಳನ್ನೂ; ಪಯಸ್ವತೀಃ ಕೃಣುತ=ಸಾರವುಳ್ಳವುಗಳನ್ನಾಗಿ ಮಾಡಿರಿ; ಊರ್ಜಮ್ ಚ=ಅನ್ನವನ್ನೂ/ಬಲವನ್ನೂ; ಸುಮತಿಮ್ ಚ=ಒಳ್ಳೆಯ ಬುದ್ಧಿಯನ್ನೂ; ಪಿನ್ವಥ=ಉಂಟುಮಾಡಿರಿ.

---

[ಇಲ್ಲಿ ಅಶ್ವವನ್ನು ಅಗ್ನಿರೂಪವಾಗಿ ವರ್ಣಿಸಲಾಗಿದೆ. ಭ.ಭಾ.ಭಾ] ಎಲೈ! ಕುದುರೆಯೇ! ನೀನು ಕರಿಯ ಬಟ್ಟೆಯಿಂದ ಪೀಡಿಸಲ್ಪಟ್ಟು ಹೇಷಾಧ್ವನಿಯನ್ನು ಮಾಡು. ಗುಡುಗಿನಂತೆ ಗರ್ಜಿಸು. ಮೇಘಗಳು ಜಲಪೂರ್ಣವಾಗುವಂತೆ ಮಾಡು. ಆ ಮೋಡ ಗಳು ಎಲ್ಲೆಡೆಯಲ್ಲಿಯೂ ಸಂಚರಿಸಲಿ. ದ್ವಾರವನ್ನು ತೆರೆದು ಅಧೋಮುಖವಾಗಿ ಹಿಡಿದಿರುವ ಜಲಪೂರ್ಣವಾದ ಚರ್ಮದ ಚೀಲವು ನೀರನ್ನು ಸುರಿಸುವಂತೆ ಮೋಡವು ಮಳೆಯನ್ನು ಸುರಿಸಲಿ. ಜಲಪೂರ್ಣವಾಗಿ ಹಳ್ಳ-ತಿಟ್ಟುಗಳು ಸಮಾನವಾಗಿ ಕಾಣಿಸುವಂತಾಗಲಿ.

# ಉದು ತ್ಯಂ* ಚಿತ್ರಮ್ ॥*

ಉದಿತಿ । ಉ । ತ್ಯಮ್ । ಚಿತ್ರಮ್ ॥

***ಉದು ತ್ಯಮ್...ಸೂರ್ಯಮ್ ॥** ಮೂರನೆಯ ಯಾಗವಾದ ಸೌರ್ಯಯಾಗದ ಪುರೋನುವಾಕ್ಯೆ.

***ಚಿತ್ರಂ...ತಸ್ಥುಷಶ್ಚ ॥** ಸೌರಯಾಗದ ಯಾಜ್ಯಾನುವಾಕ್ಯೆ.

ಅಗ್ನಿಯು ನಾಶರಹಿತನು. ತನ್ನನ್ನು ಶಾಂತಗೊಳಿಸುವ ನೀರನ್ನೂ ಮತ್ತೊಂದು ರೂಪದಿಂದ ತೋರುವಂತೆ ಮಾಡುತ್ತಾನೆ. ಹಸುವು ತಿಂದ ಹುಲ್ಲು ನಾಶ ಹೊಂದಿದಂತೆ ತೋರಿದರೂ ಅದು ಹಾಲಾಗಿ ಮತ್ತೊಂದು ರೂಪದಿಂದ ಹೊರಹೊಮ್ಮುತ್ತದೆಯಷ್ಟೆ. ಹಾಗೆಯೇ ಅಗ್ನಿದೇವನೇ! ನೀನು ಆಹುತಿಗಳನ್ನು ಸ್ವೀಕರಿಸಿ ಮಳೆಗೆ ಕಾರಣನಾಗು.

ಅಗ್ನಿಯೇ! ನೀನು ಪ್ರಕಾಶಮಾನನು. ಎಲ್ಲವನ್ನೂ ತಿಳಿದವನು. ಅನ್ನವುಳ್ಳವನು. ಮಳೆಯಿಂದ ಅನ್ನವನ್ನು ಕೊಡತಕ್ಕವನು. ವಿಶ್ವವನ್ನು ಸಂತೋಷಪಡಿಸುವವನು. ನೆರವನ್ನು ಕೇಳಿ ಆಶ್ರಯಿಸಿದವರಿಗೆ ಬಂಧುವಾದವನು. ನಿನ್ನ ಸ್ಥಾನಗಳು ಹಲವು. ನೀನು ಐಂದ್ರಜಾಲಿಕನ ಎಲ್ಲ ವಿದ್ಯೆಗಳನ್ನೂ ಅರಿತಿರುವೆ. ಇದರಿಂದ ನಾನಾರೂಪನಾದ ನೀನು ಮಳೆಯನ್ನು ನೀಡಬಲ್ಲವನು. ನೀನು ನಮಗೆ ಸುವೃಷ್ಟಿಯನ್ನು ಕರುಣಿಸು.

ಮರುತರೇ! ನೀವು ಅಂತರಿಕ್ಷದಿಂದ ನಮಗಾಗಿ ಮಳೆಯನ್ನು ಸುರಿಸಿರಿ. ನಿಮ್ಮ ಸ್ನೇಹಿತನಾದ ಸರ್ವವ್ಯಾಪಕನಾದ ಇಂದ್ರನೊಡಗೂಡಿ ಧಾರಾಕಾರವಾಗಿ ಮಳೆಯನ್ನು ಸುರಿಸಿರಿ. ಪ್ರಾಣದಾತನಾಗಿ ನಮ್ಮನ್ನು ಪಾಲಿಸುವ ಇಂದ್ರದೇವನೇ! ಗುಡುಗುತ್ತಿರುವ ಮೋಡಗಳೊಡನೆ ನಮಗೆ ಎದುರಾಗಿ ಬಾ. ಮಳೆಯನ್ನು ಸುರಿಸು.

ಮರುತರು ಒಳ್ಳೆಯ ಜಲಪ್ರದರು. ಅವರು ಯಜ್ಞದಲ್ಲಿ ಋತ್ವಿಜರೂ ಯಜಮಾನರೂ ಅರ್ಪಿಸುವ ಹಾಲಿನಂತೆಯೂ ತುಪ್ಪದಂತೆಯೂ ಇರುವ ಲೋಕಪೋಷಕವಾದ ನೀರನ್ನು ಸುರಿಸುತ್ತಾರೆ. ಮೋಡಗಳು ಅತಿವೇಗವಾಗಿ ಓಡುತ್ತಿರುವ ಕುದುರೆಯಂತೆ. ಒಳ್ಳೆಯ ಸವಾರನು ಕುದುರೆಯನ್ನು ಪಳಗಿಸುವಂತೆ ಮರುತರು ಮೋಡಗಳನ್ನು ಹತೋಟಿಗೆ ತೆಗೆದುಕೊಂಡು ನೀರನ್ನು ಒಂದೇ ಸಮನಾಗಿ ಧಾರಾಕಾರವಾಗಿ ಸುರಿಸುತ್ತಾರೆ. ಮರುತರ ಅನುಗ್ರಹದಿಂದ ಸುವೃಷ್ಟಿಯುಂಟಾಗಲಿ.

* ಈ ಎರಡು ಮಂತ್ರಗಳ ಪದಶಃ ಅರ್ಥವು ಪ್ರಥಮಕಾಂಡದಲ್ಲಿ ವಿವರಿಸಲ್ಪಟ್ಟಿದೆ. [1.4.43] ಇಲ್ಲಿ ಪ್ರತೀಕಗ್ರಹಣವಿದೆ. ಈ ಮಂತ್ರಗಳ ತಾತ್ಪರ್ಯವನ್ನು ಮಾತ್ರ ಇಲ್ಲಿ ನೀಡಿದೆ.

ಔರ್ವಭೃಗುವಚ್ಛುಚಿಮಪ್ನವಾನವದಾ ಹುವೇ ।
ಅಗ್ನಿಗ್ಂ ಸಮುದ್ರವಾಸಸಮ್ ॥

---

ಔರ್ವಭೃಗುವದಿತ್ಯೌರ್ವಭೃಗು-ವತ್ । ಶುಚಿಮ್ । ಅಪ್ನವಾನವದಿತ್ಯಪ್ನವಾನ-ವತ್ । ಏತಿ । ಹುವೇ ॥ ಅಗ್ನಿಮ್ । ಸಮುದ್ರವಾಸಸಮಿತಿ ಸಮುದ್ರ-ವಾಸಸಮ್ ॥

---

ಔರ್ವಭೃಗುವತ್...ಸಮುದ್ರವಾಸಸಮ್ ॥ ಸ್ವಿಷ್ಟಕೃದ್ಧೋಮಕ್ಕೆ ಮೊದಲು ಮಾಡಬೇಕಾಗಿರುವ ಮೂರು ಸ್ರುವಾಹುತಿಗಳಲ್ಲಿ ಮೊದಲನೆಯ ಸ್ರುವಾಹುತಿಗಾಗಿ

---

✦ಔರ್ವಭೃಗುವತ್=ಔರ್ವಮುನಿ, ಭೃಗುಮುನಿಗಳಂತೆಯೂ; ಅಪ್ನವಾನವತ್=ಅಪ್ನವಾನಮುನಿಯಂತೆಯೂ; ಶುಚಿಮ್=ಶುದ್ಧನಾದ; ಸಮುದ್ರವಾಸಸಮ್=ಸಮುದ್ರದಲ್ಲಿ ವಾಸಿಸುವ/ಸಮುದ್ರವನ್ನು ಆಚ್ಛಾದಿಸುವ; ಅಗ್ನಿಮ್=ಅಗ್ನಿಯನ್ನು; ಆ ಹುವೇ=ಆಹ್ವಾನಿಸಿ ಹೋಮವನ್ನು ಮಾಡುತ್ತೇನೆ.

---

ಮರುದ್ದೇವತೆಗಳು ಮಳೆಯಿಂದ ನೀರನ್ನು ಕೊಡತಕ್ಕವರು· ಋತ್ವಿಗ್ಯಜಮಾನರೇ! ನೀವು ಆ ಮರುತರನ್ನು ಪ್ರಾರ್ಥಿಸಿರಿ. ತಾಯಿ ತಂದೆಯರು ಹಸಿವು ಬಾಯಾರಿಕೆಯಿಂದ ಸಂಕಟಪಡುತ್ತಾ, ಕೂಗಿಕೊಳ್ಳುತ್ತಿರುವ ಮಗಳಿಗೆ ಬೇಕಾದುದನ್ನು ಕೊಟ್ಟು ಸಮಾಧಾನಪಡಿಸುವಂತೆ ಆ ಮರುತರು ಮಳೆಯಿಲ್ಲದೆ ಪೀಡಿತರಾಗಿರುವ ಪ್ರಜೆಗಳಿಗೆ ಮಳೆಯನ್ನು ಕೊಟ್ಟು ಅನುಗ್ರಹಿಸಲಿ*.

ನೀರನ್ನು ಒಯ್ಯುವ ಮರುದ್ದೇವತೆಗಳೇ! ಪುಷ್ಟಿಕರವಾದ ಮಧುರವಾದ ನೀರಿನಿಂದ ಲೋಕವೆಲ್ಲವನ್ನೂ ತುಂಬಿರಿ. ನೀರನ್ನೂ, ಸಸ್ಯಗಳನ್ನೂ ಸಾರವುಳ್ಳವುಗಳನ್ನಾಗಿ ಮಾಡಿ. ಒಳ್ಳೆಯ ಅನ್ನವನ್ನೂ ಕೊಡಿ. ಪ್ರಜೆಗಳಲ್ಲಿ ಸುಬುದ್ಧಿಯುಂಟಾಗುವಂತೆ ಮಾಡಿರಿ.

ಎಲ್ಲವನ್ನೂ ತಿಳಿದಿರುವ ಸೂರ್ಯದೇವನನ್ನು ವಿಶ್ವವೆಲ್ಲವೂ ನೋಡುವಂತೆ ಕಿರಣಗಳು ಮೇಲಕ್ಕೆ ತರುತ್ತವೆ.

---

* ಇಲ್ಲಿ ಭಾಷ್ಯಗಳಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಅದನ್ನು ಗಮನಿಸಿ ಹೀಗೆ ಅರ್ಥಮಾಡಲಾಗಿದೆ.

**ಆ ಸವಗ್ಂ ಸವಿತುರ್ಯಥಾ ಭಗಸ್ಯೇವ ಭುಜಿಗ್ಂ ಹುವೇ । ಅಗ್ನಿಗ್ಂ ಸಮುದ್ರವಾಸಸಮ್ ॥**

---

ಏತಿ । ಸವಮ್ । ಸವಿತುಃ । ಯಥಾ । ಭಗಸ್ಯ । ಇವ । ಭುಜಿಮ್ । ಹುವೇ ॥ ಅಗ್ನಿಮ್ । ಸಮುದ್ರವಾಸಸಮಿತಿ ಸಮುದ್ರ–ವಾಸಸಮ್ ॥

---

**ಆ ಸವಗ್ಂ...ವಾಸಸಮ್ ॥** ಎರಡನೆಯ ಸ್ರುವಾಹುತಿಯನ್ನು ಅನುಷ್ಠಿಸಲು

---

✦**ಸವಿತುಃ**=ಸವಿತೃದೇವನ; **ಸವಮ್**=ಅನುಜ್ಞೆಯನ್ನು; **ಯಥಾ**=ಹೇಗೆ; **ಆ ಹುವೇ** =ಪ್ರಾರ್ಥಿಸುತ್ತೇನೆಯೋ; **ಭಗಸ್ಯ**=ಆದಿತ್ಯದೇವನ/ಭಗನ; **ಭುಜಿಮ್ ಇವ**=ಹವಿಃ ಸ್ವೀಕಾರವನ್ನು; [ಹೇಗೆ] ಆ ಹುವೇ=ಪ್ರಾರ್ಥಿಸುವೆನೋ; [ತಥಾ=ಹಾಗೆಯೇ] **ಸಮುದ್ರವಾಸಸಮ್**=ಸಮುದ್ರವಾಸಿಯಾದ; **ಅಗ್ನಿಮ್**=ಅಗ್ನಿದೇವನನ್ನು **ಆ ಹುವೇ** =ಆಹ್ವಾನಿಸಿ ಹೋಮವನ್ನು ಅನುಷ್ಠಿಸುತ್ತೇನೆ.

---

ಸೂರ್ಯನು ಎಲ್ಲರಿಗೂ ಬೇಕಾದವನು. ದೇವತೆಗಳ ಸೈನ್ಯದಂತೆ ಲೋಕರಕ್ಷಕನು. ಮಿತ್ರನಿಗೂ, ವರುಣನಿಗೂ, ಅಗ್ನಿಗೂ ಕಣ್ಣಾಗಿರುವವನು. ಸ್ಥಾವರ–ಜಂಗಮಾತ್ಮಕ ಲೋಕಕ್ಕೆ ಆತ್ಮಸ್ವರೂಪನು. ಈತನು ಹುಟ್ಟಿದೊಡನೆಯೇ ಭೂಮ್ಯಂತರಿಕ್ಷ–ದ್ಯುಲೋಕಗಳನ್ನು ತನ್ನ ಕಿರಣದಿಂದ ತುಂಬಿಬಿಡುತ್ತಾನೆ. ಅಂತಹ ಸೂರ್ಯನು ನಮಗೆ ಸುವೃಷ್ಟಿಯನ್ನು ಕೊಡಲಿ.

ಔರ್ವ, ಭೃಗು, ಅಪ್ನವಾನರೆಂಬ ಭೃಗುವಂಶದ ಮುನಿಗಳು ಶುದ್ಧನಾದ ಸಮುದ್ರದಲ್ಲಿ ವಾಸಿಸುವ ಅಗ್ನಿಯನ್ನು ಆಹ್ವಾನಿಸಿ, ಹೋಮವನ್ನು ಮಾಡಿದಂತೆ ನಾನೂ ಅಗ್ನಿಯನ್ನು ಕರೆದು ಹೋಮವನ್ನು ಮಾಡುತ್ತೇನೆ.

ಸವಿತೃದೇವನ ಅನುಜ್ಞೆಯನ್ನು ಪ್ರಾರ್ಥಿಸುವಂತೆ, ಆದಿತ್ಯದೇವನನ್ನು ಹವಿಸ್ಸನ್ನು ಸ್ವೀಕರಿಸೆಂದು ಪ್ರಾರ್ಥಿಸುವಂತೆ ಸಮುದ್ರವಾಸಿಯಾದ ಅಗ್ನಿದೇವನನ್ನು ಆಹ್ವಾನಿಸಿ ಹೋಮವನ್ನು ಮಾಡುತ್ತೇನೆ.

ಹುವೇ ವಾತಸ್ವನಂ ಕವಿಂ ಪರ್ಜನ್ಯಕ್ರಂದ್ಯಗ್ಂ ಸಹಃ ।

ಅಗ್ನಿಗ್ಂ ಸಮುದ್ರವಾಸಸಮ್ ॥ ೪೨–11 ॥

[ವೀರ ಇಷಗ್ಂ ಹವ್ಯಮುಷಸೋ ಮರುತಶ್ಚ ವೃಷ್ಟಿಂ ಭಗಸ್ಯ ದ್ವಾದಶ ಚ ॥]

---

ಹುವೇ । ವಾತಸ್ವನಮಿತಿ ವಾತ–ಸ್ವನಮ್ । ಕವಿಮ್ । ಪರ್ಜನ್ಯಕ್ರಂದ್ಯಮಿತಿ ಪರ್ಜನ್ಯ–ಕ್ರಂದ್ಯಮ್ । ಸಹಃ ॥ ಅಗ್ನಿಮ್ । ಸಮುದ್ರವಾಸಸಮಿತಿ ಸಮುದ್ರ–ವಾಸಸಮ್ ॥ ೪೨ ॥

---

**ಹುವೇ...ವಾಸಸಮ್** ॥ ಮೂರನೆಯ ಸ್ರುವಾಹುತಿಯನ್ನು ಅನುಷ್ಠಿಸಲು

---

✦**ವಾತಸ್ವನಮ್**=ಜ್ವಾಲೆಗಳಿಂದ ವಾಯುವಿನಂತೆ ಶಬ್ದವನ್ನು ಮಾಡುವ; **ಕವಿಮ್**= ವಿದ್ವಾಂಸನಾದ; **ಪರ್ಜನ್ಯಕ್ರಂದ್ಯಮ್**=ಎಲ್ಲರಿಂದಲೂ ಪರ್ಜನ್ಯನಂತೆ ಪ್ರಾರ್ಥಿಸುವ; **ಸಹಃ**=ಬಲವಂತನಾದ; **ಸಮುದ್ರವಾಸಸಮ್**=ಸಮುದ್ರದಲ್ಲಿ ವಾಸಿಸುವ; **ಅಗ್ನಿಮ್** =ಅಗ್ನಿಯನ್ನು; ಆ **ಹುವೇ**=ಆಹ್ವಾನಿಸಿ ಹೋಮವನ್ನು ಮಾಡುತ್ತೇನೆ.

---

ಅಗ್ನಿದೇವನು ತನ್ನ ಜ್ವಾಲೆಗಳಿಂದ ವಾಯುವಿನಂತೆ ಶಬ್ದವನ್ನು ಮಾಡುತ್ತಾನೆ. ಈ ಅಗ್ನಿಯನ್ನು ಎಲ್ಲರೂ ಪರ್ಜನ್ಯನನ್ನು ಪ್ರಾರ್ಥಿಸುವಂತೆ ಪ್ರಾರ್ಥಿಸುತ್ತಾರೆ. ಇಂತಹ ಸಮುದ್ರವಾಸಿಯಾದ ಅಗ್ನಿಗೆ ಹೋಮವನ್ನು ಮಾಡುತ್ತೇನೆ. ಅವನು ನಮ್ಮ ಇಷ್ಟಾರ್ಥಗಳನ್ನು ಕೊಡಲಿ.

### ಔರ್ವಾಗ್ನಿಗೆ ಸಂಬಂಧಿಸಿದ ಪೌರಾಣಿಕ ಕಥೆ

ಒಬ್ಬ ಪತಿವ್ರತೆಯು ಶತ್ರುಗಳಿಂದ ಗರ್ಭವನ್ನು ರಕ್ಷಿಸುವ ಸಲುವಾಗಿ ಅದನ್ನು ತೊಡೆಯಲ್ಲಿ ಬಚ್ಚಿಟ್ಟಿದ್ದಳು. ಇದನ್ನು ತಿಳಿದ ಶತ್ರುಗಳು ಅದನ್ನು ನಾಶಪಡಿಸಲು ಬಂದರು. ಆಗ ಹುಟ್ಟಿದ ಆ ಮಗುವಿನ ತೇಜಸ್ಸಿನಿಂದ ಆ ಶತ್ರುಗಳು ಕುರುಡರಾದರು. ಆಗ ಆ ಪತಿವ್ರತೆಯನ್ನೇ ಶರಣು ಹೊಂದಿ ಮತ್ತೆ ಕಣ್ಣುಗಳನ್ನು ಪಡೆದು ಕೊಂಡರು. ತಾಯಿಯ ತೊಡೆಯಿಂದ ಜನಿಸಿದ ಔರ್ವನು ತಾಯಿಯ ಮಾತಿನಂತೆ ತನ್ನ ಕೋಪಾಗ್ನಿಯನ್ನು ಸಮುದ್ರದಲ್ಲಿ ಬಿಟ್ಟನು. ಅದೇ ಔರ್ವಾಗ್ನಿಯಾಯಿತು.

ಪ್ರಜಾಪತಿರಕಾಮಯತ್ತ್ಯೈಷ ತೇ ಗಾಯತ್ರೋ ಯಜ್ಞಂ ವೈ ಪ್ರಜಾಪತೇ

ರ್ಜಾಯಮಾನಾಃ ಪ್ರಾಜಾಪತ್ಯಾ ಯೋ ವಾ ಅಯಥಾದೇವತಮಿಷ್ಟಗೋ

ನಿಗ್ರಾಭ್ಯಾಸ್ಸ್ಥ ಯೋ ವೈ ದೇವಾಣ್ಷ್ವೋಽಗ್ನಿನಾ ರಯಿಮೇಕಾದಶ ॥ 11 ॥

ಪ್ರಜಾಪತಿರಕಾಮಯತ ಪ್ರಜಾಪತೇರ್ಜಾಯಮಾನಾ ವ್ಯಾಯಚ್ಛಂತೇ

ಮಹ್ಯಮಿಮಾನ್ಮಾಯಾ ಮಾಯಿನಾಂ ದ್ವಿಚತ್ವಾರಿಗ್ಂಶತ್ ॥42॥

॥ ಪ್ರಜಾಪತಿರಕಾಮಯತಾಗ್ನಿಗ್ಂ ಸಮುದ್ರವಾಸಸಮ್ ॥

ಹರಿಃ ಓಮ್

ಶ್ರೀ ಕೃಷ್ಣಾರ್ಪಣಮಸ್ತು

---

## ವಿನಿಯೋಗಸಂಗ್ರಹ

ಯಾಜ್ಯಾನುವಾಕ್ಯೇ ಚಿತ್ರಾಯಾಂ ಕ್ರಮಾತ್ಸಪ್ತೇಷ್ಟಿಷು ಸ್ಥಿತೇ ।
1-2ಅಗ್ನ್ಯಾಗ್ನೇಯೇಽಥ ಸೌಮ್ಯೇ ಸ್ಯಾದಾಪ್ಯಾ 3 ಸಂತ 4 ಇತಿ ದ್ವಯಮ್ ॥
ಇಹ 5-8 ತ್ವಾಷ್ಟ್ರೇ ಚತಸ್ರಃ ಸ್ಯುಃ 9 ಪ್ರ ಣ ಆ ನ 10 ಇತಿ ದ್ವಯಮ್ ।
ಸರಸ್ವತ್ಯಾಃ ಸ್ತ್ರಿಯಾಃ ಪೀಪಿ 11-14 ಚತಸ್ರಃ ಪುಂಸರಸ್ವತಃ ॥
15-16 ಸಿನೀವಾ ದ್ವೇ ಸಿನೀವಾಲ್ಯಾ 17 ಇಂದ್ರಮಿಂದ್ರಂ 18 ತಥೈಂದ್ರಕೇ ।
ಕಾರೀರ್ಯಾಮಸಿತೇ 19 ತ್ಯುಕ್ತಂ ಪಿಂಡೀಧೂಮಸ್ಯ ಮಂತ್ರಣಮ್ ॥
ವಿಕಲ್ಪಾತ್ 20-23 ಹಿರ ಚತ್ವಾರೋ ವರ್ಷಾಹ್ವಾ ಧೂಮಮಂತ್ರಣೇ ।
24 ಅಭ್ಯಶ್ವಂ ಕೃಷ್ಣವಸ್ತ್ರೇಣ ಪಿನಷ್ಟಿ ಕ್ರಂದನಾಯ ಹಿ ॥
25-26 ತ್ವಂ ಧಾಮಚ್ಛದಿ ಯಾಜ್ಯಾಃ ಸ್ಯುರ್ದಿವೋ 27 ಮಾರುತಯಾಗಕೇ ।
ವೈಕಲ್ಪಿಕಂ ತತ್ರ 28-30 ಯುಗ್ಮಮುದು 31 ಚಿತ್ರಂ 32 ಚ ಸೌರ್ಯಕೇ ।
33-35 ಔರ್ವತ್ರಯಾಚ್ಛೋಪಹೋಮಾಃ ಪಂಚತ್ರಿಂಶದಿಹೋದಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–35

# ಅನುವಾಕದ ವಿಶೇಷ ವಿಷಯಗಳು

## ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| ೧) ಅಗ್ನಿನಾ...ವೀರವತ್ತಮಮ್ ॥ | ಗಾಯತ್ರೀ |
| ೨) ಗೋಮಾಗ್‌ಂ...ಸಭಾವಾನ್ ॥ | ತ್ರಿಷ್ಟುಪ್ |
| ೩) ಆಪ್ಯಾಯಸ್ವ...ಸಂಗಥೇ ॥ | ಗಾಯತ್ರೀ |
| ೪) ಸಂತೇ...ಧಿಷ್ವ ॥ | ತ್ರಿಷ್ಟುಪ್ |
| ೫) ಇಹ...ಕೇವಲಃ ॥ | ಗಾಯತ್ರೀ |
| ೬) ತನ್ನಸ್ತುರಿಪ...ದೇವಕಾಮಃ ॥ | ತ್ರಿಷ್ಟುಪ್ |
| ೭) ಶಿವಸ್ತ್ವಷ್ಟ...ಉದವ ॥ | ಗಾಯತ್ರೀ |
| ೮) ಪಿಶಙ್ಗರೂಪಃ...ಪಾಥಃ ॥ | ತ್ರಿಷ್ಟುಪ್ |
| ೯) ಪ್ರ ಣೋ...ಅವತು ॥ | ಗಾಯತ್ರೀ |
| ೧೦) ಆ ನೋ...ಶೃಣೋತು ॥ | ತ್ರಿಷ್ಟುಪ್ |
| ೧೧) ಪೀಪಿವಾಗ್‌ಂಸಂ...ಇಷಮ್ ॥ | ಗಾಯತ್ರೀ |
| ೧೨) ಯೇ ತೇ... ಈಮಹೇ ॥ | ಗಾಯತ್ರೀ |
| ೧೩) ಯಸ್ಯ ವ್ರತಂ...ಹುವೇಮ ॥ | ತ್ರಿಷ್ಟುಪ್ |

| | |
|---|---|
| ೧೫) ದಿವ್ಯಂ...ಹುವೇಮ ॥ | ತ್ರಿಷ್ಟುಪ್ |
| ೧೬) ಸಿನೀವಾಲಿ...ನಃ ॥ | ಅನುಷ್ಟುಪ್ |
| ೧೭) ಯಾ ಸುಪಾಣಿಃ...ಜುಹೋತನ ॥ | ಅನುಷ್ಟುಪ್ |
| ೧೮) ಇಂದ್ರಂ ವೋ...ಕೇವಲಃ ॥ | ಗಾಯತ್ರೀ |
| ೧೯) ಇಂದ್ರಂ ನರೋ...ನಃ ॥ | ತ್ರಿಷ್ಟುಪ್ |
| ೨೦) ಅಸಿತವರ್ಣಾ...ವ್ಯದ್ಯತೇ ॥ | ತ್ರಿಷ್ಟುಪ್ |
| ೨೧) ಹಿರಣ್ಯಕೇಶೋ...ಸತ್ಯಾಃ ॥ | ತ್ರಿಷ್ಟುಪ್ |
| ೨೨) ಆ ತೇ ಸುಪರ್ಣಾ...ಅಭ್ರಾ ॥ | ತ್ರಿಷ್ಟುಪ್ |
| ೨೩) ವಾಶ್ರೇವ...ಅಸರ್ಜಿ ॥ | ಗಾಯತ್ರೀ |
| ೨೪) ಪರ್ವತಶ್ಚಿನ್ಮಹಿ...ಧವಧ್ವೇ ॥ | ತ್ರಿಷ್ಟುಪ್ |
| ೨೫) ಅಭಿಕ್ರಂದ...ನಿಪಾದಾಃ ॥ | ತ್ರಿಷ್ಟುಪ್ |
| ೨೬) ತ್ವಂ ತ್ಯಾ...ಶಿಕ್ವಸಃ ॥ | ಅನುಷ್ಟುಪ್ |
| ೨೭) ಅಗ್ನೇ ಭೂರೀಣಿ...ಪೃಷ್ಟಬಂಧೋ ॥ | ತ್ರಿಷ್ಟುಪ್ |
| ೨೮) ದಿವೋ ನೋ...ಪಿತಾ ನಃ ॥ | ತ್ರಿಷ್ಟುಪ್ |
| ೨೯) ಪಿನ್ವಂತ್ಯಪೋ...ಅಕ್ಷಿತಮ್ ॥ | ಜಗತೀ |
| ೩೦) ಉದಪ್ರುತೋ...ಜಾಯಾ ॥ | ತ್ರಿಷ್ಟುಪ್ |
| ೩೧) ಘೃತೇನ...ಮಧು ॥ | ಅತಿಜಗತೀ ವಿವೃದ್ಧಪಾದಾ |
| ೩೨) ಉದುತ್ಯಂ...ಸೂರ್ಯಮ್ ॥ | ಗಾಯತ್ರೀ |

೩೩) ಚಿತ್ರಂ...ತಸ್ಥುಷಶ್ಚ ॥ ತ್ರಿಷ್ಟುಪ್

೩೪) ಔರ್ವಭೃಗುವತ್...ವಾಸಸಮ್ ॥ ಗಾಯತ್ರೀ

೩೫ ) ಆ ಸವಗ್ಂ... ವಾಸಸಮ್ ॥ ಗಾಯತ್ರೀ

೩೬) ಹುವೇ ವಾತಸ್ವನಂ...ವಾಸಸಮ್ ॥ ಗಾಯತ್ರೀ

ಇತಿ ತೃತೀಯಕಾಂಡೇ ಪ್ರಥಮಃ ಪ್ರಶ್ನಃ

# ತೃತೀಯಕಾಂಡಃ ದ್ವಿತೀಯಃ ಪ್ರಶ್ನಃ
# ಪ್ರಥಮೋಽನುವಾಕಃ

ಹರಿಃ ಓಮ್

## ಯೋ ವೈ

---

ಯಃ। ವೈ।

---

ಮೊದಲನೆಯ ಪ್ರಪಾಠಕದಲ್ಲಿ ಪ್ರಕೃತಿಯಾಗವಾದ ಅಗ್ನಿಷ್ಟೋಮದಲ್ಲಿ ದೀಕ್ಷೆಯನ್ನು ಮೊದಲುಗೊಂಡು ಬಹಿಷ್ಪವಮಾನದವರೆಗೆ ಬೇರೆಯೆಡೆಗಳಲ್ಲಿ ಕಡಿಮೆಯಾಗಿರುವ ಕೆಲವು ವಿಷಯಗಳನ್ನು ಹೇಳಲಾಯಿತು. ಈ ಎರಡನೆಯ ಪ್ರಪಾಠಕದಲ್ಲಿ ಪವಮಾನಗ್ರಹಾದಿಗಳಿಂದ ಮೊದಲುಗೊಂಡು ಪ್ರತಿನಿಗ್ರಾಹ್ಯದವರೆಗಿನ ಪ್ರಯೋಗದಲ್ಲಿ ನ್ಯೂನವಾಗಿರುವ ವಿಷಯಗಳು ಹೇಳಲ್ಪಟ್ಟಿವೆ.

### ಅನ್ವಾರೋಹವಿಧಿಗೆ ಸಂಬಂಧಿಸಿದ ಅರ್ಥವಾದ

ಇಲ್ಲಿಯ ಪ್ರಯೋಗಕ್ರಮವನ್ನು ಆಪಸ್ತಂಬರು ಹೀಗೆ ಹೇಳಿರುತ್ತಾರೆ. 'ವಸ್ವೈ॒ಹಿಂ ಕುರು, ತಸ್ಯೈ ಪ್ರಸ್ತುಹಿ, ತಸ್ಯೈ ಸ್ತುಹಿ, ತಸ್ಯೈ ಮೇಽವರುಧ್ಯೈ' ಇತಿ ಪುರಸ್ತಾದ್ಬಹಿಷ್ಪವಮಾನಾದ್ಯಜಮಾನೋ ಜಪತಿ, ದಶಹೋತಾರಂ ಚ ವ್ಯಾಚಷ್ಟೇ, ಸ್ತೂಯಮಾನೇ ಚ ದಶಹೋತಾರಂ ಜಪತಿ, ಶ್ಯೇನೋಽಸಿ ಗಾಯತ್ರಛಂದಾ ಇತಿ ಮಧ್ಯಮಾಯಾಂ ಚ ಸ್ತೋತ್ರೀಯಾಯಾಮನ್ವಾರೋಹಮ್; ದ್ವಿತೀಯೇ ಪವಮಾನೇ ದ್ವಿತೀಯೇನ ಮಂತ್ರೇಣ, ತೃತೀಯೇ ತೃತೀಯೇನ ಇತಿ ॥

ವಿವರಣೆ:- ಬಹಿಷ್ಪವಮಾನಸ್ತೋತ್ರಕ್ಕೆ ಮೊದಲು 'ವಸ್ವೈ॒...ಮುಂತಾದ ನಾಲ್ಕು ಮಂತ್ರಗಳನ್ನು ಯಜಮಾನನು ಜಪಿಸಬೇಕು. ದಶಹೋತೃಮಂತ್ರಗಳನ್ನು ಹೇಳಬೇಕು. ಸ್ತೋತ್ರವನ್ನು ಮಾಡುವಾಗ ದಶಹೋತೃಮಂತ್ರಗಳನ್ನು ಜಪಿಸಬೇಕು. ಬಳಿಕ ಅನ್ವಾರೋಹ ಮಂತ್ರಗಳನ್ನು ಜಪಿಸಬೇಕು. ಈ ಪ್ರಯೋಗದ ವಿಧಿಯು ಇಲ್ಲಿದೆ; ಆದರ ಅರ್ಥವಾದವೂ ಇಲ್ಲಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಃ ವೈ | ಯಾವ ಯಜಮಾನನು |

ಪವಮಾನಾನಾಮನ್ವಾರೋಹಾನ್ ವಿದ್ವಾನ್ ಯಜತೇಽನು

ಪವಮಾನಾನಾರೋಹತಿ ನ ಪವಮಾನೇಭ್ಯೋಽವಚ್ಛಿದ್ಯತೇ

ಶ್ಯೇನೋಽಸಿ ಗಾಯತ್ರಛಂದಾ

---

ಪವಮಾನಾನಾಮ್ । ಅನ್ವಾರೋಹಾನಿತ್ಯನು–ಆರೋಹಾನ್ । ವಿದ್ವಾನ್ । ಯಜತೇ ।

ಅನ್ವಿತಿ । ಪವಮಾನಾನ್ । ಏತಿ । ರೋಹತಿ । ನ । ಪವಮಾನೇಭ್ಯಃ । ಅವೇತಿ । ಛಿದ್ಯತೇ।

ಶ್ಯೇನಃ । ಅಸಿ । ಗಾಯತ್ರಛಂದಾ ಇತಿ ಗಾಯತ್ರ–ಛಂದಾಃ ।

---

| | |
|---|---|
| ಪವಮಾನಾನಾಮ್ | ಬಹಿಷ್ಪವಮಾನಾದಿಸ್ತೋತ್ರಗಳ |
| ಅನ್ವಾರೋಹಾನ್ | ಅನುಕ್ರಮವಾಗಿ ಹೊಂದುವ ಮಂತ್ರಗಳನ್ನು |
| ವಿದ್ವಾನ್ ಯಜತೇ | ತಿಳಿದವನಾಗಿ ಯಾಗ ಮಾಡುತ್ತಾನೆಯೋ |
| ಪವಮಾನಾನ್ ಅನು ಆರೋಹತಿ | ಪವಮಾನಗಳನ್ನು ಅನುಕ್ರಮವಾಗಿ ಹೊಂದುತ್ತಾನೆ. |
| ಪವಮಾನೇಭ್ಯಃ ನ ಅವ ಚ್ಛಿದ್ಯತೇ | ಪವಮಾನಗಳಿಂದ ವಿಚ್ಛೇದವನ್ನು ಹೊಂದುವುದಿಲ್ಲ. |

| ಮಂತ್ರ | ವಿನಿಯೋಗ |
|---|---|
| ಶ್ಯೇನೋಽಸಿ...ಸಂಪಾರಯ ॥ | ಬಹಿಷ್ಪವಮಾನಸ್ತೋತ್ರದ ಅನ್ವಾರೋಹಮಂತ್ರ. |

---

✦ಎಲೈ ಬಹಿಷ್ಪವಮಾನವೇ! [ನೀನು];ಶ್ಯೇನಃ ಅಸಿ=ಗಿಡಗದಂತೆ ಹಾರಲು ಸಮರ್ಥನಾಗಿರುವೆ. ಗಾಯತ್ರಛಂದಾಃ=ಗಾಯತ್ರೀಛಂದಸ್ಸುಳ್ಳವನಾಗಿರುವೆ.

---

ಬಹಿಷ್ಪವಮಾನಾದಿಸ್ತೋತ್ರಗಳ ಅನ್ವಾರೋಹಮಂತ್ರಗಳನ್ನು ತಿಳಿದು ಯಾಗವನ್ನು

## ಅನು ತ್ವಾಽಽರಭೇ ಸ್ವಸ್ತಿ ಮಾ ಸಂಪಾರಯ ಸುಪರ್ಣೋಽಸಿ ತ್ರಿಷ್ಟುಪ್ಛಂದಾ ಅನು ತ್ವಾಽಽರಭೇ ಸ್ವಸ್ತಿ ಮಾ ಸಂಪಾರಯ ಸಭಾಽಸಿ ಜಗತೀಛಂದಾ

---

ಅನ್ವಿತಿ । ತ್ವಾ । ಏತಿ । ರಭೇ । ಸ್ವಸ್ತಿ । ಮಾ । ಸಮಿತಿ । ಪಾರಯ । ಸುಪರ್ಣ ಇತಿ ಸು-ಪರ್ಣಃ । ಅಸಿ । ತ್ರಿಷ್ಟುಪ್ಛಂದಾ ಇತಿ ತ್ರಿಷ್ಟುಪ್-ಛಂದಾಃ । ಅನ್ವಿತಿ । ತ್ವಾ । ಏತಿ । ರಭೇ । ಸ್ವಸ್ತಿ । ಮಾ । ಸಮಿತಿ । ಪಾರಯ । ಸಘಾ । ಅಸಿ । ಜಗತೀಛಂದಾ ಇತಿ ಜಗತೀ-ಛಂದಾಃ ।

---

| ಮಂತ್ರ | ವಿವರಣೆ |
| --- | --- |
| **ಸುಪರ್ಣಃ...ಪಾರಯ ॥** | ಮಾಧ್ಯಂದಿನಪವಮಾನಸ್ತೋತ್ರದ ಅನ್ವಾರೋಹಮಂತ್ರ. |
| **ಸಘಾಸಿ..ಪಾರಯ ॥** | ಆರ್ಭವಪವಮಾನಸ್ತೋತ್ರದ ಅನ್ವಾರೋಹಮಂತ್ರ. |

---

**ತ್ವಾ**=ನಿನ್ನನ್ನು; **ಅನು ಆರಭೇ**=ಅನುಸರಿಸಿ ಹೊಂದುತ್ತೇನೆ; **ಮಾ**=ನನ್ನನ್ನು; **ಸ್ವಸ್ತಿ**=ತೊಂದರೆಯಿಲ್ಲದಂತೆ; **ಸಂಪಾರಯ**=ಯಾಗದ ಕೊನೆಯನ್ನು ಹೊಂದಿಸು. ✦[ಎಲೈ ಮಾಧ್ಯಂದಿನಪವಮಾನವೇ! ನೀನು]**ಸುಪರ್ಣಃ ಅಸಿ**=[ಗಿಡಗಕ್ಕಿಂತಲೂ ವೇಗವಾಗಿ ಹಾರಬಲ್ಲ] ಗರುಡನಂತಿರುವೆ. **ತ್ರಿಷ್ಟುಪ್ಛಂದಾಃ**=ತ್ರಿಷ್ಟುಪ್ ಛಂದಸ್ಸುಳ್ಳವನು; **ತ್ವಾ**=ನಿನ್ನನ್ನು **ಅನು ಆರಭೇ**=ಅನುಕ್ರಮವಾಗಿ ಹೊಂದುತ್ತೇನೆ. [ನೀನು] **ಮಾ**=ನನ್ನನ್ನು; **ಸ್ವಸ್ತಿ**=ನಿರ್ವಿಘ್ನವಾಗಿ; **ಸಂಪಾರಯ**=ಯಜ್ಞಾಂತವನ್ನು ಮುಟ್ಟಿಸು; ✦[ಎಲೈ! ಆರ್ಭವಪವಮಾನವೇ! ನೀನು]**ಸಘಾ ಅಸಿ**=ಗರುಡನಿಗಿಂತಲೂ ವೇಗವಾಗಿ ಹೋಗುವ ಭಾಸಪಕ್ಷಿಯಂತೆ ಇರುವೆ; **ಜಗತೀಛಂದಾಃ**= ಜಗತೀ ಛಂದಸ್ಸುಳ್ಳವನಾಗಿರುವೆ;

## ಅನು ತ್ವಾಽಽರಭೇ ಸ್ವಸ್ತಿ ಮಾ ಸಂಪಾರಯೇತ್ಯಾಹೈತೇ [(೧)] ವೈ ಪವಮಾನಾನಾಮನ್ವಾರೋಹಾಸ್ತಾನ್, ಯ ಏವಂ ವಿದ್ವಾನ್ ಯಜತೇ

---

ಅನ್ವಿತಿ । ತ್ವಾ । ಏತಿ । ರಭೇ । ಸ್ವಸ್ತಿ । ಮಾ । ಸಮಿತಿ । ಪಾರಯ । ಇತಿ । ಆಹ । ಏತೇ ।[(೧)]। ವೈ । ಪವಮಾನಾನಾಮ್ । ಅನ್ವಾರೋಹಾ ಇತ್ಯನು-ಆರೋಹಾಃ । ತಾನ್ । ಯಃ । ಏವಮ್ । ವಿದ್ವಾನ್ । ಯಜತೇ ।

---

ತ್ವಾ ಅನು ಆರಭೇ=ನಿನ್ನನ್ನು ಅನುಕ್ರಮವಾಗಿ ಹೊಂದುತ್ತೇನೆ; ಸ್ವಸ್ತಿ ಮಾ ಸಂಪಾರಯ=ನನ್ನನ್ನು ಕ್ಷೇಮವಾಗಿ ಯಾಗದ ಅಂತವನ್ನು ಹೊಂದಿಸು.

### ಅನ್ವಾರೋಹಗಳ ವಿಧಿ;ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಇತಿ ಆಹ | ಹೀಗೆ ಶ್ರುತಿಯು ಹೇಳುತ್ತದೆ. |
| ಏತೇ ವೈ | ‘ಶ್ಯೇನೋಽಸಿ’ ‘ಸುಪರ್ಣೋಽಸಿ’ ‘ಸಘಾಸಿ’ |
| ಪವಮಾನಾನಾಮ್ | ಎಂಬ ಈ ಮಂತ್ರಗಳು ಪವಮಾನಗಳ ಅನ್ವಾ |
| ಅನ್ವಾರೋಹಾಃ | ರೋಹಗಳಾಗಿವೆ. |
| ತಾನ್ ಏವಮ್ ವಿದ್ವಾನ್ | ಅವುಗಳನ್ನು ಈ ರೀತಿಯಾಗಿ ತಿಳಿದವನಾಗಿ |
| ಯಃ ಯಜತೇ | ಯಾರು ಯಾಗವನ್ನು ಅನುಷ್ಠಿಸುತ್ತಾನೆಯೋ |

---

ಅನುಷ್ಠಿಸುವ ಯಜಮಾನನು ಅನುಕ್ರಮವಾಗಿ ಪವಮಾನಸ್ತೋತ್ರಗಳನ್ನು ಹೊಂದುತ್ತಾನೆ. ಆತನು ಪವಮಾನಗಳಿಂದ ವಿಚ್ಛಿತ್ತಿಯನ್ನು ಹೊಂದುವುದಿಲ್ಲ.

ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳಲ್ಲಿ ಕ್ರಮವಾಗಿ ಬಹಿಷ್ಪವಮಾನ, ಮಾಧ್ಯಂದಿನಪವಮಾನ ಮತ್ತು ಆರ್ಭವಪವಮಾನಗಳೆಂಬ ಮೂರು ಪವಮಾನಸ್ತೋತ್ರಗಳು ಇವೆ.

–ऽನು ಪವಮಾನಾನಾರೋಹತಿ ನ

ಪವಮಾನೇಭ್ಯೋऽವಚ್ಛಿ ದ್ಯತೇ ಯೋ ವೈ ಪವಮಾನಸ್ಯ

ಸಂತತಿಂ ವೇದ ಸರ್ವಮಾಯುರೇತಿ

---

ಅನ್ವಿತಿ । ಪವಮಾನಾನ್ । ಏತಿ । ರೋಹತಿ । ನ । ಪವಮಾನೇಭ್ಯಃ । ಅವೇತಿ । ಛಿದ್ಯತೇ । ಯಃ । ವೈ । ಪವಮಾನಸ್ಯ । ಸಂತತಿಮಿತಿ ಸಂ–ತತಿಮ್ । ವೇದ । ಸರ್ವಮ್ । ಆಯುಃ । ಏತಿ ।

---

| | |
|---|---|
| [ಸಃ] ಪವಮಾನಾನ್ ಅನು ಆರೋಹತಿ | [ಅವನು] ಪವಮಾನಸ್ತೋತ್ರಗಳನ್ನು ಅನುಕ್ರಮವಾಗಿ ಹೊಂದುತ್ತಾನೆ. |
| ಪವಮಾನೇಭ್ಯಃ ನ ಅವಚ್ಛಿದ್ಯತೇ | ಪವಮಾನಗಳಿಂದ ವಿಚ್ಛೇದವನ್ನು [ಬೇರ್ಪಡೆ] ಹೊಂದುವುದಿಲ್ಲ. |

ಪವಮಾನಸಂತತಿಯ ಅರ್ಥವಾದ

| | |
|---|---|
| ಯಃ ವೈ | ಯಾವನು |
| ಪವಮಾನಸ್ಯ ಸಂತತಿಮ್ ವೇದ | ಪವಮಾನಸ್ತೋತ್ರದ ಅವಿಚ್ಛಿತ್ತಿಯನ್ನು ಅರಿತಿರುವನೋ |
| ಸರ್ವಮ್ ಆಯುಃ ಏತಿ | [ಅವನು] ಪೂರ್ಣಾಯುಸ್ಸನ್ನು ಪಡೆಯುತ್ತಾನೆ. |

---

ಬಹಿಷ್ಪವಮಾನವು 'ಉಪಾಸ್ಮೈ ಗಾಯತ' ಎಂಬ ಋಕ್ಕಿನ ಗಾನದಿಂದ ಮೊದಲಾಗುತ್ತದೆ. ಮಾಧ್ಯಂದಿನಪವಮಾನವು 'ಉಚ್ಚಾ ತೇ ಜಾತಮಂಧಸಃ' ಎಂಬ ಋಕ್ಕಿನ ಗಾನದೊಡನೆ ಆರಂಭವಾಗುತ್ತದೆ. ಆರ್ಭವಪವಮಾನವು **'ಸ್ವಾದಿಷ್ಠಯಾ ಮದಿಷ್ಠಯಾ'** ಎಂಬ ಋಕ್ಕಿನ ಗಾನದೊಡನೆ ಮೊದಲಾಗುತ್ತದೆ.

ಈ ಗಾನಗಳಲ್ಲಿ ಮಧ್ಯದಲ್ಲಿರುವ ಋಕ್ಕುಗಳ ಗಾನವನ್ನು ಮಾಡುವಾಗ ಯಜಮಾನನು ಕ್ರಮವಾಗಿ ಅನ್ವಾರೋಹಮಂತ್ರಗಳನ್ನು ಹೇಳಬೇಕು.

ನ ಪುರಾಽಽಯುಷಃ ಪ್ರಮೀಯತೇ ಪಶುಮಾನ್ಭವತಿ

ವಿಂದತೇ ಪ್ರಜಾಂ ಪವಮಾನಸ್ಯ ಗ್ರಹಾ

ಗೃಹ್ಯಂತೇಽಥ ವಾ

---

ನ । ಪುರಾ । ಆಯುಷಃ । ಪ್ರೇತಿ । ಮೀಯತೇ । ಪಶುಮಾನಿತಿ ಪಶು–ಮಾನ್ ।

ಭವತಿ । ವಿಂದತೇ । ಪ್ರಜಾಮಿತಿ ಪ್ರ–ಜಾಮ್ । ಪವಮಾನಸ್ಯ । ಗ್ರಹಾಃ ।

ಗೃಹ್ಯಂತೇ । ಅಥ । ವೈ ।

---

| | |
|---|---|
| ಆಯುಷಃ ಪುರಾ ನ ಪ್ರಮೀಯತೇ | [ಅಪಮೃತ್ಯುವಿನಿಂದ] ಆಯುಸ್ಸಿನ ಪೂರ್ಣಾವಧಿಗೆ ಮೊದಲೇ ಆತನು ಸಾಯುವುದಿಲ್ಲ. |
| ಪಶುಮಾನ್ ಭವತಿ | ಪಶುಗಳುಳ್ಳವನಾಗುತ್ತಾನೆ. |
| ಪ್ರಜಾಮ್ ವಿಂದತೇ | ಪುತ್ರಾದಿಪ್ರಜೆಯನ್ನೂ ಪಡೆಯುತ್ತಾನೆ. |

ವಿಚ್ಛಿತ್ತಿಯ ಸಂಭವವು ಹೇಗೆ? ಸಂಶಯ; ಸಮಾಧಾನ

| | |
|---|---|
| ಪವಮಾನಸ್ಯ ಗ್ರಹಾಃ ಗೃಹ್ಯಂತೇ[ವಾ] | ಪವಮಾನಸ್ತೋತ್ರಕ್ಕೆ ಸಂಬಂಧಿಸಿದ ದ್ರೋಣಕಲಶಾದಿಗ್ರಹಗಳು [ಮಂತ್ರಪೂರ್ವಕವಾಗಿ] ಗ್ರಹಣ ಮಾಡಲ್ಪಡುತ್ತವೆಯೋ? |
| ಅಥ ವೈ | ಹಾಗಲ್ಲದಿದ್ದರೆ |

---

**ತಾತ್ಪರ್ಯ:**–ಬಹಿಷ್ಪವಮಾನವೇ! ನೀನು ಗಿಡಗದಂತೆ ವೇಗವುಳ್ಳವನು. ಗಾಯತ್ರೀ ಛಂದಸ್ಸುಳ್ಳವನು. ನಿನ್ನನ್ನು ಅನುಕ್ರಮವಾಗಿ ಹೊಂದುತ್ತೇನೆ. ನನ್ನನ್ನು ಕ್ಷೇಮವಾಗಿ ಯಜ್ಞದ ತೀರಕ್ಕೆ ಸೇರಿಸು.

ಎಲೈ! ಮಾಧ್ಯಂದಿನಪವಮಾನವೇ! ನೀನು ಗರುಡನಂತೆ ವೇಗವುಳ್ಳವನು. ತ್ರಿಷ್ಟುಪ್ ಛಂದಸ್ಸನ್ನು ಹೊಂದಿದವನು. ನಿನ್ನನ್ನು ಅನುಕ್ರಮವಾಗಿ ಹೊಂದುವ ನನ್ನನ್ನು ಯಾಗದ ಕೊನೆಗೆ ಮುಟ್ಟಿಸು.

# ಅಸ್ಯೈತೇಽಗೃಹೀತಾ ದ್ರೋಣಕಲಶ ಆಧವನೀಯಃ ಪೂತಭೃತ್ತಾನ್ ಯದಗೃಹೀತ್ವೋಪಾಕುರ್ಯಾ - ತ್ಪವಮಾನಂ

---

ಅಸ್ಯ । ಏತೇ । ಅಗೃಹೀತಾಃ । ದ್ರೋಣಕಲಶ ಇತಿ ದ್ರೋಣ-ಕಲಶಃ । ಆಧವನೀಯ ಇತ್ಯಾ-ಧವನೀಯಃ । ಪೂತಭೃದಿತಿ ಪೂತ-ಭೃತ್ । ತಾನ್ । ಯತ್ । ಅಗೃಹೀತ್ವಾ । ಉಪಾಕುರ್ಯಾದಿತ್ಯುಪ-ಆಕುರ್ಯಾತ್ । ಪವಮಾನಮ್ ।

---

| | |
|---|---|
| ಅಸ್ಯ ದ್ರೋಣಕಲಶಃ ಆಧವನೀಯಃ ಪೂತಭೃತ್ ಏತೇ ಅಗೃಹೀತಾಃ | ಈ ಪವಮಾನದ ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್‌ಗಳೆಂಬ ಈ ಗ್ರಹಗಳು ಗ್ರಹಣ ಮಾಡಲ್ಪಡುವುದಿಲ್ಲವೇ? [ಹಾಗೆ ಗ್ರಹಣ ಮಾಡದಿರುವುದೂ ಯುಕ್ತವಾಗುವುದಿಲ್ಲ.] |
| ತಾನ್ ಅಗೃಹೀತ್ವಾ ಯತ್ ಉಪಾಕುರ್ಯಾತ್ | [ಏಕೆಂದರೆ] ಅವುಗಳನ್ನು ಗ್ರಹಣ ಮಾಡದೆ ಸ್ತೋತ್ರಕ್ಕೆ *ಉಪಾಕರಣ ಮಾಡಿದರೆ |

---

ಎಲೈ! ಆರ್ಭವಪವಮಾನವೇ! ಭಾಸದಂತೆ ಹಾರಬಲ್ಲ ನೀನು ಜಗತೀಛಂದ ಸ್ಸುಳ್ಳವನು. ನಿನ್ನನ್ನು ಅನುಕ್ರಮವಾಗಿ ಹೊಂದುವ ನನ್ನನ್ನು ಕ್ಷೇಮವಾಗಿ ಯಜ್ಞವನ್ನು ಮುಗಿಸುವಂತೆ ಮಾಡು ಎಂದು ಈ ಅನ್ವಾರೋಹಮಂತ್ರಗಳು ಹೇಳುತ್ತವೆ.

ಈ ಮಂತ್ರಗಳು ಪವಮಾನಗಳ ಅನ್ವಾರೋಹಗಳು. ಇವುಗಳನ್ನು ತಿಳಿದು ಯಾಗ ಮಾಡುವ ಯಜಮಾನನು ಅನುಕ್ರಮವಾಗಿ ಪವಮಾನಗಳನ್ನು ಹೊಂದುತ್ತಾನೆ. ಅವುಗಳಿಂದ ವಿಚ್ಛಿನ್ನನಾಗುವುದಿಲ್ಲ.

---

* 'ಗ್ರಹಂ ವಾ ಗೃಹೀತ್ವಾ ಚಮಸಂ ವೋನ್ನೀಯ ಸ್ತೋತ್ರಮುಪಾಕುರ್ಯಾತ್' ಎಂದು ಹೇಳಿರುವಂತೆ ಸ್ತೋತ್ರವನ್ನು ಆರಂಭಿಸಲು ಸೂಚನೆ ಕೊಡುವುದು ಉಪಾಕರಣ.

ವಿ[(೨)ಛಿಂದ್ಯಾ..]ಚ್ಛಿಂದ್ಯಾತ್ತಂ ವಿಚ್ಛಿದ್ಯಮಾನ
ಮಧ್ವರ್ಯೋಃ ಪ್ರಾಣೋಽನು ವಿಚ್ಛಿದ್ಯೇತೋಪಯಾಮ
ಗೃಹೀತೋಽಸಿ

---

ವೀತಿ ।[(೨)। ಛಿಂದ್ಯಾತ್ । ತಮ್ । ವಿಚ್ಛಿದ್ಯಮಾನಮಿತಿ ವಿ-ಛಿದ್ಯಮಾನಮ್ ।
ಅಧ್ವರ್ಯೋಃ । ಪ್ರಾಣ ಇತಿ ಪ್ರ-ಅನಃ । ಅನು । ವೀತಿ । ಛಿದ್ಯೇತ । ಉಪಯಾಮ
ಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ ।

---

ಪವಮಾನಮ್ ವಿಚ್ಛಿಂದ್ಯಾತ್
ತಮ್ ವಿಚ್ಛಿದ್ಯಮಾನಮ್
ಅಧ್ವರ್ಯೋಃ ಪ್ರಾಣಃ ಅನು
ವಿಚ್ಛಿದ್ಯೇತ

ಪವಮಾನವನ್ನು ವಿಚ್ಛೇದ ಮಾಡಿದಂತಾಗುತ್ತದೆ. ಹೀಗೆ ವಿಚ್ಛಿನ್ನವಾದ ಪವಮಾನವನ್ನು ಅನುಸರಿಸಿ ಅಧ್ವರ್ಯುವಿನ ಪ್ರಾಣವೂ ವಿಚ್ಛೇದ ಹೊಂದುತ್ತದೆ. [ದೋಷಪರಿಹಾರಕ್ಕಾಗಿ ಅಭಿಮಂತ್ರಣ ಮಾಡಬೇಕು]

## ಅಭಿಮಂತ್ರಣವಿಧಿ; ಅದರ ಅರ್ಥವಾದ

✦ಉಪಯಾಮಗೃಹೀತಃ ಅಸಿ= [ಎಲೈ! ದ್ರೋಣಕಲಶದಲ್ಲಿರುವ ಸೋಮರಸವೇ!] ನೀನು ಉಪಯಾಮ [ಮೃನ್ಮಯ]ಪಾತ್ರದಿಂದ ಗ್ರಹಿಸಲ್ಪಟ್ಟಿರುವೆ.

---

ಪವಮಾನಸ್ತೋತ್ರದಲ್ಲಿ ವಿಚ್ಛಿತ್ತಿಯಾಗದಿರುವುದು ಹೇಗೆಂದು ತಿಳಿದವನು ದೀರ್ಘಾಯುಷ್ಮಂತನಾಗುವನು. ಅಪಮೃತ್ಯುವಿಗೆ ಗುರಿಯಾಗುವುದಿಲ್ಲ. ಪಶುಮಂತನೂ, ಪ್ರಜಾವಂತನೂ ಆಗುತ್ತಾನೆ.

ಪವಮಾನಸ್ತೋತ್ರದಲ್ಲಿ ವಿಚ್ಛಿತ್ತಿಯು ಹೇಗೆ ಸಂಭವಿಸುತ್ತದೆಯೆಂಬುದನ್ನು

ಪ್ರಜಾಪತಯೇ ತ್ವೇತಿ ದ್ರೋಣಕಲಶಮಭಿಮೃಶೇದಿನ್ದ್ರಾಯ ತ್ವೇತ್ಯಾಧವನೀಯಂ ವಿಶ್ವೇಭ್ಯಸ್ತ್ವಾ ದೇವೇಭ್ಯ ಇತಿ ಪೂತಭೃತಂ

---

ಪ್ರಜಾಪತಯ ಇತಿ ಪ್ರಜಾ-ಪತಯೇ । ತ್ವಾ । ಇತಿ । ದ್ರೋಣಕಲಶಮಿತಿ ದ್ರೋಣ-ಕಲಶಮ್ । ಅಭೀತಿ । ಮೃಶೇತ್ । ಇನ್ದ್ರಾಯ । ತ್ವಾ । ಇತಿ । ಆಧವನೀಯಮಿತ್ಯಾ-ಧವನೀಯಮ್ । ವಿಶ್ವೇಭ್ಯಃ । ತ್ವಾ । ದೇವೇಭ್ಯಃ । ಇತಿ । ಪೂತಭೃತಮಿತಿ ಪೂತ-ಭೃತಮ್ ।

---

### ಮಂತ್ರ-ಅರ್ಥ

**ಪ್ರಜಾಪತಯೇ ತ್ವಾ** [ಅಭಿಮೃಶಾಮಿ] =ನಿನ್ನನ್ನು ಪ್ರಜಾಪತಿದೇವನಿಗಾಗಿ ಸ್ಪರ್ಶಿಸುತ್ತೇನೆ.

[ಉಪಯಾಮಗೃಹೀತಃ ಅಸಿ] **ಇನ್ದ್ರಾಯ ತ್ವಾ**=[ಎಲೈ! ಆಧವನೀಯಪಾತ್ರದಲ್ಲಿರುವ ಸೋಮರಸವೇ!] [ನೀನು ಮೃನ್ಮಯ ಪಾತ್ರದಿಂದ ಗ್ರಹಿಸಲ್ಪಟ್ಟಿರುವೆ.] ನಿನ್ನನ್ನು ಇಂದ್ರದೇವನಿಗಾಗಿ [ಸ್ಪರ್ಶಿಸುತ್ತೇನೆ].

[ಉಪಯಾಮಗೃಹೀತಃ ಅಸಿ] **ತ್ವಾ ವಿಶ್ವೇಭ್ಯಃ ದೇವೇಭ್ಯಃ**=[ಎಲೈ! ಸೋಮರಸವೇ! ನೀನು ಮೃನ್ಮಯಪಾತ್ರದಿಂದ ಗ್ರಹಿಸಲ್ಪಟ್ಟಿರುವೆ] ನಿನ್ನನ್ನು ವಿಶ್ವೇದೇವರಿಗಾಗಿ [ಸ್ಪರ್ಶಿಸುತ್ತೇನೆ]

### ಬ್ರಾಹ್ಮಣ - ವಿವರಣೆ

**ಇತಿ ದ್ರೋಣಕಲಶಮ್ ಅಭಿಮೃಶೇತ್** =ಎಂದು [ಸೋಮರಸಪೂರ್ಣವಾದ] ದ್ರೋಣಕಲಶವನ್ನು ಮುಟ್ಟಬೇಕು.

**ಇತಿ ಆಧವನೀಯಮ್ [ಅಭಿಮೃಶೇತ್]** =ಎಂದು ಆಧವನೀಯಪಾತ್ರವನ್ನು ಸ್ಪರ್ಶಿಸಬೇಕು.

**ಇತಿ ಪೂತಭೃತಮ್ [ಅಭಿಮೃಶೇತ್]** =ಎಂದು ಪೂತಭೃತವನ್ನು ಸ್ಪರ್ಶಿಸಬೇಕು.

ಪವಮಾನಮೇವ ತಥ್ಸಂತನೋತಿ ಸರ್ವಮಾಯುರೇತಿ ನ ಪುರಾಽಽಯುಷಃ ಪ್ರಮೀಯತೇ ಪಶುಮಾನ್ಭವತಿ ವಿಂದತೇ ಪ್ರಜಾಮ್ ॥ ೩-1 ॥

[ಏತೇ ವಿ ದ್ವಿಚತ್ವಾರಿಗ್ಂಶಚ್ಚ ॥]

---

ಪವಮಾನಮ್ । ಏವ । ತತ್ । ಸಮಿತಿ । ತನೋತಿ । ಸರ್ವಮ್ । ಆಯುಃ । ಏತಿ । ನ । ಪುರಾ । ಆಯುಷಃ । ಪ್ರೇತಿ । ಮೀಯತೇ । ಪಶುಮಾನಿತಿ ಪಶು-ಮಾನ್ । ಭವತಿ । ವಿಂದತೇ । ಪ್ರಜಾಮಿತಿ ಪ್ರ-ಜಾಮ್ ॥ ೩ ॥

---

| | |
|---|---|
| ತತ್ ಪವಮಾನಮ್ ಏವ | ಅದು ಪವಮಾನಸ್ತೋತ್ರವನ್ನೇ ಕೂಡಿಸುತ್ತದೆ. |
| ಸಂತನೋತಿ | /ವಿಚ್ಛಿತ್ತಿ ಇಲ್ಲದಂತೆ ಮಾಡುತ್ತದೆ. |
| ಸರ್ವಮ್ ಆಯುಃ ಏತಿ | ಯಜಮಾನನು ಪೂರ್ಣಾಯುಸ್ಸನ್ನು ಹೊಂದುತ್ತಾನೆ. |
| ಆಯುಷಃ ಪುರಾ ನ ಪ್ರಮೀಯತೇ | ಅಪಮೃತ್ಯುವಿನಿಂದ ಮಧ್ಯಾಯುಸ್ಸಿನಲ್ಲಿಯೇ ಸಾಯುವುದಿಲ್ಲ. |
| ಪಶುಮಾನ್ ಭವತಿ | ಗವಾದಿಪಶುಗಳನ್ನು ಹೊಂದುತ್ತಾನೆ. |
| ಪ್ರಜಾಮ್ ವಿಂದತೇ | ಪುತ್ರಾದಿಪ್ರಜೆಗಳನ್ನೂ ಪಡೆಯುವನು. |

---

ತಿಳಿಸಿ ಅದರ ಪರಿಹಾರವನ್ನು ಶ್ರುತಿಯು ತಿಳಿಸುತ್ತಿದೆ.

ಪವಮಾನಸ್ತೋತ್ರಕ್ಕೆ ಸಂಬಂಧಿಸಿದ ದ್ರೋಣಕಲಶಾದಿಗಳು ಮಂತ್ರಪುರಃಸರವಾಗಿ ಗ್ರಹಿಸಲ್ಪಡುತ್ತವೆಯೋ? ಅದು ಸಾಧ್ಯವಿಲ್ಲ. ಏಕೆಂದರೆ ಮಂತ್ರಭಾಗದಲ್ಲಿ ಆ ಮಂತ್ರಗಳು ಹೇಳಲ್ಪಟ್ಟಿಲ್ಲ. ಅವುಗಳ ವಿಧಿಯೂ ಇಲ್ಲ. ಹಾಗೆಂದು ಗ್ರಹಣ ಮಾಡದೇ ಇರುವುದೂ ಯುಕ್ತವಲ್ಲ. ಅವುಗಳನ್ನು ಗ್ರಹಿಸದೆ ಸ್ತೋತ್ರಕ್ಕೆ ಸೂಚನೆಯನ್ನು ನೀಡಿದರೆ

ಪವಮಾನವನ್ನು ವಿಚ್ಛೇದ ಮಾಡಿದಂತಾಗುತ್ತದೆ. ಪವಮಾನಸ್ತೋತ್ರವು ವಿಚ್ಛಿನ್ನವಾದರೆ ಅಧ್ವರ್ಯುವೂ ಅದನ್ನನುಸರಿಸಿ ಪ್ರಾಣವಿಹೀನನಾಗುತ್ತಾನೆ. ಈ ದೋಷವನ್ನು ಪರಿಹರಿಸುವುದಕ್ಕಾಗಿ ಅಭಿಮರ್ಶನವನ್ನು ಮಾಡಬೇಕು.

ದ್ರೋಣಕಲಶ, ಆಧವನೀಯ ಮತ್ತು ಪೂತಭೃತ್ತುಗಳನ್ನು ಪ್ರಜಾಪತಿ, ಇಂದ್ರ ಮತ್ತು ವಿಶ್ವೇದೇವರಿಗಾಗಿ ಸ್ಪರ್ಶಿಸುವೆನು ಎಂದು ಮಂತ್ರಗಳಿಂದ ಸ್ಪರ್ಶಿಸಿದರೆ ಪವಮಾನದಲ್ಲಿ ವಿಚ್ಛಿತ್ತಿಯಾಗುವುದಿಲ್ಲ. ಸಂತತಿ–ಆಯುಸ್ಸು–ಪ್ರಜೆ–ಪಶುಗಳು ಲಭಿಸುತ್ತವೆ.

ಈ ಸೋಮರಸದ ಗ್ರಹಣಪ್ರಕಾರವನ್ನು ಆಪಸ್ತಂಬರು ಶ್ರೌತಸೂತ್ರದಲ್ಲಿ ತಿಳಿಸಿರುತ್ತಾರೆ. ಅಭಿಷುತಮ್....ಅವನಯತಿ ।
ತೇಷು...ವಿತನ್ವಂತಿ ।
ಪವಿತ್ರಸ್ಯ...ಸ್ರಾವಯತಿ ।
ಪೂತಭೃತೋ...ಅವನೀಯ ।

[ಆಪ. ಶ್ರೌ. ಸೂ. 12.12.5.6; 12.12.12; 12.13.1; 12.16.11]

---

## ವಿನಿಯೋಗಸಂಗ್ರಹ

1-3 ಶ್ಯೇನಸ್ತ್ರೀನ್ ಪವಮಾನೇಷು ತ್ರಿಷು ಮಂತ್ರಾನ್ ಕ್ರಮಾಜ್ಜಪೇತ್ ।

4-6 ಪ್ರಜೇಂದ್ರಾ ವಿಶ್ವೇ ಮಂತ್ರಾಃ ಸ್ಯುರುಪಯಾಮಾದಿಕಾಸ್ತ್ರಯಃ ॥
ತೈರ್ದ್ರೋಣಕಲಶಾದೀನಾಂ ಸ್ಪರ್ಶೋ ಮಂತ್ರಾಸ್ತು ಷಣ್ಮತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–6

## ॥ ದ್ವಿತೀಯೋಽನುವಾಕಃ ॥

ತ್ರೀಣಿ ವಾವ ಸವನಾನ್ಯಥ ತೃತೀಯಗ್‌ಂ
ಸವನಮವಲುಂಪಂತ್ಯನಗ್‌ಂಶು ಕುರ್ವಂತ

---

ತ್ರೀಣಿ । ವಾವ । ಸವನಾನಿ । ಅಥ । ತೃತೀಯಮ್ । ಸವನಮ್ । ಅವೇತಿ ।
ಲುಂಪಂತಿ । ಅನಗ್‌ಂಶು । ಕುರ್ವಂತಃ ।

---

ಮೊದಲನೆಯ ಅನುವಾಕದಲ್ಲಿ ಪವಮಾನಗಳನ್ನು ಹೇಳಿದ್ದಾಯಿತು. ಈ ಎರಡನೆಯ ಅನುವಾಕದಲ್ಲಿ ಸವನಗಳು ಹೇಳಲ್ಪಡುತ್ತವೆ.

### ತೃತೀಯಸವನಕ್ಕೆ ಸವನತ್ವಪ್ರಾಪ್ತಿಯ ವಿಚಾರ

| | |
|---|---|
| ತ್ರೀಣಿ ವಾವ *ಸವನಾನಿ | ಪ್ರಾತಃಸವನ, ಮಾಧ್ಯಂದಿನಸವನ ಹಾಗೂ ತೃತೀಯಸವನಗಳೆಂದು ಮೂರು ಸವನಗಳು ಪ್ರಸಿದ್ಧವಾಗಿವೆಯಷ್ಟೆ. |
| ಅಥ | ಹೀಗಾದರೆ |
| ತೃತೀಯಮ್ ಸವನಮ್ ಅನಗ್‌ಂಶು ಕುರ್ವಂತಃ | ಮೂರನೆಯ ಸವನವನ್ನು ಸೋಮಾಂಶುರಹಿತವಾಗಿ ಯಾಗಮಾಡುವವರು [ಅಭಿಷವವಿಲ್ಲದುದರಿಂದ] |
| ಅವಲುಂಪಂತಿ | [ಅದನ್ನು] ನಾಶಪಡಿಸುತ್ತಾರೆ. |

---

*ಸೂಯತೇ ಸೋಮಃ ಏಷು ಇತಿ ಸವನಾನಿ । ಸೋಮಲತೆಯ ಅಭಿಷವವುಳ್ಳವುಗಳು.

## ಉಪಾಗ್ಂಶುಗ್ಂ ಹುತ್ವೋಪಾಗ್ಂಶುಪಾತ್ರೇಽಗ್ಂಶು ಮವಾಸ್ಯ ತಂ ತೃತೀಯಸವನೇಽಪಿಸೃಜ್ಯಾಭಿಷುಣುಯಾ ದ್ಯದಾಪ್ಯಾಯಯತಿ

---

ಉಪಾಗ್ಂಶುಮಿತ್ಯುಪ-ಅಗ್ಂಶುಮ್ । ಹುತ್ವಾ । ಉಪಾಗ್ಂಶುಪಾತ್ರ ಇತ್ಯುಪಾಗ್ಂಶು-ಪಾತ್ರೇ । ಅಗ್ಂಶುಮ್ । ಅವಾಸ್ಯೇತ್ಯವ-ಅಸ್ಯ । ತಮ್ । ತೃತೀಯಸವನ ಇತಿ ತೃತೀಯ-ಸವನೇ । ಅಪಿಸೃಜ್ಯೇತ್ಯಪಿ-ಸೃಜ್ಯ । ಅಭೀತಿ । ಸುನುಯಾತ್ । ಯತ್ । ಆಪ್ಯಾಯಯತೀತ್ಯಾ-ಪ್ಯಾಯಯತಿ ।

---

| | |
|---|---|
| ಉಪಾಗ್ಂಶುಮ್ ಹುತ್ವಾ | ಪ್ರಾತಃಸವನದಲ್ಲಿ ಉಪಾಂಶುಹೋಮವನ್ನು ಮಾಡಿದ ಮೇಲೆ |
| ಉಪಾಗ್ಂಶುಪಾತ್ರೇ ಅಗ್ಂಶುಮ್ ಅವಾಸ್ಯ | ಆ ಉಪಾಂಶುಗ್ರಹಪಾತ್ರೆಯಲ್ಲಿ [ಅಭಿಷವ ಮಾಡದಿರುವ] ಸೋಮಲತೆಯ ಚೂರುಗಳನ್ನು ಹಾಕಿ |
| ತೃತೀಯಸವನೇ ಅಪಿಸೃಜ್ಯ ತಮ್ ಅಭಿಷುಣುಯಾತ್ ಯತ್ ಆಪ್ಯಾಯಯತಿ | ಮೂರನೆಯ ಸವನದಲ್ಲಿ ಋಜೀಷದೊಡನೆ ಸೇರಿಸಿ ಅದನ್ನು ಅಭಿಷವ ಮಾಡಬೇಕು. [ವಸತೀವರಿಯೆಂಬ ನೀರಿನಿಂದ] ಆಪ್ಯಾಯನ ಮಾಡುವುದು ಯಾವುದುಂಟೋ |

---

ಸೋಮಲತೆಯ ಅಭಿಷವವಿರುವುದರಿಂದಲೇ 'ಸವನ' ಎಂಬ ಹೆಸರು ಬಂದಿದೆ. ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಸೋಮಾಭಿಷವವಿರುವುದರಿಂದ ಅವು ಸವನವೆನಿಸಿಕೊಳ್ಳುತ್ತವೆ. ತೃತೀಯಸವನದಲ್ಲಿ ರಸವನ್ನು ತೆಗೆದ ಸೋಮಲತೆಯ ಚೂರು[ಋಜೀಷ]ಗಳಿರುವುದರಿಂದ ಆ ಸವನವು ಸವನವೆನ್ನಿಸಿಕೊಳ್ಳುವುದಿಲ್ಲ. ಇದು ಇಲ್ಲಿನ ಶಂಕೆ.

ತೇನಾಗ್ಂಶುಮದ್ಯದಭಿಷುಣೋತಿ ತೇನರ್ಜೀಷಿ

ಸರ್ವಾಣ್ಯೇವ ತಥ್ಸವನಾನ್ಯಗ್ಂಶುಮಂತಿ ಶುಕ್ರವಂತಿ

ಸಮಾವದ್ವೀರ್ಯಾಣಿ ಕರೋತಿ

---

ತೇನ । ಅಗ್ಂಶುಮದಿತ್ಯಗ್ಂಶು-ಮತ್ । ಯತ್ । ಅಭಿಷುಣೋತೀತ್ಯಭಿ-ಸುನೋತಿ । ತೇನ । ಋಜೀಷಿ । ಸರ್ವಾಣಿ । ಏವ । ತತ್ । ಸವನಾನಿ । ಅಗ್ಂಶುಮಂತೀತ್ಯಗ್ಂಶು-ಮಂತಿ । ಶುಕ್ರವಂತೀತಿ ಶುಕ್ರ-ವಂತಿ । ಸಮಾವದ್ವೀರ್ಯಾಣೀತಿ ಸಮಾವತ್-ವೀರ್ಯಾಣಿ । ಕರೋತಿ ।

---

| | |
|---|---|
| ತೇನ ಅಗ್ಂಶುಮತ್ | ಆದರಿಂದ ಸೋಮಲತೆಯ ಚೂರುಗಳನ್ನು ನಿಯತವಾಗಿ ಹೊಂದಿದ್ದಾಗುತ್ತದೆ. |
| ಯತ್ ಅಭಿಷುಣೋತಿ | [ರಸವನ್ನು ತೆಗೆದ ಸೋಮದೊಡನೆ] ಅಭಿಷವ ಮಾಡುವುದೆಂಬುದು ಯಾವುದುಂಟೋ |
| ತೇನ | ಆದರಿಂದ |
| ಋಜೀಷಿ | ಋಜೀಷವುಳ್ಳದ್ದಾಗುತ್ತದೆ. |
| ತತ್ ಸರ್ವಾಣಿ ಏವ | ಹೀಗೆ ಎಲ್ಲ ಮೂರು ಸವನಗಳನ್ನೂ |
| ಸವನಾನಿ ಅಗ್ಂಶುಮಂತಿ | ಸೋಮಲತೆಯ ಚೂರುಗಳುಳ್ಳವುಗಳನ್ನಾಗಿಯೂ |
| ಶುಕ್ರವಂತಿ | ರಸವುಳ್ಳವುಗಳನ್ನಾಗಿಯೂ |
| ಸಮಾವದ್ವೀರ್ಯಾಣಿ | ಸಮಾನವಾದ ಶಕ್ತಿಯುಳ್ಳವುಗಳನ್ನಾಗಿಯೂ |
| ಕರೋತಿ | ಯಜಮಾನನು ಮಾಡುತ್ತಾನೆ. |

---

ಪ್ರಾತಃಸವನದಲ್ಲಿ ಉಪಾಂಶುಗ್ರಹಹೋಮವಾದ ಮೇಲೆ ಅಭಿಷವ ಮಾಡದೆ ಇರುವ ಸೋಮಲತೆಯ ಚೂರುಗಳನ್ನು ಉಪಾಂಶುಪಾತ್ರದಲ್ಲಿ ಹಾಕಿರಬೇಕು. ತೃತೀಯ ಸವನದಲ್ಲಿ ವಸತೀವರೀಜಲದಿಂದ ಸೇಚನ ಮಾಡಲ್ಪಟ್ಟ ಆ ಸೋಮಾಂಶುವನ್ನು

ದ್ವೌ ಸಮುದ್ರೌ ವಿತತಾವಜೂರ್ಯಾ ಪರ್ಯಾವರ್ತೇತೇ ಜಠರೇವ ಪಾದಾಃ । ತಯೋಃ ಪಶ್ಯಂತೋ ಅತಿಯಂತ್ಯನ್ಯಮಪಶ್ಯಂತಃ [(೪)] ಸೇತುನಾತಿಯಂತ್ಯನ್ಯಮ್ ॥

---

ದ್ವೌ । ಸಮುದ್ರೌ । ವಿತತಾವಿತಿ ವಿ-ತತೌ । ಅಜೂರ್ಯಾ । ಪರ್ಯಾವರ್ತೇತೇ ಇತಿ ಪರಿ-ಆವರ್ತೇತೇ । ಜಠರಾ । ಇವ । ಪಾದಾಃ ॥ ತಯೋಃ । ಪಶ್ಯಂತಃ । ಅತೀತಿ । ಯಂತಿ । ಅನ್ಯಮ್ । ಅಪಶ್ಯಂತಃ ।(೪)। ಸೇತುನಾ । ಅತೀತಿ । ಯಂತಿ । ಅನ್ಯಮ್ ॥

---

| ಮಂತ್ರ | ವಿನಿಯೋಗ |
| --- | --- |
| ದ್ವೌ ಸಮುದ್ರೌ...ಅನ್ಯಮ್ ॥ | ಪೂತಭೃತ್-ಆಧವನೀಯಗಳನ್ನು ಅವೇಕ್ಷಿಸಲು ಆಹವನೀಯದಲ್ಲಿ ಪ್ರಾಯಶ್ಚಿತ್ತ ಹೋಮವನ್ನು ಅನುಷ್ಠಿಸಲು- ಭ.ಭಾ.ಭಾ |

---

✦[ಇಲ್ಲಿ ಪೂತಭೃತ್-ಆಧವನೀಯಗಳನ್ನು ಸಮುದ್ರಗಳಂತೆಯೂ, ಅಹೋರಾತ್ರಗಳಂತೆಯೂ ವರ್ಣಿಸಲಾಗಿದೆ]**ದ್ವೌ ಸಮುದ್ರೌ**=ಎರಡು ಸಮುದ್ರಗಳಂತಿರುವ; **ವಿತತೌ**=ವಿಸ್ತೃತವಾದ;. **ಅಜೂರ್ಯಾ**=ಶೋಷಣೆಯಿಲ್ಲದ[ಪೂತಭೃತ್-ಆಧವನೀಯಗಳು] **ಜಠರಾ**=ಸಮುದ್ರದ ಒಳಗಡೆ; **ಪಾದಾಃ ಇವ**=ಅಲೆಗಳಂತೆ; **ಪರ್ಯಾವರ್ತೇತೇ**=[ಒಂದರ ಮೇಲೊಂದು ಬರುವಂತೆ]ಸರದಿಯಂತೆ ಬರುತ್ತವೆ; **ತಯೋಃ**=ಅವುಗಳಲ್ಲಿ; **ಅನ್ಯಮ್**=ಒಂದಾದ ಪೂತಭೃತ್ತನ್ನು [ಹಗಲನ್ನು] **ಪಶ್ಯಂತಃ**=ನೋಡುತ್ತಾ; **ಅತಿಯಂತಿ**=ಕಳೆಯುತ್ತಾರೆ. **ಅನ್ಯಮ್**=ಮತ್ತೊಂದಾದ ಆಧವನೀಯವನ್ನು; [ರಾತ್ರಿಯನ್ನು] [ಜನರು] **ಸೇತುನಾ**=ನೌಕೆಯಿಂದ/ಸೇತುವೆಯಿಂದ; **ಅಪಶ್ಯಂತಃ**=ಒಳಗಿರುವುದನ್ನು ತಿಳಿಯದವರಾಗಿ; **ಅತಿಯಂತಿ**=ಕಳೆಯುತ್ತಾರೆ.

**ದ್ವೇ ದ್ರಧಸೀ ಸತತೀ ವಸ್ತ ಏಕಃ ಕೇಶೀ ವಿಶ್ವಾ ಭುವನಾನಿ ವಿದ್ವಾನ್ । ತಿರೋಧಾಯ್ಯೈತ್ಯಸಿತಂ ವಸಾನಶ್ಶುಕ್ರಮಾದತ್ತೇ ಅನುಹಾಯ ಜಾರ್ಯೈ ॥**

---

ದ್ವೇ ಇತಿ । ದ್ರಧಸೀ ಇತಿ । ಸತತೀ ಇತಿ ಸ-ತತೀ । ವಸ್ತೇ । ಏಕಃ । ಕೇಶೀ । ವಿಶ್ವಾ । ಭುವನಾನಿ । ವಿದ್ವಾನ್ ॥ ತಿರೋಧಾಯೇತಿ ತಿರಃ-ಧಾಯ । ಏತಿ । ಅಸಿತಮ್ । ವಸಾನಃ । ಶುಕ್ರಮ್ । ಏತಿ । ದತ್ತೇ । ಅನುಹಾಯೇತ್ಯನು-ಹಾಯ । ಜಾರ್ಯೈ ॥

---

| ಮಂತ್ರ | ವಿನಿಯೋಗ |
|---|---|
| ದ್ವೇ...ಜಾರ್ಯೈ ॥ | ದ್ರೋಣಕಲಶದ ಅವೇಕ್ಷಣಮಂತ್ರ. ಪ್ರಾಯಶ್ಚಿತ್ತಹೋಮವನ್ನು ಆಹವನೀಯದಲ್ಲಿ ಅನುಷ್ಠಿಸಲು - ಭ.ಭಾ.ಭಾ |

---

[ಇಲ್ಲಿ ದ್ರೋಣಕಲಶವನ್ನು ಆದಿತ್ಯನೆಂದು ಸ್ತುತಿಸಿರುತ್ತಾರೆ.] **ಕೇಶೀ**= ಕಿರಣಗಳಿಂದ ಯುಕ್ತನಾದ; **ವಿಶ್ವಾ ಭುವನಾನಿ ವಿದ್ವಾನ್**=ಲೋಕಗಳೆಲ್ಲವನ್ನೂ ಪ್ರಕಾಶಗೊಳಿಸುವ /ತಿಳಿದಿರುವ; **ಏಕಃ**=ಮುಖ್ಯನಾದ ಆದಿತ್ಯನು; **ಸತತೀ** =ವಿಚ್ಛಿತ್ತಿಯಿಲ್ಲದ; **ದ್ವೇ ದ್ರಧಸೀ**=ಅಹೋರಾತ್ರರೂಪವಾದ ಎರಡು ವಸ್ತುಗಳನ್ನು; **ವಸ್ತೇ**=ಉಟ್ಟುಕೊಂಡಿರುತ್ತಾನೆ; **ಅಸಿತಮ್ ವಸಾನಃ**=ರಾತ್ರಿರೂಪವಾದ ಕಪ್ಪು ಬಟ್ಟೆಯನ್ನು ಧರಿಸಿರುವ ಆದಿತ್ಯನು; **ತಿರೋಧಾಯ ಏತಿ**=ರಾತ್ರಿಯಲ್ಲಿ ಕಾಣಿಸದಂತೆ ಹೋಗುತ್ತಾನೆ; **ಜಾರ್ಯೈ**=ಕಳೆದ ರಾತ್ರಿಯ ಅನಂತರ; **ಅನುಹಾಯ**=ಕಪ್ಪು ಬಟ್ಟೆಯನ್ನು ತ್ಯಜಿಸಿ; **ಶುಕ್ರಮ್ ಆದತ್ತೇ**=ಬಿಳಿಯದಾದ ಹಗಲೆಂಬ ಬಟ್ಟೆಯನ್ನು ಧರಿಸುವನು.

---

ರಸವನ್ನು ತೆಗೆದಿರುವ ಸೋಮಲತೆಯ ಋಜೀಷದೊಡನೆ ಸೇರಿಸಿ ಅಭಿಷವವನ್ನು ಮಾಡಬೇಕು. ಇದರಿಂದ ಮೂರನೆಯ ಸವನವೂ ಸೋಮಾಂಶುಯುಕ್ತವೂ, ಋಜೀಷ

ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ

ತೇ ದೇವಾ ಏತಂ ಮಹಾಯಜ್ಞಮಪಶ್ಯನ್ತಮತನ್ವತಾ-

---

ದೇವಾಃ । ವೈ । ಯತ್ । ಯಜ್ಞೇ । ಅಕುರ್ವತ । ತತ್ । ಅಸುರಾಃ । ಅಕುರ್ವತ ।

ತೇ । ದೇವಾಃ । ಏತಮ್ । ಮಹಾಯಜ್ಞಮಿತಿ ಮಹಾ-ಯಜ್ಞಮ್ । ಅಪಶ್ಯನ್ । 

ತಮ್ । ಅತನ್ವತ ।

---

ಮಹಾಯಜ್ಞದ ವಿಧಾನಕ್ಕಾಗಿ ಉಪಾಖ್ಯಾನರೂಪವಾದ ಅರ್ಥವಾದ

| | |
|---|---|
| ದೇವಾಃ ವೈ ಯತ್ ಯಜ್ಞೇ ಅಕುರ್ವತ | ದೇವತೆಗಳು ಯಜ್ಞದಲ್ಲಿ ಯಾವುದನ್ನು ಅನುಷ್ಠಿಸಿದರೋ |
| ತತ್ ಅಸುರಾಃ ಅಕುರ್ವತ | ಅದನ್ನು ದೇವವಿರೋಧಿಗಳಾದ ಅಸುರರೂ ಮಾಡಿದರು. |
| ತೇ ದೇವಾಃ | ಆ ದೇವತೆಗಳು |
| ಏತಮ್ ಮಹಾಯಜ್ಞಮ್ ಅಪಶ್ಯನ್ | ವಿಜಯೋಪಾಯವಾದ ಈ ಮಹಾಯಜ್ಞವನ್ನು ವಿಚಾರ ಮಾಡಿ ತಿಳಿದುಕೊಂಡರು. |
| ತಮ್ ಅತನ್ವತ | ಅದನ್ನು ಅನುಷ್ಠಾನ ಮಾಡಿದರು. |

---

ಸಹಿತವೂ ಆಗುತ್ತದೆ. ಈ ಮೂರು ಸವನಗಳೂ ಸಮಾನ ಬಲವುಳ್ಳವುಗಳಾಗುತ್ತವೆ.

ಈ ಮಂತ್ರದಲ್ಲಿ ಪೂತಭೃತ್-ಆಧವನೀಯಗಳನ್ನು ಸಮುದ್ರದಂತೆಯೂ, ಅಹೋರಾತ್ರಗಳಂತೆಯೂ ವರ್ಣಿಸಲಾಗಿದೆ. ಚಮಸಗಳಿಗೆ ಬೇಕಾಗುವಷ್ಟು ಸೋಮರಸವನ್ನು ಒದಗಿಸುವ ಈ ಪೂತಭೃದಾಧವನೀಯಗಳು ಒಣಗದ ವಿಸ್ತೀರ್ಣವಾದ ಸಮುದ್ರಗಳಂತೆ ಇವೆ. ಸಮುದ್ರದ ಅಲೆಗಳು ಒಂದರ ಮೇಲೊಂದು ಬರುವಂತೆ ಈ ಪೂತಭೃತ್-ಆಧವನೀಯಗಳು ಪರ್ಯಾಯದಿಂದ ಸೋಮರಸವನ್ನು ಒದಗಿಸುತ್ತವೆ.ಹಗಲಿನಲ್ಲಿ ನಡೆಯುವುದು ಎಲ್ಲರಿಗೂ ತಿಳಿಯುವಂತೆ ಪೂತಭೃತ್ತು ಎಲ್ಲರಿಗೂ

-ಗ್ನಿಹೋತ್ರಂ ವ್ರತಮಕುರ್ವತ ತಸ್ಮಾದ್ದ್ವಿವ್ರತಃ ಸ್ಯಾದ್ದ್ವಿ
ರ್ಹ್ಯಗ್ನಿಹೋತ್ರಂ ಜುಹ್ವತಿ ಪೌರ್ಣಮಾಸಂ ಯಜ್ಞಮಗ್ನೀ
ಷೋಮೀಯಂ [(೫)] ಪಶುಮಕುರ್ವತ ದಾರ್ಶ್ಯಂ ಯಜ್ಞ

---

ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ವ್ರತಮ್ । ಅಕುರ್ವತ । ತಸ್ಮಾತ್ । ದ್ವಿವ್ರತ
ಇತಿ ದ್ವಿ-ವ್ರತಃ । ಸ್ಯಾತ್ । ದ್ವಿಃ । ಹಿ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ಜುಹ್ವತಿ ।
ಪೌರ್ಣಮಾಸಮಿತಿ ಪೌರ್ಣ-ಮಾಸಮ್ । ಯಜ್ಞಮ್ । ಅಗ್ನೀಷೋಮೀಯಮಿತ್ಯಗ್ನೀ
-ಸೋಮೀಯಮ್ ।(೫)। ಪಶುಮ್ । ಅಕುರ್ವತ । ದಾರ್ಶ್ಯಮ್ । ಯಜ್ಞಮ್ ।

---

### ದೇವತೆಗಳು ಸೋಮಯಾಗವನ್ನು ಅನುಷ್ಠಿಸಿದ ರೀತಿ; ಫಲ

| | |
|---|---|
| ಅಗ್ನಿಹೋತ್ರಮ್[ಅಕುರ್ವತ] | [ಪ್ರಕಟವಾಗಿ]ಅಗ್ನಿಹೋತ್ರವನ್ನು ಅನುಷ್ಠಿಸಿದರು. |
| ವ್ರತಮ್ ಅಕುರ್ವತ | [ರಹಸ್ಯವಾಗಿ]ದೀಕ್ಷಾವ್ರತಾನುಷ್ಠಾನವನ್ನು ಮಾಡಿದರು. |
| ತಸ್ಮಾತ್ ದ್ವಿವ್ರತಃ ಸ್ಯಾತ್ | ಆದುದರಿಂದ ದೀಕ್ಷಿತನಾದವನು ಎರಡು ಹೊತ್ತು ಪಯಃಪಾನರೂಪವಾದ ವ್ರತವನ್ನು ಮಾಡುತ್ತಾನಷ್ಟೆ. |
| ಅಗ್ನಿಹೋತ್ರಮ್ ದ್ವಿಃ ಜುಹ್ವತಿ ಹಿ | ಅಗ್ನಿಹೋತ್ರಹೋಮವನ್ನು ಎರಡು ಬಾರಿ ಅನುಷ್ಠಿಸುವರಷ್ಟೆ. |
| ಪೌರ್ಣಮಾಸಮ್ ಯಜ್ಞಮ್ [ಅಕುರ್ವತ] | [ಬಹಿರಂಗವಾಗಿ] ಪೌರ್ಣಮಾಸಯಾಗವನ್ನು ಅನುಷ್ಠಿಸಿದರು. |
| ಅಗ್ನೀಷೋಮೀಯಮ್ ಪಶುಮ್ ಅಕುರ್ವತ | [ಗುಟ್ಟಾಗಿ] ಅಗ್ನೀಷೋಮೀಯಪಶುಯಾಗವನ್ನು ಅನುಷ್ಠಿಸಿದರು. |
| ದಾರ್ಶ್ಯಮ್ ಯಜ್ಞಮ್ [ಅಕುರ್ವತ] | [ಹೊರಗಡೆ] ದರ್ಶಯಾಗವನ್ನು ಅನುಷ್ಠಾನ ಮಾಡಿದರು. |

–ಮಾಗ್ನೇಯಂ ಪಶುಮಕುರ್ವತ ವೈಶ್ವದೇವಂ

ಪ್ರಾತಸ್ಸವನಮಕುರ್ವತ ವರುಣಪ್ರಘಾಸಾನ್ಮಾಧ್ಯಂದಿನಗ್ಂ

ಸವನಗ್ಂ ಸಾಕಮೇಧಾನ್ಪಿತೃಯಜ್ಞಂ ತ್ರ್ಯಂಬಕಾಗ್ಂ

---

ಆಗ್ನೇಯಮ್ । ಪಶುಮ್ । ಅಕುರ್ವತ । ವೈಶ್ವದೇವಮಿತಿ ವೈಶ್ವ–ದೇವಮ್ । ಪ್ರಾತಸ್ಸವನಮಿತಿ ಪ್ರಾತಃ–ಸವನಮ್ । ಅಕುರ್ವತ । ವರುಣಪ್ರಘಾಸಾನಿತಿ ವರುಣ–ಪ್ರಘಾಸಾನ್ । ಮಾಧ್ಯಂದಿನಮ್ । ಸವನಮ್ । ಸಾಕಮೇಧಾನಿತಿ ಸಾಕ–ಮೇಧಾನ್ । ಪಿತೃಯಜ್ಞಮಿತಿ ಪಿತೃ–ಯಜ್ಞಮ್ । ತ್ರ್ಯಂಬಕಾನಿತಿ ತ್ರಿ–ಅಂಬಕಾನ್ ।

---

| | |
|---|---|
| ಆಗ್ನೇಯಮ್ ಪಶುಮ್ ಅಕುರ್ವತ | [ರಹಸ್ಯವಾಗಿ] ಆಗ್ನೇಯ ಸವನೀಯಪಶು ಯಾಗ ಮಾಡಿದರು. |
| ವೈಶ್ವದೇವಮ್[ಅಕುರ್ವತ] | [ಬಹಿರಂಗವಾಗಿ] ಚಾತುರ್ಮಾಸ್ಯದ ವೈಶ್ವ ದೇವಯಾಗವನ್ನು ಮಾಡಿದರು. |
| ಪ್ರಾತಸ್ಸವನಮ್ ಅಕುರ್ವತ | [ಗುಟ್ಟಾಗಿ] ಪ್ರಾತಃಸವನವನ್ನು ಅನುಷ್ಠಿಸಿದರು. |
| ವರುಣಪ್ರಘಾಸಾನ್[ಅಕುರ್ವತ] | ಚಾತುರ್ಮಾಸ್ಯದ ವರುಣಪ್ರಘಾಸಗಳನ್ನು [ಎಲ್ಲರಿಗೂ ತಿಳಿಯುವಂತೆ] ಮಾಡಿದರು. |
| ಮಾಧ್ಯಂದಿನಮ್ ಸವನಮ್ [ಅಕುರ್ವತ] | ಸೋಮಯಾಗದ ಮಾಧ್ಯಂದಿನಸವನವನ್ನು [ಗುಟ್ಟಾಗಿ ಮಾಡಿದರು] |
| ಸಾಕಮೇಧಾನ್ ಪಿತೃಯಜ್ಞಮ್ ತ್ರ್ಯಂಬಕಾನ್[ಅಕುರ್ವತ] | ಚಾತುರ್ಮಾಸ್ಯದ ಸಾಕಮೇಧಗಳನ್ನೂ, ಪಿತೃ ಯಜ್ಞವನ್ನೂ, ತ್ರ್ಯಂಬಕಹೋಮಗಳನ್ನೂ [ಪ್ರಕಾಶವಾಗಿ] ಮಾಡಿದರು. |

---

ಕಾಣಿಸುತ್ತದೆ. ಸೇತುವಿನಂತಿರುವ ನೌಕೆಯಿಂದ ಸಮುದ್ರವನ್ನು ಅತಿಕ್ರಮಿಸುವವರು ಆಳವಾದ ನೀರಿನಲ್ಲಿ ಇರುವುದನ್ನು ನೋಡದಿರುವಂತೆ ನಿದ್ದೆ ಮಾಡುವ

–ಸ್ತೃತೀಯಸವನಮಕುರ್ವತ ತಮೇಷಾಮಸುರಾ ಯಜ್ಞ

ಮನ್ವಾಜಿಗಾಗ್ಂಸನ್ತಂ ನಾನ್ವಾಯನ್ತೇಽಬ್ರುವನ್ನ

ಧ್ವರ್ತವ್ಯಾ ವಾ ಇಮೇ ದೇವಾ ಅಭೂವನ್ನಿತಿ

---

ತೃತೀಯಸವನಮಿತಿ ತೃತೀಯ–ಸವನಮ್ । ಅಕುರ್ವತ । ತಮ್ । ಏಷಾಮ್ ।

ಅಸುರಾಃ । ಯಜ್ಞಮ್ । ಅನ್ವಾಜಿಗಾಗ್ಂಸನ್ನಿತ್ಯನು–ಆವಾಜಿಗಾಗ್ಂಸನ್ ।

ತಮ್ । ನ । ಅನ್ವಾಯನ್ನಿತ್ಯನು–ಅವಾಯನ್ನ್ । ತೇ । ಅಬ್ರುವನ್ನ್ ।

ಅಧ್ವರ್ತವ್ಯಾಃ । ವೈ । ಇಮೇ । ದೇವಾಃ । ಅಭೂವನ್ನ್ । ಇತಿ ।

---

| | |
|---|---|
| ತೃತೀಯಸವನಮ್ | ಸೋಮಯಾಗದ ತೃತೀಯಸವನವನ್ನು |
| ಅಕುರ್ವತ | [ರಹಸ್ಯವಾಗಿ] ಮಾಡಿದರು. |
| ಅಸುರಾಃ ಏಷಾಮ್ | ಅಸುರರು ಈ ದೇವತೆಗಳ |
| ತಮ್ ಯಜ್ಞಮ್ | ಆ ಯಜ್ಞವನ್ನು |
| ಅನ್ವಾಜಿಗಾಗ್ಂಸನ್ | ತಿಳಿಯಲು ಬಯಸಿದರು. |
| ತಮ್ ನ ಅನ್ವಾಯನ್ | ಅದನ್ನು ತಿಳಿಯಲಿಲ್ಲ. |
| ತೇ ಇಮೇ ದೇವಾಃ | |
| ಅಧ್ವರ್ತವ್ಯಾಃ ವೈ | ಅವರು 'ಈ ದೇವತೆಗಳು ಹಿಂಸಿಸಲು ಅಸಾಧ್ಯ |
| ಅಭೂವನ್ ಇತಿ | ರಾಗಿರುವರು' ಎಂದು ತಮ್ಮ ತಮ್ಮಲ್ಲಿ |
| ಅಬ್ರುವನ್ | ಮಾತನಾಡಿಕೊಂಡರು. |

---

ಮಾಡುವ ಮಾನವರು ರಾತ್ರಿಯಲ್ಲಿ ನಡೆಯುವುದನ್ನು ತಿಳಿಯಲಾರರು. ಹಾಗೆಯೇ ಕಾಣದಂತೆ ಇಟ್ಟಿರುವ ಆಧವನೀಯವನ್ನು ಜನರು ನೋಡಲಾರರು.

ಈ ಮಂತ್ರದಲ್ಲಿ ದ್ರೋಣಕಲಶವನ್ನು ಆದಿತ್ಯನೆಂದು ಸ್ತುತಿಸಲಾಗಿದೆ. ಅಹೋರಾತ್ರಿ ರೂಪವಾದ ಎರಡು ವಸ್ತ್ರಗಳನ್ನು ಧರಿಸಿರುವ ಆದಿತ್ಯನು ರಾತ್ರಿಯಲ್ಲಿ ಗೋಚರಿಸನು.

## ತದಧ್ವರಸ್ಯಾಧ್ವರತ್ವಂ ತತೋ ದೇವಾ ಅಭವನ್ಪರಾಽಸುರಾ ಯ ಏವಂ ವಿದ್ವಾನ್ಸೋಮೇನ ಯಜತೇ

---

ತತ್ । ಅಧ್ವರಸ್ಯ । ಅಧ್ವರತ್ವಮಿತ್ಯಧ್ವರ-ತ್ವಮ್ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಃ । ಏವಮ್ । ವಿದ್ವಾನ್ । ಸೋಮೇನ । ಯಜತೇ ।

---

| | |
|---|---|
| ತತ್ ಅಧ್ವರಸ್ಯ ಅಧ್ವರತ್ವಮ್ | ಇದೇ ಅಧ್ವರದ* ಅಧ್ವರತ್ವ.[ಯಾಗಾನುಷ್ಠಾನ ಮಾಡಿದವರನ್ನು ಹಿಂಸಿಸಲು ಸಾಧ್ಯವಿಲ್ಲವಾದುದರಿಂದ ಅದು ಅಧ್ವರ] |
| ತತಃ ದೇವಾಃ ಅಭವನ್ | ಬಳಿಕ ದೇವತೆಗಳು ಜಯಶೀಲರಾದರು. |
| ಅಸುರಾಃ ಪರಾ [ಅಭವನ್] | ಅಸುರರು ಸೋತುಹೋದರು. |

### ಸೋಮಯಾಗದ ವಿಧಿ; ಅದರ ಪ್ರಶಂಸೆ

| | |
|---|---|
| ಯಃ ಏವಮ್ ವಿದ್ವಾನ್ ಸೋಮೇನ ಯಜತೇ | ಹೀಗೆ ತಿಳಿದು ಯಾವನು ಸೋಮಯಾಗವನ್ನು ಅನುಷ್ಠಿಸುತ್ತಾನೆಯೋ |

---

ರಾತ್ರಿಯು ಕಳೆದ ನಂತರ ಕಪ್ಪುಬಟ್ಟೆಯಂತಿರುವ ರಾತ್ರಿಯನ್ನು ಬಿಟ್ಟು ಬಿಳಿ ಬಟ್ಟೆಯಂತಿರುವ ಹಗಲನ್ನು ಧರಿಸುವನು.

ಈ ದ್ರೋಣಕಲಶವೂ ಹವಿರ್ಧಾನಶಕಟದ ಕೆಳಗಡೆ ಇರುವುದರಿಂದ ರಾತ್ರಿಯಲ್ಲಿ ಸೂರ್ಯನಂತೆ ಕಾಣದು. ಹಾರಿಯೋಜನಗ್ರಹಕ್ಕಾಗಿ ತೆಗೆದಾಗ ಹಗಲಿನ ಸೂರ್ಯನಂತೆ ಗೋಚರಿಸುವುದು. ಇಂತಹ ಮಹಿಮೆಯುಳ್ಳ ಪೂತಭೃತ್,ಆಧವನೀಯ ಮತ್ತು ದ್ರೋಣಕಲಶಗಳು ನಮ್ಮ ಯಾಗವನ್ನು ಪೂರ್ಣಗೊಳಿಸಲಿ.

---

ದೇವಾಃ ಅನೇನ ಅಧ್ವರ್ತವ್ಯಾ ಅಭೂವನ್ ಇತಿ ಅಧ್ವರಃ=ಈ ಯಾಗದಿಂದ ದೇವತೆಗಳು ಹಿಂಸಿಸಲ್ಪಡದವರಂತಾದರು. ಇದು ಅಧ್ವರನಿರ್ವಚನ.

ಭವತ್ಯಾತ್ಮನಾ ಪರಾऽऽಸ್ಯ ಭ್ರಾತೃವ್ಯೋ ಭವತಿ ॥೬-2॥

[ಅಪಶ್ಯಂತೋऽಗ್ನೀಷೋಮೀಯಮಾತ್ಮನಾ ಪರಾ ತ್ರೀಣಿ ಚ ॥]

---

ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ॥೬॥

---

| | |
|---|---|
| ಆತ್ಮನಾ ಭವತಿ | [ಅವನು] ತಾನು ಐಶ್ವರ್ಯವಂತನಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾಭವತಿ | ಈತನ ವೈರಿಯು ಸೋತು ಹೋಗುತ್ತಾನೆ. |

---

ದೇವತೆಗಳು ಅಸುರರ ವಿಜಯಕ್ಕಾಗಿ ಏನೇನು ಮಾಡಿದರೋ ಅದೆಲ್ಲವನ್ನೂ ಅಸುರರೂ ಮಾಡಿದರು. ಹೀಗಾಗಿ ದೇವತೆಗಳು ಗೆಲುವನ್ನು ಪಡೆಯಲಾಗಲಿಲ್ಲ. ಮತ್ತೆ ಪರ್ಯಾಲೋಚನೆಯನ್ನು ಮಾಡಿದ ದೇವತೆಗಳು ಮಹಾಯಜ್ಞವಾದ ಸೋಮ ಯಾಗವನ್ನು ವಿಜಯದ ಉಪಾಯವನ್ನಾಗಿ ತಿಳಿದು ಅದನ್ನು ಅನುಷ್ಠಿಸಿದರು.

ದೇವತೆಗಳು ಅಸುರರಿಗೆ ತಿಳಿಯದಂತೆ ಸೋಮಯಾಗವನ್ನು ಅನುಷ್ಠಿಸಿದರು. ಅಗ್ನಿಹೋತ್ರ, ಪೌರ್ಣಮಾಸ, ದರ್ಶೇಷ್ಟಿ, ಚಾತುರ್ಮಾಸ್ಯಯಾಗಗಳು–ಇವುಗಳನ್ನು ಪ್ರಕಟವಾಗಿ ಅನುಷ್ಠಿಸಿ, ರಹಸ್ಯದಲ್ಲಿ ಸೋಮಯಾಗವನ್ನು ಅನುಷ್ಠಾನ ಮಾಡಿದರು. ಹೀಗಾಗಿ ಅಸುರರು ಸೋಮಯಾಗದ ಕ್ರಮವನ್ನು ತಿಳಿಯಲಾರದೆ ಹೋದರು. ದೇವತೆಗಳು ಜಯಶೀಲರಾದರು. ಅಸುರರು ಪರಾಭವವನ್ನು ಅನುಭವಿಸಿದರು.

ಇಲ್ಲಿ 'ಅಧ್ವರ' ಶಬ್ದದ ನಿರ್ವಚನವಿದೆ. ಇದನ್ನು ಅನುಷ್ಠಿಸಿದವರನ್ನು ಹಿಂಸಿಸಲು ಸಾಧ್ಯವಾಗದು. ಯಜ್ಞದ ಹಿಂಸೆಯು ಹಿಂಸೆಯಲ್ಲವಾದುದರಿಂದ ಯಜ್ಞವು 'ಅಧ್ವರ' ವೆನಿಸುತ್ತದೆ ಎಂಬ ಇನ್ನೊಂದು ನಿರ್ವಚನವೂ ಇದೆ.

ಈ ರೀತಿ ತಿಳಿದು ಯಾವನು ಸೋಮಯಾಗವನ್ನು ಅನುಷ್ಠಿಸುತ್ತಾನೆಯೋ ಅವನು ಐಶ್ವರ್ಯವಂತನಾಗುತ್ತಾನೆ. ಅವನ ಶತ್ರುವು ಸೋಲುವನು.

ಈ ಆಖ್ಯಾನದಿಂದ ಸೋಮಯಾಗವನ್ನು ಅಥವಾ ಮಹಾಯಜ್ಞವನ್ನು ಅನುಷ್ಠಿಸಬೇಕೆಂಬ ವಿಧಿಯು ಉಕ್ತವಾಗುತ್ತದೆ.

# ವಿನಿಯೋಗಸಂಗ್ರಹ

-ಅನುವಾಕೇ ದ್ವಿತೀಯೇ ತು ಸೋಮಯಾಗವಿಧಿಃ ಸ್ಮೃತಃ ।
1ದ್ವಾವಿತ್ಯವೇಕ್ಷತೇ ಪೂತಭೃತಂ ಚಾಧವನೀಯಕಮ್ ॥
2ದ್ವೇ ದ್ರೋಣಕಲಶಂ ಪಶ್ಯೇನ್ಮಂತ್ರೌ ದ್ವಾವಿಹ ವರ್ಣಿತೌ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-2

## ॥ ತೃತೀಯೋಽನುವಾಕಃ ॥

**ಪರಿಭೂರಗ್ನಿಂ ಪರಿಭೂರಿಂದ್ರಂ ಪರಿಭೂರ್ವಿಶ್ವಾನ್ದೇವಾನ್ಪರಿ ಭೂರ್ಮಾಗ್ಂ ಸಹ ಬ್ರಹ್ಮವರ್ಚಸೇನ**

---

**ಪರಿಭೂರಿತಿ ಪರಿ–ಭೂಃ । ಅಗ್ನಿಮ್ । ಪರಿಭೂರಿತಿ ಪರಿ–ಭೂಃ । ಇಂದ್ರಮ್ । ಪರಿಭೂರಿತಿ ಪರಿ–ಭೂಃ । ವಿಶ್ವಾನ್ । ದೇವಾನ್ । ಪರಿಭೂರಿತಿ ಪರಿ–ಭೂಃ । ಮಾಮ್ । ಸಹ । ಬ್ರಹ್ಮವರ್ಚಸೇನೇತಿ ಬ್ರಹ್ಮ–ವರ್ಚಸೇನ ।**

---

**ಎರಡನೆಯ ಅನುವಾಕದಲ್ಲಿ ಸೋಮಯಾಗವಿಧಿಯು ಹೇಳಲ್ಪಟ್ಟಿದೆ. ಮೂರನೆಯ ಅನುವಾಕದಲ್ಲಿ ಸೋಮಾವೇಕ್ಷಣಮಂತ್ರವು ಹೇಳಲ್ಪಡುತ್ತದೆ.**

---

| ಮಂತ್ರ | ವಿನಿಯೋಗ |
|---|---|
| ಪರಿಭೂಃ...ಉನ್ಮೃಜೇ ॥ | ಸಾಮಾನ್ಯವಾಗಿ ಸೋಮವೆಲ್ಲವನ್ನೂ ಅವೇಕ್ಷಣೆ ಮಾಡಲು/ಸೋಮೋಪಸ್ಥಾನವನ್ನು ಮಾಡಲು |

---

✦[ ಹೇ ಸೋಮರಾಜನೇ!] [ನೀನು] **ಅಗ್ನಿಮ್ ಪರಿಭೂಃ**=ಅಗ್ನಿಯನ್ನು ವ್ಯಾಪಿಸಿರುವೆ; **ಇಂದ್ರಮ್ ಪರಿಭೂಃ**=ಇಂದ್ರನನ್ನು ವ್ಯಾಪಿಸಿರುವೆ; **ವಿಶ್ವಾನ್ ದೇವಾನ್ ಪರಿಭೂಃ**=ವಿಶ್ವದೇವರನ್ನು/ಸಮಸ್ತದೇವತೆಗಳನ್ನೂ ವ್ಯಾಪಿಸಿರುವೆ; **ಬ್ರಹ್ಮವರ್ಚಸೇನ ಸಹ**=ಬ್ರಹ್ಮವರ್ಚಸದೊಡನೆ ಕೂಡಿಕೊಂಡಿರುವ; **ಮಾಮ್ ಪರಿಭೂಃ**=ನನ್ನನ್ನು ವ್ಯಾಪಿಸಿರುವೆ.

ಸ ನಃ ಪವಸ್ವ ಶಂ ಗವೇ ಶಂ ಜನಾಯ ಶಮರ್ವತೇ

ಶಗ್ಂ ರಾಜನ್ನೋಷಧೀಭ್ಯೋಽಚ್ಛಿನ್ನಸ್ಯ ತೇ ರಯಿಪತೇ

ಸುವೀರ್ಯಸ್ಯ ರಾಯಸ್ಪೋಷಸ್ಯ ದದಿತಾರಃ ಸ್ಯಾಮ ।

---

ಸಃ । ನಃ । ಪವಸ್ವ । ಶಮ್ । ಗವೇ । ಶಮ್ । ಜನಾಯ । ಶಮ್ । ಅರ್ವತೇ ।

ಶಮ್ । ರಾಜನ್ನ್ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಅಚ್ಛಿನ್ನಸ್ಯ । ತೇ ।

ರಯಿಪತ ಇತಿ ರಯಿ-ಪತೇ । ಸುವೀರ್ಯಸ್ಯೇತಿ ಸು-ವೀರ್ಯಸ್ಯ । ರಾಯಃ ।

ಪೋಷಸ್ಯ । ದದಿತಾರಃ । ಸ್ಯಾಮ ॥

---

**ಸಃ** ತ್ವಮ್=ಅಂತಹ ನೀನು; **ನಃ ಪವಸ್ವ**=ನಮ್ಮನ್ನು ಶುದ್ಧಿಗೊಳಿಸು; **ಗವೇ**=[ನಮ್ಮ] ಗವಾದಿ ಪಶುಗಳಿಗೆ; **ಶಮ್**[ಯಚ್ಛ]=ಸುಖವನ್ನು ನೀಡು; **ಜನಾಯ ಶಮ್**[ಯಚ್ಛ]=ಪುತ್ರಮಿತ್ರಾದಿ ಜನರಿಗೆ ಸುಖವನ್ನು ಕೊಡು; **ಅರ್ವತೇ ಶಮ್**[ಯಚ್ಛ]=ಕುದುರೆಗಳಿಗೆ ಸುಖವನ್ನು ಕೊಡು. **ರಾಜನ್**=ಸೋಮರಾಜನೇ! **ಓಷಧೀಭ್ಯಃ ಶಮ್**[ಯಚ್ಛ]=ಸಸ್ಯವರ್ಗಕ್ಕೂ ಸುಖವನ್ನು ಕೊಡು; **ರಯಿಪತೇ**=ಸರ್ವವಿಧವಾದ ಧನಕ್ಕೂ ಒಡೆಯನೇ! **ತೇ**=ನಿನ್ನ[ಅನುಗ್ರಹದಿಂದ] [ನಾವು] **ಅಚ್ಛಿನ್ನಸ್ಯ**=ವಿಚ್ಛಿತ್ತಿ/ನಾಶ ಇಲ್ಲದ; **ಸುವೀರ್ಯಸ್ಯ**=ಸುಪುತ್ರಾದಿಗಳಿಂದ ಯುಕ್ತವಾದ; **ರಾಯಃ ಪೋಷಸ್ಯ ದದಿತಾರಃ**=ಧನದ ಪುಷ್ಟಿಯನ್ನು ಬೇರೆಯವರಿಗೆ ಕೊಡುವವರಾಗಿ; **ಸ್ಯಾಮ**=ಆಗುತ್ತೇವೆ.

---

ಇದು ಸೋಮಾವೇಕ್ಷಣಕ್ಕಾಗಿ ವಿನಿಯೋಗವಾಗಿರುವ ಮಂತ್ರ. ಮತ್ತು ಇದು ಸಾಮಾನ್ಯಸೋಮಾವೇಕ್ಷಣಮಂತ್ರ. ಪ್ರತ್ಯೇಕವಾದ ಅವೇಕ್ಷಣೆಗಾಗಿ ಮುಂದೆ ಮಂತ್ರಗಳನ್ನು ಹೇಳಲಾಗುತ್ತದೆ.

ಹೇ! ಸೋಮರಾಜನೇ! ನೀನು ಎಲ್ಲವನ್ನೂ ವ್ಯಾಪಿಸಿರುವೆ. ನನ್ನ ಬಂಧುಗಳಿಗೂ, ಪಶ್ವಾದಿಗಳಿಗೂ ಸುಖವನ್ನು ಕೊಡು. ನಿನ್ನ ಅನುಗ್ರಹದಿಂದ ನಾವು ಧನಪುಷ್ಟಿಯನ್ನು

**ತಸ್ಯ ಮೇ ರಾಸ್ವ ತಸ್ಯ ತೇ ಭಕ್ಷೀಯ ತಸ್ಯ ತ ಇದಮುನ್ಮೃಜೇ । ಪ್ರಾಣಾಯ ಮೇ ವರ್ಚೋದಾ ವರ್ಚಸೇ ಪವಸ್ವಾಪಾನಾಯ**

ತಸ್ಯ । ಮೇ । ರಾಸ್ವ । ತಸ್ಯ । ತೇ । ಭಕ್ಷೀಯ । ತಸ್ಯ । ತೇ । ಇದಮ್ । ಉದಿತಿ । ಮೃಜೇ ॥ ಪ್ರಾಣಾಯೇತಿ ಪ್ರ–ಅನಾಯ । ಮೇ । ವರ್ಚೋದಾ ಇತಿ ವರ್ಚಃ–ದಾಃ । ವರ್ಚಸೇ । ಪವಸ್ವ । ಅಪಾನಾಯೇತ್ಯಪ–ಅನಾಯ ।

| ಮಂತ್ರ | ವಿನಿಯೋಗ |
|---|---|
| ಪ್ರಾಣಾಯ...ಪವಸ್ವ ॥ | ಉಪಾಂಶುಪಾತ್ರದ ಸೋಮವನ್ನು ಅವೇಕ್ಷಿಸಲು |
| *ಅಪಾನಾಯ...ಪವಸ್ವ ॥ | ಅಂತರ್ಯಾಮಪಾತ್ರದ ಸೋಮವನ್ನು ಅವೇಕ್ಷಿಸಲು |

**ಮೇ**=ನನಗೆ; **ತಸ್ಯ ರಾಸ್ವ**=ಧನಾದಿಸಂಪತ್ತನ್ನು ಕೊಡು; **ತಸ್ಯ ತೇ ಭಕ್ಷೀಯ**= ಅಂತಹ ನಿನ್ನನ್ನು ಸೋಮಪಾನದ ಕಾಲದಲ್ಲಿ ಭಕ್ಷಿಸುತ್ತೇವೆ. **ತಸ್ಯ ತೇ ಇದಮ್** =ಈ ಸೋಮಪಾನದ ಪ್ರಭಾವದಿಂದ/ನಿನ್ನ ಅನುಗ್ರಹದಿಂದ ಲಬ್ಧವಾದ ಈ ಧನಾದಿಗಳನ್ನು; **ಉನ್ಮೃಜೇ**=ಅತಿಪ್ರಕಾಶವುಳ್ಳವುಗಳನ್ನಾಗಿ ಮಾಡುವೆನು.✦[ಎಲೈ! ಉಪಾಂಶುಪಾತ್ರಸ್ಥ ಸೋಮವೇ! ನೀನು]**ವರ್ಚೋದಾಃ** ಅಸಿ= ಬಲವನ್ನು ಕೊಡುವವನಾಗಿರುವೆ. **ಮೇ**=ನನ್ನ; **ಪ್ರಾಣಾಯ**=ಉಚ್ಛ್ವಾಸರೂಪ ಪ್ರಾಣಕ್ಕೂ; **ವರ್ಚಸೇ**=ಬಲಕ್ಕೂ; **ಪವಸ್ವ**=[ನನ್ನನ್ನು] ಶುದ್ಧಿಗೊಳಿಸು. ✦[ಎಲೈ ಅಂತರ್ಯಾಮ ಪಾತ್ರದ ಸೋಮನೇ!] **ಅಪಾನಾಯ** ಮೇ ವರ್ಚೋದಾಃ ವರ್ಚಸೇ ಪವಸ್ವ=ನೀನು ವರ್ಚಸ್ಸನ್ನು ಕೊಡುವವನು.

*ಇಲ್ಲಿ '**ಪ್ರಾಣಾಯ ಮೇ ವರ್ಚೋದಾ ವರ್ಚಸೇ ಪವಸ್ವ**' ಎಂಬ ಮಂತ್ರದಿಂದ '**ಮೇ ವರ್ಚೋದಾ ವರ್ಚಸೇ ಪವಸ್ವ**' ಎಂಬ ಮಂತ್ರಾಂಶವನ್ನು ಮುಂದಿನ 1) ಅಪಾನಾಯ 2)ವ್ಯಾನಾಯ 3)ವಾಚೇ 4)ದಕ್ಷಕ್ರತುಭ್ಯಾಂ– ಈ ನಾಲ್ಕು ಮಂತ್ರಗಳಲ್ಲಿ ಅನುಷಂಗ ಮಾಡಬೇಕು. ಬಳಿಕ 'ಚಕ್ಷುರ್ಭ್ಯಾಂ'ಎಂಬ ಮಂತ್ರವನ್ನು ಬಿಟ್ಟು

# ವ್ಯಾನಾಯ ವಾಚೇ[(೭)ದಕ್ಷಕ್ರತು]ದಕ್ಷಕ್ರತುಭ್ಯಾಂ

ವ್ಯಾನಾಯೇತಿ ವಿ-ಅನಾಯ । ವಾಚೇ । [(೭)] ದಕ್ಷಕ್ರತುಭ್ಯಾಮಿತಿ ದಕ್ಷಕ್ರತು-ಭ್ಯಾಮ್ ।

| ಮಂತ್ರ | ವಿನಿಯೋಗ |
| --- | --- |
| ವ್ಯಾನಾಯ...ಪವಸ್ವ ॥ | ಉಪಾಂಶುಸವನಪಾತ್ರದ ಸೋಮವನ್ನು ಅವೇಕ್ಷಿಸಲು |
| ವಾಚೇ...ಪವಸ್ವ ॥ | ಐಂದ್ರವಾಯವಪಾತ್ರದ ಸೋಮವನ್ನು ಅವೇಕ್ಷಿಸಲು |
| ದಕ್ಷಕ್ರತುಭ್ಯಾಮ್...ಪವಸ್ವ ॥ | ಮೈತ್ರಾವರುಣಪಾತ್ರದ ಸೋಮವನ್ನು ಅವೇಕ್ಷಿಸಲು |

ನೀನು ನನ್ನ ನಿಃಶ್ವಾಸಕ್ಕೂ ಬಲಕ್ಕಾಗಿಯೂ ನನ್ನನ್ನು ಪವಿತ್ರನನ್ನಾಗಿ ಮಾಡು. ✦[ಓ! ಉಪಾಂಶುಸವನವೇ] **ವ್ಯಾನಾಯ** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲವನ್ನು ಕೊಡುವ ನೀನು ಶರೀರದಲ್ಲಿ *ಸರ್ವತ್ರ ಸಂಚರಿಸುವ ವ್ಯಾನಕ್ಕಾಗಿಯೂ, ಬಲಕ್ಕಾಗಿಯೂ, ನನ್ನನ್ನು ಪರಿಶುದ್ಧಿಗೊಳಿಸು. ✦[ಎಲೈ! ಐಂದ್ರವಾಯವಪಾತ್ರವೇ!] **ವಾಚೇ** ಮೇ ವರ್ಚೋದಾಃ ವರ್ಚಸೇ ಪವಸ್ವ=ನೀನು ಬಲವನ್ನು ಕೊಡುವವನು. ಮಾತಿಗಾಗಿಯೂ ಬಲಕ್ಕಾಗಿಯೂ ನನ್ನನ್ನು ಶುದ್ಧಿಗೊಳಿಸು. ✦[ಎಲೈ! ಮೈತ್ರಾವರುಣಪಾತ್ರವೇ!] **ದಕ್ಷಕ್ರತುಭ್ಯಾಮ್** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲದಾತನಾದ ನೀನು ದಕ್ಷಕ್ರತುಗಳಿಗಾಗಿ/ಪ್ರಾಣ-ಅಪಾನಗಳಿಗಾಗಿ ಮತ್ತು ಬಲಕ್ಕಾಗಿ ನನ್ನನ್ನು ಪೂತನನ್ನಾಗಿ ಮಾಡು.

**ಬೇರೆಯವರಿಗೆ ನೀಡುವವರಂತಾಗೋಣ. ನಿನ್ನ ಅನುಗ್ರಹದಿಂದ ದೊರಕಿದ ಈ ಸಂಪತ್ತನ್ನು ಬೆಳಗಿಸುವೆನು.**

**1) ಶ್ರೋತ್ರಾಯ 2)ಆತ್ಮನೇ 3)ಅಂಗೇಭ್ಯಃ 4)ಆಯುಷೇ 5)ವೀರ್ಯಾಯ ಎಂಬ 5 ಮಂತ್ರಗಳಲ್ಲಿ ಅನುಷಂಗವನ್ನು ಮಾಡಬೇಕು. ಅನಂತರ 1)ವಿಷ್ಣೋಃ 2)ಇಂದ್ರಸ್ಯ 3)ವಿಶ್ವೇಷಾಂ ದೇವಾನಾಮ್ ಎಂಬ ಮೂರು ಮಂತ್ರಗಳಿಗೂ 'ಜಠರಮಸಿ' ಎಂಬ ಪದಗಳೊಡನೆ 'ವರ್ಚೋದಾ ಮೇ ವರ್ಚಸೇ ಪವಸ್ವ' ಎಂಬ ಮಂತ್ರಾಂಶದ ಅನುಷಂಗವನ್ನು ಮಾಡಬೇಕು. ವಿನಿಯೋಗದಲ್ಲಿ ಪಾತ್ರಗಳ ಹೆಸರನ್ನು ಸೂಚಿಸಿದೆ.**

***ವ್ಯಾನಃ ಸರ್ವಶರೀರಗಃ ॥ -ಕೋಶ**

# ಚಕ್ಷುರ್ಭ್ಯಾಂ ಮೇ ವರ್ಚೋದೌ ವರ್ಚಸೇ

# ಪವೇಥಾಗ್ಂ ಶ್ರೋತ್ರಾಯಾತ್ಮನೇಽಂಗೇಭ್ಯ ಆಯುಷೇ

---

ಚಕ್ಷುರ್ಭ್ಯಾಮಿತಿ ಚಕ್ಷುಃ-ಭ್ಯಾಮ್ । ಮೇ । ವರ್ಚೋದಾವಿತಿ ವರ್ಚಃ-ದೌ ।

ವರ್ಚಸೇ । ಪವೇಥಾಮ್ । ಶ್ರೋತ್ರಾಯ । ಆತ್ಮನೇ । ಅಂಗೇಭ್ಯಃ । ಆಯುಷೇ ।

---

| ಮಂತ್ರ | ವಿನಿಯೋಗ |
| --- | --- |
| ಚಕ್ಷುರ್ಭ್ಯಾಮ್...ಪವೇಥಾಮ್॥ | ಶುಕ್ರಮಂಥಿಗ್ರಹಗಳ ಸೋಮವನ್ನು ಅವೇಕ್ಷಿಸಲು |
| ಶ್ರೋತ್ರಾಯ...ಪವಸ್ವ ॥ | ಆಶ್ವಿನಗ್ರಹಪಾತ್ರದ ಸೋಮವನ್ನು ಅವೇಕ್ಷಿಸಲು |
| ಆತ್ಮನೇ...ಪವಸ್ವ ॥ | ಆಗ್ರಯಣಪಾತ್ರದ ಸೋಮವನ್ನು ಅವೇಕ್ಷಿಸಲು |
| ಅಂಗೇಭ್ಯಃ...ಪವಸ್ವ ॥ | ಉಕ್ಥ್ಯಪಾತ್ರದ ಸೋಮವನ್ನು ಅವೇಕ್ಷಿಸಲು |
| ಆಯುಷೇ...ಪವಸ್ವ ॥ | ಧ್ರುವಪಾತ್ರದ ಸೋಮವನ್ನು ಅವೇಕ್ಷಿಸಲು |

---

✦[ಎಲೈ! ಶುಕ್ರಾಮಂಥಿಪಾತ್ರಗಳೇ!]**ಚಕ್ಷುರ್ಭ್ಯಾಮ್ ಮೇ ವರ್ಚೋದೌ ವರ್ಚಸೇ ಪವೇಥಾಮ್**=ಬಲದಾತರಾದ ನೀವು ನನ್ನ ಎರಡು ಚಕ್ಷುಗಳಿಗೂ ಮತ್ತು ಬಲಕ್ಕೂ ನನ್ನನ್ನು ಶುದ್ಧಿಗೊಳಿಸಿರಿ; ✦[ಎಲೈ! ಆಶ್ವಿನಪಾತ್ರವೇ!]**ಶ್ರೋತ್ರಾಯ** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲಪ್ರದನಾದ ನೀನು ನನ್ನ ಒಳ್ಳೆಯ ಕಿವಿಗೂ, ಬಲಕ್ಕೂ ನನ್ನನ್ನು ಪರಿಶುದ್ಧಿಗೊಳಿಸು; ✦[ಭೋ! ಆಗ್ರಯಣವೇ]**ಆತ್ಮನೇ** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲವನ್ನು ನೀಡುವ ನೀನು ಆತ್ಮನಿಗಾಗಿ [ದೇಹಕ್ಕಾಗಿ] ಮತ್ತು ಬಲಕ್ಕಾಗಿ ನನ್ನನ್ನು ಪ್ರಯತನನ್ನಾಗಿ ಮಾಡು. ✦[ಓ! ಉಕ್ಥ್ಯ ಪಾತ್ರವೇ!]**ಅಂಗೇಭ್ಯಃ** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲಪ್ರದನಾದ ನೀನು ನನ್ನ ಕರಚರಣಾದಿ ಅಂಗಗಳಿಗಾಗಿ ಮತ್ತು ಬಲಕ್ಕಾಗಿ ನನ್ನನ್ನು ಶುದ್ಧಿಪಡಿಸು. ✦[ಓ! ಧ್ರುವಪಾತ್ರವೇ!]**ಆಯುಷೇ** ಮೇ ವರ್ಚೋದಾಃ ವರ್ಚಸೇ ಪವಸ್ವ=ಬಲಪ್ರದನಾದ ನೀನು ಆಯುಸ್ಸಿಗಾಗಿ ಮತ್ತು ಬಲಕ್ಕಾಗಿ ನನ್ನನ್ನು ಶುದ್ಧನನ್ನಾಗಿ ಮಾಡು;

ವೀರ್ಯಾ॒ಯ ವಿ॒ಷ್ಣೋ॒ರಿಂದ್ರ॒ಸ್ಯ ವಿಶ್ವೇ॑ಷಾಂ ದೇ॒ವಾನಾಂ॑

ಜ॒ಠರಮಸಿ ವ॒ರ್ಚೋದಾ॒ ಮೇ॒ ವರ್ಚಸೇ ಪವಸ್ವ॒

ವೀರ್ಯಾ॒ಯ । ವಿ॒ಷ್ಣೋಃ । ಇಂದ್ರ॑ಸ್ಯ । ವಿಶ್ವೇ॑ಷಾಮ್ । ದೇ॒ವಾನಾ॑ಮ್ । ಜ॒ಠರ॑ಮ್ ।

ಅ॒ಸಿ॒ । ವ॒ರ್ಚೋ॒ದಾ ಇತಿ ವರ್ಚಃ-ದಾಃ । ಮೇ॒ । ವರ್ಚಸೇ । ಪ॒ವ॒ಸ್ವ॒ ।

| ಮಂತ್ರ | ವಿನಿಯೋಗ |
|---|---|
| ವೀರ್ಯಾ॒ಯ...ಪವಸ್ವ ॥ | ಅತಿಗ್ರಾಹ್ಯಷೋಡಶಿಪಾತ್ರದ ಸೋಮವನ್ನು ಅವೇಕ್ಷಿಸಲು. |
| ವಿ॒ಷ್ಣೋರ್ಜ॒ಠರಮಸಿ...ಪವಸ್ವ ॥ | ದ್ರೋಣಕಲಶಪಾತ್ರದ ಸೋಮವನ್ನು ಅವೇಕ್ಷಿಸಲು |
| ಇಂದ್ರ॑ಸ್ಯ...ಪವಸ್ವ ॥ | ಆಧವನೀಯಪಾತ್ರದ ಸೋಮವನ್ನು ಅವೇಕ್ಷಿಸಲು |
| ವಿಶ್ವೇ॑ಷಾಮ್ ದೇ॒ವಾನಾ॑ಮ್...ಪವಸ್ವ ॥ | ಪೂತಭೃತ್ಪಾತ್ರದ ಸೋಮವನ್ನು ಅವೇಕ್ಷಿಸಲು |

✦[ಎಲೈ! ಷೋಡಶಿಗ್ರಹವೇ!]**ವೀರ್ಯಾಯ** ಮೇ ವರ್ಚೋದಾಃ ವರ್ಚಸೇ ಪವಸ್ವ =ಬಲಪ್ರದನಾದ ನೀನು ಸಾಮರ್ಥ್ಯಕ್ಕಾಗಿ ಮತ್ತು ಬಲಕ್ಕಾಗಿ ನನ್ನನ್ನು ಪವಿತ್ರಗೊಳಿಸು. ✦[ಎಲೈ! ದ್ರೋಣಕಲಶವೇ!]**ವಿಷ್ಣೋಃ** ಜಠರಮ್ ಅಸಿ=[ನೀನು] ವಿಷ್ಣುವಿನ ಜಠರದಂತಿರುವೆ. ವರ್ಚೋದಾಃ ಮೇ ವರ್ಚಸೇ ಪವಸ್ವ=ನೀನು ಬಲಪ್ರದನು. ನೀನು ಬಲಕ್ಕಾಗಿ ನನ್ನನ್ನು ಪರಿಶುದ್ಧಿಗೊಳಿಸು. ✦[ಓ! ಆಧವನೀಯ[illegible]!] **ಇಂದ್ರಸ್ಯ** ಜಠರಮ್ ಅಸಿ=ನೀನು ಇಂದ್ರನ ಉದರವಾಗಿರುವೆ. ಮೇ ವರ್ಚೋದಾಃ ವರ್ಚಸೇ ಪವಸ್ವ=ನೀನು ಬಲಪ್ರದನು. ನನ್ನನ್ನು ಬಲಕ್ಕಾಗಿ ಶುದ್ಧಿಪಡಿಸು. ✦[ಓ! ಪೂತಭೃತ್ ಪಾತ್ರೆಯೇ!]**ವಿಶ್ವೇಷಾಮ್ ದೇವಾನಾಮ್** ಜಠರಮ್ ಅಸಿ=[ನೀನು ವಿಶ್ವೇದೇವರ ಉದರರೂಪನಾಗಿದ್ದೀಯೆ; ಮೇ ವರ್ಚೋದಾಃ ವರ್ಚಸೇ ಪವಸ್ವ=ನೀನು ಬಲವನ್ನೀಯವವನು. ಬಲಕ್ಕಾಗಿ ನನ್ನನ್ನು ಶುದ್ಧಿಗೊಳಿಸು.

ಈ ಮಂತ್ರಗಳು ಪ್ರತ್ಯೇಕ ಪಾತ್ರೆಗಳಲ್ಲಿರುವ ಸೋಮಾವೇಕ್ಷಣಮಂತ್ರಗಳು. ಅವುಗಳಲ್ಲಿರುವ ಸೋಮರಸವನ್ನು ಅವೇಕ್ಷಿಸುವುದರಿಂದ ಆಯಾ ವಿಶೇಷಫಲಗಳು ಲಭಿಸುತ್ತವೆ. ಇಲ್ಲಿ ಸೂತ್ರದಲ್ಲಿ ಮಂತ್ರವಿಶೇಷಗಳೂ ಇವೆ.

## ಕೋऽಸಿ ಕೋ ನಾಮ ಕಸ್ಮೈ ತ್ವಾ ಕಾಯ ತ್ವಾ ಯಂ ತ್ವಾ ಸೋಮೇನಾತೀತೃಪಂ ಯಂ ತ್ವಾ ಸೋಮೇನಾಮೀಮದಗ್‍ಂ ಸುಪ್ರಜಾಃ ಪ್ರಜಯಾ ಭೂಯಾಸಗ್‍ಂ

---

ಕಃ । ಅಸಿ । ಕಃ । ನಾಮ । ಕಸ್ಮೈ । ತ್ವಾ । ಕಾಯ । ತ್ವಾ । ಯಮ್ । ತ್ವಾ । ಸೋಮೇನ । ಅತೀತೃಪಮ್ । ಯಮ್ । ತ್ವಾ । ಸೋಮೇನ । ಅಮೀಮದಮ್ । ಸುಪ್ರಜಾ ಇತಿ ಸು-ಪ್ರಜಾಃ । ಪ್ರಜಯೇತಿ ಪ್ರ-ಜಯಾ । ಭೂಯಾಸಮ್ ।

---

| ಮಂತ್ರ | ವಿನಿಯೋಗ |
|---|---|
| ಕೋऽಸಿ...ಪ್ರೋಕ್ಷ್ಯೈ: ॥ | ಆಹವನೀಯವನ್ನು ಅವೇಕ್ಷಿಸಲು- ಸಾಯಣರು. |
| ಕೋಸಿ....ಇದಮುನ್ಮೃಜೇ ॥ | ಸಮಸ್ತಸೋಮೋಪಸ್ಥಾನಕ್ಕಾಗಿ -ಭ.ಭಾ.ಭಾ |
| ವಿಶ್ವೇಭ್ಯೋ...ಇದಮುನ್ಮೃಜೇ ॥ | ಸಮಸ್ತಸೋಮಾವೇಕ್ಷಣೆಯನ್ನು ಮಾಡಲು ಸಾಯಣ/ಭ.ಭಾ.ಭಾ |

---

✦[ಆಹವನೀಯವೇ!ಸೋಮರಾಜನೇ!] **ಕಃ ಅಸಿ**=ನೀನು ಪ್ರಜಾಪತಿರೂಪನಾಗಿರುವೆ; **ಕಃ ನಾಮ**=ಯಾಗಸಾಧಕನಾಗಿ ಸುಖವನ್ನು ಕೊಡುವವನಾದುದರಿಂದ 'ಕ' ಎಂಬ ಹೆಸರುಳ್ಳವನಾಗಿರುವೆ; **ಕಸ್ಮೈ ತ್ವಾ**=ಅನಿರ್ವಾಚ್ಯನಾದ ಪ್ರಜಾಪತಿಗಾಗಿ ನಿನ್ನನ್ನು [ನೋಡುತ್ತೇನೆ] **ಕಾಯ ತ್ವಾ**=ಸುಖಕ್ಕಾಗಿ ನಿನ್ನನ್ನು [ನೋಡುತ್ತೇನೆ] **ಯಮ್ ತ್ವಾ**=ಯಾವ ನಿನ್ನನ್ನು; **ಸೋಮೇನ ಅತೀತೃಪಮ್**=ಸೋಮನಿಂದ ತೃಪ್ತಿಪಡಿಸುತ್ತೇನೆಯೋ; **ಯಮ್ ತ್ವಾ**=ಯಾವ ನಿನ್ನನ್ನು; **ಸೋಮೇನ ಅಮೀಮದಮ್**=ಸೋಮದ್ರವ್ಯದಿಂದ ಸಂತೋಷಪಡಿಸುತ್ತೇನೆಯೋ;[ಅಂತಹ ನಿನ್ನ ಅನುಗ್ರಹದಿಂದ] **ಪ್ರಜಯಾ**=ಭೃತ್ಯಾದಿಜನರಿಂದ; **ಸುಪ್ರಜಾಃ ಭೂಯಾಸಮ್** =ಒಳ್ಳೆಯ ಪ್ರಜೆಯುಳ್ಳವನಾಗುವೆನು.

ಸುವೀರೋ ವೀರೈಸ್ಸುವರ್ಚಾ ವರ್ಚಸಾ ಸುಪೋಷಃ

ಪೋಷೈರ್ವಿಶ್ವೇಭ್ಯೋ ಮೇ ರೂಪೇಭ್ಯೋ ವರ್ಚೋದಾ

[ವರ್ಚೋದಾಃ(ಲ)]ವರ್ಚಸೇ ಪವಸ್ವ ತಸ್ಯ ಮೇ ರಾಸ್ವ

ತಸ್ಯ ತೇ ಭಕ್ಷೀಯ ತಸ್ಯ ತ ಇದಮುನ್ಮೃಜೇ ।

---

ಸುವೀರ ಇತಿ ಸು-ವೀರಃ । ವೀರೈಃ । ಸುವರ್ಚಾ ಇತಿ ಸು-ವರ್ಚಾಃ । ವರ್ಚಸಾ ।

ಸುಪೋಷ ಇತಿ ಸು-ಪೋಷಃ । ಪೋಷೈಃ । ವಿಶ್ವೇಭ್ಯಃ । ಮೇ । ರೂಪೇಭ್ಯಃ ।

ವರ್ಚೋದಾ ಇತಿ ವರ್ಚಃ-ದಾಃ । ವರ್ಚಸೇ । ಪವಸ್ವ । ತಸ್ಯ । ಮೇ । ರಾಸ್ವ । ತಸ್ಯ ।

ತೇ । ಭಕ್ಷೀಯ । ತಸ್ಯ । ತೇ । ಇದಮ್ । ಉದಿತಿ । ಮೃಜೇ ॥

---

**ವೀರೈಃ**=ಕಾರ್ಯಸಮರ್ಥರಾದ ಪುತ್ರರಿಂದ; **ಸುವೀರಃ** ಭೂಯಾಸಮ್=ಒಳ್ಳೆಯ ಪುತ್ರರುಳ್ಳವನಾಗುವೆನು. **ವರ್ಚಸಾ**=ಬಲದಿಂದ; **ಸುವರ್ಚಾಃ**=ಒಳ್ಳೆಯ ಬಲವುಳ್ಳವನಾಗಿ; ಭೂಯಾಸಮ್=ಆಗುವೆನು; **ಪೋಷೈಃ**=ಧನಪುಷ್ಟ್ಯಾದಿಗಳಿಂದ; **ಸುಪೋಷಃ**=ಒಳ್ಳೆಯ ಪುಷ್ಟಿಯುಳ್ಳವನಾಗಿ; ಭೂಯಾಸಮ್=ಆಗುವೆನು; [ಎಲೈ! ಸರ್ವಪಾತ್ರಸ್ಥಿತನಾದ ಸೋಮರಾಜನೇ! ನೀನು]**ಮೇ**=ನನಗೆ [ಬೇಕಾದ] **ವಿಶ್ವೇಭ್ಯಃ ರೂಪೇಭ್ಯಃ**=ಪ್ರಾಣಾಪಾನಾದಿ ಸರ್ವಸಿದ್ಧಿಗಳಿಗಾಗಿ; **ವರ್ಚೋದಾಃ**=ಬಲವನ್ನು ಕೊಡುವವನಾಗಿ; **ವರ್ಚಸೇ ಪವಸ್ವ**=ಬಲಕ್ಕಾಗಿ ನನ್ನನ್ನು ಶುದ್ಧಪಡಿಸು; **ತಸ್ಯ ಮೇ ರಾಸ್ವ**=ಅಂತಹ ನನಗೆ [ಧನವನ್ನು]ಕೊಡು; **ತಸ್ಯ ತೇ ಭಕ್ಷೀಯ**=ಅಂತಹ ನಿನ್ನನ್ನು ಭಕ್ಷಣಕಾಲದಲ್ಲಿ ಭಕ್ಷಿಸುವೆನು; **ತಸ್ಯ ತೇ**=ಆ ನಿನ್ನ [ಅನುಗ್ರಹದಿಂದ] **ಇದಮ್ ಉನ್ಮೃಜೇ**=ಈ ನನ್ನ ಕಾಮನೆಗಳನ್ನು ಉಜ್ವಲಗೊಳಿಸುತ್ತೇನೆ.

---

ಎಲೈ! ಆಹವನೀಯವೇ! ಸೋಮರಾಜನೇ! ನಿನ್ನನ್ನು ಸುಖಕ್ಕಾಗಿ ನೋಡುವೆನು. ನಿನ್ನಿಂದ ನಾನು ಒಳ್ಳೆಯ ಪ್ರಜೆ, ಬಲ ಮತ್ತು ಪುಷ್ಟಿಗಳನ್ನು ಪಡೆಯುವೆನು.

ಬುಭೂಷನ್ನವೇಕ್ಷೇತೈಷ ವೈ ಪಾತ್ರಿಯಃ

ಪ್ರಜಾಪತಿರ್ಯಜ್ಞಃ ಪ್ರಜಾಪತಿಸ್ತಮೇವ ತರ್ಪಯತಿ ಸ

ಏನಂ ತೃಪ್ತೋ ಭೂತ್ಯಾಽಭಿಪವತೇ

---

ಬುಭೂಷನ್ । ಅವೇತಿ । ಈಕ್ಷೇತ । ಏಷಃ । ವೈ । ಪಾತ್ರಿಯಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಯಜ್ಞಃ । ಪ್ರಜಾಪತಿರಿತಿ ಪ್ರಜಾ-ಪತಿಃ । ತಮ್ । ಏವ । ತರ್ಪಯತಿ । ಸಃ । ಏನಮ್ । ತೃಪ್ತಃ । ಭೂತ್ಯಾ । ಅಭೀತಿ । ಪವತೇ ।

---

## ಕಾಮ್ಯಸೋಮಾವೇಕ್ಷಣವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಬುಭೂಷನ್ ಅವೇಕ್ಷೇತ | ಚೆನ್ನಾಗಿ ಬಾಳಬೇಕೆಂದು/ಐಶ್ವರ್ಯವಂತನಾಗಬೇಕೆಂದು ಬಯಸುವವನು ಆ ಕಾಮನೆಯಿಂದ ಸೋಮಾವೇಕ್ಷಣೆಯನ್ನು ಮಾಡಬೇಕು. |
| ಏಷಃ ವೈ ಪಾತ್ರಿಯಃ ಪ್ರಜಾಪತಿಃ | ಪಾತ್ರದಲ್ಲಿರುವ ಸೋಮನು ಪ್ರಜಾಪತಿರೂಪನಷ್ಟೆ. |
| ಯಜ್ಞಃ ಪ್ರಜಾಪತಿಃ ತಮ್ ಏವ ತರ್ಪಯತಿ | ಯಜ್ಞವೂ ಪ್ರಜಾಪತಿರೂಪವೇ. [ಈ ಅವೇಕ್ಷಣದಿಂದ] ಪ್ರಜಾಪತಿಯನ್ನೇ ಯಜಮಾನನು ತೃಪ್ತಿಗೊಳಿಸುತ್ತಾನೆ. |
| ಸಃ ತೃಪ್ತಃ ಏನಮ್ *ಭೂತ್ಯಾ ಅಭಿಪವತೇ | ತೃಪ್ತನಾದ ಆ ಪ್ರಜಾಪತಿಯು ಐಶ್ವರ್ಯಕ್ಕಾಗಿ ಈ ಯಜಮಾನನನ್ನು ಸರ್ವತ್ರ ಶುದ್ಧಿಗೊಳಿಸುತ್ತಾನೆ. |

---

ಈ ಬ್ರಾಹ್ಮಣಭಾಗದಲ್ಲಿ 'ಭೂತ್ಯಾ' 'ಬ್ರಹ್ಮವರ್ಚಸೇನ' 'ಆಯುಷಾ' ಎಂಬ ತೃತೀಯಾವಿಭಕ್ತಿಯಿಂದ ಕೂಡಿದ ಪದಗಳಿಗೆ 'ಭೂತ್ಯೈ'=ಐಶ್ವರ್ಯಕ್ಕಾಗಿ; 'ಬ್ರಹ್ಮವರ್ಚಸಾಯ'=ಬ್ರಹ್ಮವರ್ಚಸಕ್ಕಾಗಿ; 'ಆಯುಷೇ'=ದೀರ್ಘಾಯುಷ್ಯಕ್ಕಾಗಿ ಎಂಬ ಚತುರ್ಥೀವಿಭಕ್ತಿಯ ಅರ್ಥವನ್ನು ಭಾಷ್ಯಕಾರರು ವಿವರಿಸಿದ್ದಾರೆ. 'ಧಾತೂನಾಮನೇಕಾರ್ಥತ್ವಮ್'ಎಂಬ ವಚನದಂತೆ 'ಅಭಿಪವತೇ' ಎಂಬ ಕ್ರಿಯಾಪದಕ್ಕೆ 'ತುಂಬುತ್ತಾನೆ'

ಬ್ರಹ್ಮವರ್ಚಸಕಾಮೋಽವೇಕ್ಷೇತೈಷ ವೈ ಪಾತ್ರಿಯಃ
ಪ್ರಜಾಪತಿರ್ಯಜ್ಞಃ ಪ್ರಜಾಪತಿಸ್ತಮೇವ ತರ್ಪಯತಿ ಸ
ಏನಂ ತೃಪ್ತೋ ಬ್ರಹ್ಮವರ್ಚಸೇನಾಭಿಪವತ

---

ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ । ಅವೇತಿ । ಈಕ್ಷೇತ । ಏಷಃ । ವೈ । ಪಾತ್ರಿಯಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಯಜ್ಞಃ । ಪ್ರಜಾಪತಿರಿತಿ ಪ್ರಜಾ-ಪತಿಃ । ತಮ್ । ಏವ । ತರ್ಪಯತಿ । ಸಃ । ಏನಮ್ । ತೃಪ್ತಃ । ಬ್ರಹ್ಮವರ್ಚಸೇನೇತಿ ಬ್ರಹ್ಮ-ವರ್ಚಸೇನ । ಅಭೀತಿ । ಪವತೇ ।

---

## ಬ್ರಹ್ಮವರ್ಚಸವನ್ನು ಬಯಸುವವನಿಗೆ ಅವೇಕ್ಷಣವಿಧಿ

| | |
|---|---|
| ಬ್ರಹ್ಮವರ್ಚಸಕಾಮಃ ಅವೇಕ್ಷೇತ | ಬ್ರಹ್ಮವರ್ಚಸವನ್ನು ಬಯಸುವವನು ಆ ಕಾಮನೆಯಿಂದ ಸೋಮಾವೇಕ್ಷಣೆಯನ್ನು ಮಾಡಬೇಕು. |
| ಏಷಃ ವೈ ಪಾತ್ರಿಯಃ ಪ್ರಜಾಪತಿಃ | ಈ ಪಾತ್ರದಲ್ಲಿರುವ ಸೋಮನು ಪ್ರಜಾಪತಿ ಸ್ವರೂಪನಾಗಿದ್ದಾನೆ. |
| ಯಜ್ಞಃ ಪ್ರಜಾಪತಿಃ | ಯಜ್ಞವೂ ಪ್ರಜಾಪತಿಸ್ವರೂಪವೇ. |
| ತಮ್ ಏವ ತರ್ಪಯತಿ | [ಈ ಅವೇಕ್ಷಣದಿಂದ] ಯಜಮಾನನು ಪ್ರಜಾಪತಿಯನ್ನೇ ತೃಪ್ತಿಪಡಿಸುತ್ತಾನೆ. |
| ಸಃ ತೃಪ್ತಃ ಏನಮ್ ಬ್ರಹ್ಮವರ್ಚಸೇನ ಅಭಿಪವತೇ | ತೃಪ್ತಿಗೊಂಡ ಪ್ರಜಾಪತಿಯು ಈ ಯಜಮಾನನನ್ನು ಬ್ರಹ್ಮವರ್ಚಸಕ್ಕಾಗಿ ಪರಿಶುದ್ಧಿಗೊಳಿಸುತ್ತಾನೆ. |

---

ಎಂಬ ಅರ್ಥವನ್ನಿಟ್ಟುಕೊಂಡರೆ ತೃತೀಯಾವಿಭಕ್ತಿಯ ಅರ್ಥವೂ ಹೊಂದಿ ಕೊಳ್ಳುವಂತೆ ವಿವರಿಸಬಹುದು. ಆಗ ಐಶ್ವರ್ಯದಿಂದಲೂ, ಬ್ರಹ್ಮವರ್ಚಸದಿಂದಲೂ, ಆಯುಸ್ಸಿನಿಂದಲೂ ತುಂಬುತ್ತಾನೆ ಎಂದಾಗುತ್ತದೆ.

ಆಮಯಾ[...ಯಾವೀ(೯)ಅವೇಕ್ಷೇ..]ವ್ಯವೇಕ್ಷೇತೈಷ ವೈ ಪಾತ್ರಿಯಃ ಪ್ರಜಾಪತಿರ್ಯಜ್ಞಃ ಪ್ರಜಾಪತಿಸ್ತಮೇವ ತರ್ಪಯತಿ ಸ ಏನಂ ತೃಪ್ತ ಆಯುಷಾऽಭಿ ಪವತೇ–

---

ಆಮಯಾವೀ [(೯)] ಅವೇತಿ । ಈಕ್ಷೇತ । ಏಷಃ । ವೈ । ಪಾತ್ರಿಯಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಯಜ್ಞಃ । ಪ್ರಜಾಪತಿರಿತಿ ಪ್ರಜಾ–ಪತಿಃ । ತಮ್ । ಏವ । ತರ್ಪಯತಿ । ಸಃ । ಏನಮ್ । ತೃಪ್ತಃ । ಆಯುಷಾ ।ಅಭೀತಿ । ಪವತೇ।

---

### ದೀರ್ಘರೋಗಿಯಾದವನಿಗೆ ಆಯುಷ್ಕಾಮನಾದಾಗ ಅವೇಕ್ಷಣವಿಧಿ

| | |
|---|---|
| ಆಮಯಾವೀ ಅವೇಕ್ಷೇತ | ದೀರ್ಘರೋಗಿಯಾಗಿ ಆಯುಷ್ಕಾಮನಾದವನು ಹೀಗೆ ಸೋಮಾವೇಕ್ಷಣೆಯನ್ನು ಮಾಡಬೇಕು. |
| ಏಷಃ ವೈ ಪಾತ್ರಿಯಃ ಪ್ರಜಾಪತಿಃ | ಈ ಪಾತ್ರಸಂಬಂಧಿಯಾದ ಸೋಮನು ಪ್ರಜಾಪತಿಸ್ವರೂಪನಷ್ಟೆ. |
| ಯಜ್ಞಃ ಪ್ರಜಾಪತಿಃ ತಮ್ ಏವ ತರ್ಪಯತಿ | ಯಜ್ಞವೂ ಪ್ರಜಾಪತಿಸ್ವರೂಪವೇ. [ಈ ಅವೇಕ್ಷಣದಿಂದ] ಆ ಪ್ರಜಾಪತಿಯನ್ನೇ ಯಜಮಾನನು ತೃಪ್ತಿಪಡಿಸುತ್ತಾನೆ. |
| ಸಃ ತೃಪ್ತಃ ಏನಮ್ ಆಯುಷಾ ಅಭಿಪವತೇ | ತೃಪ್ತನಾದ ಆ ಪ್ರಜಾಪತಿಯು ದೀರ್ಘಾಯುಸ್ಸಿಗಾಗಿ ಯಜಮಾನನನ್ನು ಶುದ್ಧಿಗೊಳಿಸುತ್ತಾನೆ. |

---

ನನ್ನ ಸರ್ವಸಿದ್ಧಿಗಾಗಿ ನಿನ್ನ ಅವೇಕ್ಷಣೆಯನ್ನು ಮಾಡುವೆನು. ನಿನ್ನ ಅನುಗ್ರಹದಿಂದ ನನ್ನ ಕಾಮನೆಗಳನ್ನು ಉಜ್ವಲಗೊಳಿಸಿಕೊಳ್ಳುವೆನು.

-ಽಭಿಚರನ್ನವೇಕ್ಷೇತೈಷ ವೈ ಪಾತ್ರಿಯಃ ಪ್ರಜಾಪತಿ

ರ್ಯಜ್ಞಃ ಪ್ರಜಾಪತಿಸ್ತಮೇವ ತರ್ಪಯತಿ ಸ ಏನಂ

ತೃಪ್ತಃ ಪ್ರಾಣಾಪಾನಾಭ್ಯಾಂ ವಾಚೋ ದಕ್ಷಕ್ರತುಭ್ಯಾಂ

---

ಅಭಿಚರನ್ನಿತ್ಯಭಿ-ಚರನ್ । ಅವೇತಿ । ಈಕ್ಷೇತ । ಏಷಃ । ವೈ । ಪಾತ್ರಿಯಃ ।

ಪ್ರಜಾಪತಿರಿತಿ ಪ್ರಜಾ-ಪತಿಃ । ಯಜ್ಞಃ । ಪ್ರಜಾಪತಿರಿತಿ ಪ್ರಜಾ-ಪತಿಃ । ತಮ್ । ಏವ ।

ತರ್ಪಯತಿ । ಸಃ । ಏನಮ್ । ತೃಪ್ತಃ । ಪ್ರಾಣಾಪಾನಾಭ್ಯಾಮಿತಿ ಪ್ರಾಣ-ಅಪಾನಾಭ್ಯಾಮ್ ।

ವಾಚಃ । ದಕ್ಷಕ್ರತುಭ್ಯಾಮಿತಿ ದಕ್ಷಕ್ರತು-ಭ್ಯಾಮ್ ।

---

### ಶತ್ರುಮಾರಣವನ್ನು ಬಯಸುವವನಿಗೆ ಅವೇಕ್ಷಣವಿಧಿ

| | |
|---|---|
| ಅಭಿಚರನ್ ಅವೇಕ್ಷೇತ | ಶತ್ರುಮಾರಣಕಾಮನಾದವನು ಆ ಕಾಮನೆಯಿಂದ ಸೋಮಾವೇಕ್ಷಣೆಯನ್ನು ಮಾಡಬೇಕು. |
| ಏಷಃ ವೈ ಪಾತ್ರಿಯಃ | ಈ ಸೋಮಗ್ರಹಗಳಲ್ಲಿ ಇರುವ ಸೋಮನು |
| ಪ್ರಜಾಪತಿಃ | ಪ್ರಜಾಪತಿಸ್ವರೂಪನಷ್ಟೆ. |
| ಯಜ್ಞಃ ಪ್ರಜಾಪತಿಃ | ಯಜ್ಞವೂ ಪ್ರಜಾಪತಿಸ್ವರೂಪವೇ ಆಗಿದೆ. |
| ತಮ್ ಏವ ತರ್ಪಯತಿ | ಈ ಸೋಮಾವೇಕ್ಷಣದಿಂದ ಆ ಪ್ರಜಾಪತಿಯನ್ನೇ ತೃಪ್ತಿಪಡಿಸುತ್ತಾನೆ. |
| ಸಃ[ಪ್ರಜಾಪತಿಃ]ತೃಪ್ತಃ | ಆ ಪ್ರಜಾಪತಿದೇವನು ತೃಪ್ತನಾಗಿ ಈ ಯಜಮಾನನ |
| ಏನಮ್ | ವೈರಿಯನ್ನು |
| ಪ್ರಾಣಾಪಾನಾಭ್ಯಾಮ್ | ಉಚ್ಛ್ವಾಸ, ನಿಃಶ್ವಾಸರೂಪವಾದ ವಾಯುಗಳಿಂದಲೂ, |
| ವಾಚಃ ದಕ್ಷಕ್ರತುಭ್ಯಾಮ್ | ಮಾತಿನಿಂದಲೂ, ಯೋಗಕ್ಷೇಮಗಳಿಂದಲೂ, |

ಚಕ್ಷುರ್ಭ್ಯಾಗ್ಂ ಶ್ರೋತ್ರಾಭ್ಯಾಮಾತ್ಮನೋಽಂಗೇಭ್ಯ

ಆಯುಷೋಽಂತರೇತಿ ತಾಜಕ್ಪ್ರಧನ್ವತಿ ॥೧೦-3॥

[ವಾಚೇ ರೂಪೇಭ್ಯೋ ವರ್ಚೋದಾ ಆಮಯಾವೀ

ಪಂಚಚತ್ವಾರಿಗ್ಂಶಚ್ಚ ॥]

---

ಚಕ್ಷುರ್ಭ್ಯಾಮಿತಿ ಚಕ್ಷುಃ-ಭ್ಯಾಮ್ । ಶ್ರೋತ್ರಾಭ್ಯಾಮ್ । ಆತ್ಮನಃ । ಅಂಗೇಭ್ಯಃ ।

ಆಯುಷಃ । ಅಂತಃ । ಏತಿ । ತಾಜಕ್ । ಪ್ರೇತಿ । ಧನ್ವತಿ ॥೧೦॥

---

| | |
|---|---|
| ಚಕ್ಷುರ್ಭ್ಯಾಮ್ ಶ್ರೋತ್ರಾಭ್ಯಾಮ್ ಆತ್ಮನಃ ಅಂಗೇಭ್ಯಃ ಆಯುಷಃ ಅಂತಃ ಏತಿ | ಕಣ್ಣುಗಳಿಂದಲೂ, ಕಿವಿಗಳಿಂದಲೂ, ಜೀವನಿಂದಲೂ/ದೇಹದಿಂದಲೂ, ಕೈ ಕಾಲು ಮುಂತಾದ ಅವಯವಗಳಿಂದಲೂ, ಆಯುಸ್ಸಿನಿಂದಲೂ, ಬೇರ್ಪಡಿಸುತ್ತಾನೆ. |
| ತಾಜಕ್ ಪ್ರಧನ್ವತಿ | [ಆ ಶತ್ರುವು] ಒಡನೆಯೇ ನಾಶಹೊಂದುತ್ತಾನೆ. |

---

ಚೆನ್ನಾಗಿ ಬಾಳಬೇಕೆಂದು ಬಯಸುವವನು, ಬ್ರಹ್ಮವರ್ಚಸವನ್ನು ಅಪೇಕ್ಷಿಸುವವನು, ದೀರ್ಘರೋಗಿಯಾಗಿ ಆಯುಸ್ಸನ್ನು ಅಪೇಕ್ಷಿಸುವವನು, ಶತ್ರುಮಾರಣಕಾಮನಾದವನು ಸೋಮಾವೇಕ್ಷಣವನ್ನು ಮಾಡಬೇಕು. ಅದರ ಫಲವನ್ನು ಪಡೆಯುವನು.

ಇಲ್ಲಿ ಹೇಳಿರುವ ವಿಧಿಗಳು ಕಾಮ್ಯವಿಧಿಗಳು. ಇಲ್ಲಿರುವ ದಕ್ಷ-ಕ್ರತು ಶಬ್ದಗಳಿಗೆ 'ಪ್ರಾಣೋ ವೈ ದಕ್ಷಃ ಅಪಾನಃ ಕ್ರತುಃ' ಎಂದು ಬೇರೆಡೆಯಲ್ಲಿ ಹೇಳಿರುವಂತೆ ಪ್ರಾಣ ಮತ್ತು ಅಪಾನ ಎಂಬ ಅರ್ಥವನ್ನು ವಿವರಿಸಬೇಕಾಗಿತ್ತು. ಆದರೆ ಇಲ್ಲಿ ಪ್ರಾಣ-ಅಪಾನಗಳನ್ನು ಬೇರೆಯಾಗಿ ಹೇಳಿರುವುದರಿಂದ ಪುನರುಕ್ತಿಯಾಗದಂತೆ ಯೋಗ-ಕ್ಷೇಮ ಎಂಬ ಅರ್ಥವನ್ನು ವಿವರಿಸಿರುತ್ತಾರೆ. ಅಭಿಚಾರಪ್ರಸಂಗದಲ್ಲಿ ಪ್ರಜಾಪತಿಯು ವ್ಯಾನ, ವೀರ್ಯಗಳಿಂದಲೂ ಬೇರ್ಪಡಿಸುವನು ಎಂಬ ಅರ್ಥವನ್ನೂ ವಿವರಿಸಬಹುದು.

# ವಿನಿಯೋಗಸಂಗ್ರಹ

ಆದೌ ಸಮಷ್ಟಿರೂಪೇಣ 1ಪರಿಭೂಃ ಸೋಮಮೀಕ್ಷತೇ ।
2ಪ್ರಾಣೇತ್ಯುಪಾಂಶುಮನ್ಯೇಷು ಮೇ ವರ್ಚೇತ್ಯನುಷಜ್ಯತೇ ।
3ಅಪಾಂತರ್ಯಾಮಿಕಂ 4ವ್ಯಾನ(ಶಿಲಾಂ) ಉಪಾಂ 5ವಾಚೈಂದ್ರವಾಯವೇ ।
6ದಕ್ಷೇತಿ ಮೈತ್ರಾವರುಣಂ7ಚಕ್ಷುಃ ಶುಕ್ರಂ ಚ ಮಂಥಿನಮ್ ॥
8ಶ್ರೋತ್ರೇತ್ಯಾಶ್ವಿನ 9ಮಾತ್ಮಾಽಽಗ್ರಯಣ 10ಮಂಗೇಭ್ಯ ಉಕ್ಥ್ಯಕಮ್ ।
11ಆ ಧ್ರುವಂ 12ವೀ ಷೋಡಶಿನಂ 13ವಿಷ್ಣೋಽಸ್ತು ದ್ರೋಣಕುಂಭಕಮ್ ।
14ಇಂದ್ರೇತ್ಯಾಧವನೀಯಾಖ್ಯಂ ಜಠ ಶೇಷೋಽನಯೋರ್ದ್ವಯೋಃ ।
15ವಿಶ್ವೇ ಪೂತಭೃತಂ 16ಕೋಽಸಿ ವೀಕ್ಷೇತಾ ಹವನೀಯಕಮ್ ।
17ವಿಶ್ವೇ ಪಶ್ಯೇತ್ ಸರ್ವಸೋಮಾನ್ಮಂತ್ರಾಃ ಸಪ್ತದಶೇರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-17**

## ॥ ಚತುರ್ಥೋಽನುವಾಕಃ ॥

**ಸ್ಫ್ಯಶ್ಸ್ವಸ್ತಿರ್ವಿಘನಸ್ಸ್ವಸ್ತಿಃ ಪರ್ಶುರ್ವೇದಿಃ**

**ಪರಶುರ್ನಃ ಸ್ವಸ್ತಿಃ ।**

---

ಸ್ಫ್ಯಃ । ಸ್ವಸ್ತಿಃ । ವಿಘನ ಇತಿ ವಿ-ಘನಃ । ಸ್ವಸ್ತಿಃ । ಪರ್ಶುಃ । ವೇದಿಃ । ಪರಶುಃ ।

ನಃ । ಸ್ವಸ್ತಿಃ ॥

---

ಮೂರನೆಯ ಅನುವಾಕದಲ್ಲಿ ಸೋಮಾವೇಕ್ಷಣಮಂತ್ರಗಳು ಉಕ್ತವಾಗಿವೆ. ಈ ನಾಲ್ಕನೆಯ ಅನುವಾಕದಲ್ಲಿ ಸ್ಫ್ಯವೇ ಮೊದಲಾದವುಗಳ ಉಪಸ್ಥಾನಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಸ್ಫ್ಯಶ್ ಸ್ವಸ್ತಿ...ಉಪಹ್ವಯಧ್ವಮ್ ॥ | ವೇದಿಕರಣಸಾಧನಗಳನ್ನು ಉತ್ಕರದಲ್ಲಿ ಹಾಕಿ ಉಪಸ್ಥಾನವನ್ನು ಮಾಡಲು |

---

✦**ಸ್ಫ್ಯಃ ಸ್ವಸ್ತಿಃ**=ಅಗೆಯುವ ಸಾಧನವಾದ ಸ್ಫ್ಯವು ಅವಿನಾಶಕಾರಿಯಾಗಿ ಇರಲಿ. **ವಿಘನಃ**=ನೆಲವನ್ನು ಕುಟ್ಟಿ ಸರಿಪಡಿಸುವ ಸಾಧನವು; **ಸ್ವಸ್ತಿಃ**=ಅವಿನಾಶವನ್ನುಂಟು ಮಾಡಲಿ; **ಪರ್ಶುಃ**=ಹುಲ್ಲನ್ನು ಕೆತ್ತುವ ಸಾಧನವು; **ಸ್ವಸ್ತಿಃ**=ಸ್ವಸ್ತಿಕರವಾಗಿರಲಿ; **ವೇದಿಃ**=ಈ ಸಾಧನಗಳಿಂದ ಸಿದ್ಧವಾದ ವೇದಿಯು; **ಪರಶುಃ**=ವೃಕ್ಷಾದಿಗಳನ್ನು ಕತ್ತರಿಸುವ ಕೊಡಲಿಯು; **ನಃ**=ನಮಗೆ; **ಸ್ವಸ್ತಿಃ**= ಮಂಗಳಕರವಾಗಿರಲಿ.

---

ಯಜ್ಞಸಾಧನಗಳಾದ ಸ್ಫ್ಯ ಮುಂತಾದವುಗಳೆಲ್ಲವೂ ನನಗೆ ಮಂಗಲವನ್ನುಂಟು ಮಾಡಲಿ. ಎಲೈ! ಯಜ್ಞಸಾಧನಗಳೇ! ಈ ಯಜ್ಞವನ್ನು ಅನುಷ್ಠಿಸಲು ಅನುಮತಿಸಿರಿ.

# ಯಜ್ಞಿಯಾ ಯಜ್ಞಕೃತಸ್ಸ್ಥ ತೇ ಮಾಽಸ್ಮಿನ್, ಯಜ್ಞ ಉಪಹ್ವಯಧ್ವಮುಪ ಮಾ ದ್ಯಾವಾಪೃಥಿವೀ ಹ್ವಯೇತಾಮುಪಾಸ್ತಾವಃ ಕಲಶಸ್ಸೋಮೋ ಅಗ್ನಿರುಪ

---

ಯಜ್ಞಿಯಾಃ । ಯಜ್ಞಕೃತ ಇತಿ ಯಜ್ಞ–ಕೃತಃ । ಸ್ಥ । ತೇ । ಮಾ । ಅಸ್ಮಿನ್ನ್ । ಯಜ್ಞೇ । ಉಪೇತಿ । ಹ್ವಯಧ್ವಮ್ । ಉಪೇತಿ । ಮಾ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಹ್ವಯೇತಾಮ್ । ಉಪೇತಿ । ಆಸ್ತಾವ ಇತ್ಯಾ–ಸ್ತಾವಃ । ಕಲಶಃ । ಸೋಮಃ । ಅಗ್ನಿಃ । ಉಪೇತಿ ।

---

[ಎಲೈ! ಸ್ಥಾಣ್ಯಾದಿಗಳೇ! ನೀವು] **ಯಜ್ಞಿಯಾಃ**=ಯಜ್ಞಾರ್ಹರಾಗಿರುವಿರಿ; **ಯಜ್ಞಕೃತಃ ಸ್ಥ**=ಯಜ್ಞಸಾಧನವಾಗಿರುವಿರಿ; **ತೇ**=ಅಂತಹ ನೀವು; **ಮಾ**=ನನ್ನನ್ನು; **ಅಸ್ಮಿನ್ ಯಜ್ಞೇ**=ಈ ಯಜ್ಞದ ವಿಷಯದಲ್ಲಿ/ಅನುಷ್ಠಿಸಲು; **ಉಪಹ್ವಯಧ್ವಮ್**=ಅನುಮತಿಸಿರಿ.

---

| ಮಂತ್ರ | ವಿನಿಯೋಗ |
|---|---|
| **ಉಪ ಮಾ ದ್ಯಾವಾ...ಹ್ವಯಂತಾಮ್ ॥** | ದ್ಯಾವಾಪೃಥಿವೀ ಮುಂತಾದವುಗಳ ಉಪಸ್ಥಾನವನ್ನು ಮಾಡಲು. |

---

✦**ದ್ಯಾವಾಪೃಥಿವೀ**=ದ್ಯುಲೋಕ–ಭೂಲೋಕಗಳು; **ಮಾ ಉಪ ಹ್ವಯೇತಾಮ್**=ನನಗೆ ಅನುಮತಿಯನ್ನು ಕೊಡಲಿ. **ಆಸ್ತಾವಃ**=ಬಹಿಷ್ಪವಮಾನಪ್ರದೇಶವು; **ಮಾ ಉಪ ಹ್ವಯತಾಮ್**=ನನ್ನನ್ನು ಅನುಮತಿಸಲಿ; **ಕಲಶಃ**=ದ್ರೋಣಕಲಶವು; **ಮಾ** ಉಪ ಹ್ವಯತಾಮ್=ನನಗೆ ಅನುಮತಿಯನ್ನು ನೀಡಲಿ. **ಸೋಮಃ**=ಸೋಮ ರಾಜನು; ಮಾ ಉಪ ಹ್ವಯತಾಮ್=ನನಗೆ ಅನುಮತಿಯನ್ನು ನೀಡಲಿ; **ಅಗ್ನಿಃ ಉಪ** ಮಾ ಹ್ವಯತಾಮ್=ಅಗ್ನಿದೇವನು ನನ್ನನ್ನು ಅನುಮತಿಸಲಿ.

## ದೇವಾ ಉಪ ಯಜ್ಞಾ ಉಪ ಮಾ ಹೋತ್ರಾ ಉಪಹವೇ ಹ್ವಯಂತಾಂ ನಮೋಽಗ್ನಯೇ ಮಖಘ್ನೇ ಮಖಸ್ಯ ಮಾ ಯಶೋಽರ್ಯಾ–

ದೇವಾಃ । ಉಪೇತಿ । ಯಜ್ಞಾಃ । ಉಪೇತಿ । ಮಾ । ಹೋತ್ರಾಃ । ಉಪಹವ ಇತ್ಯುಪ–ಹವೇ । ಹ್ವಯಂತಾಮ್ । ನಮಃ । ಅಗ್ನಯೇ । ಮಖಘ್ನ ಇತಿ ಮಖ–ಘ್ನೇ । ಮಖಸ್ಯ । ಮಾ । ಯಶಃ । ಅರ್ಯಾತ್ ।

**ದೇವಾಃ ಉಪ ಮಾ ಹ್ವಯಂತಾಮ್**=ದೇವತೆಗಳು ನನಗೆ ಅನುಮತಿಯನ್ನು ನೀಡಲಿ; **ಯಜ್ಞಾಃ ಉಪ ಮಾ ಹ್ವಯತಾಮ್**=ಯಜ್ಞವು ನನಗೆ ಅನುಮತಿಯನ್ನು ಕೊಡಲಿ; **ಹೋತ್ರಾಃ ಮಾ**=ನನಗೆ ಪ್ರಸ್ತೋತ್ರಾದಿ ಹೋತ್ರಕರು; **ಉಪಹವೇ**=ಯಜ್ಞದಲ್ಲಿ; ಉಪ **ಹ್ವಯಂತಾಮ್**=ಅನುಮತಿಸಲಿ.

| ಮಂತ್ರ | ವಿನಿಯೋಗ |
|---|---|
| **ನಮೋಽಗ್ನಯೇ...ಅರ್ಯಾತ್** ॥ | ಆಹವನೀಯೋಪಸ್ಥಾನವನ್ನು ಮಾಡಲು |

✦**ಮಖಘ್ನೇ**=[ನಮಸ್ಕರಿಸದವರ] ಯಜ್ಞವನ್ನು ನಾಶಪಡಿಸುವ; **ಅಗ್ನಯೇ ನಮಃ**=ಅಗ್ನಿದೇವನಿಗೆ ನಮಸ್ಕರಿಸುತ್ತೇನೆ; [ನಿನ್ನ ಅನುಗ್ರಹದಿಂದ] **ಮಾ**=ನನ್ನನ್ನು; **ಮಖಸ್ಯ ಯಶಃ**=ಯಜ್ಞದ ಕೀರ್ತಿಯು; **ಅರ್ಯಾತ್**=ಹೊಂದಲಿ.

ನಾನು ಅನುಷ್ಠಿಸುವ ಯಜ್ಞಕ್ಕಾಗಿ ಭೂಲೋಕ–ದ್ಯುಲೋಕಗಳು, ದ್ರೋಣಕಲಶ ಮುಂತಾದ ಯಜ್ಞಾಂಗಗಳು ನನಗೆ ಅನುಮತಿಯನ್ನು ನೀಡಲಿ. ಹೀಗೆ ಯಜ್ಞ–ಯಜ್ಞಾಂಗಗಳು ಇವುಗಳ ಉಪಸ್ಥಾನವು ಹೇಳಲ್ಪಟ್ಟಿದೆ.

ಈ ಆಹವನೀಯದ ಉಪಸ್ಥಾನದಲ್ಲಿ ಮೊದಲು ಅಗ್ನಿಯೆಂದು ಸಾಮಾನ್ಯವಾಗಿ ಅನುಮತಿಯನ್ನು ಪ್ರಾರ್ಥಿಸಲಾಗಿದೆ. ಇಲ್ಲಿ ಅಗ್ನಿವಿಶೇಷವಾದ ಮತ್ತು ಮುಖ್ಯನಾದ ಆಹವನೀಯಾಗ್ನಿಯ ನಮಸ್ಕಾರವನ್ನು ಹೇಳಲಾಗಿದೆ.

ದಿತ್ಯಾಹವನೀಯಮುಪತಿಷ್ಠತೇ ಯಜ್ಞೋ ವೈ ಮಖೋ

[ಮಖಃ(೧೧)] ಯಜ್ಞಂ ವಾವ ಸ ತದಹನ್ತಸ್ಮಾ ಏವ

ನಮಸ್ಕೃತ್ಯ ಸದಃ ಪ್ರಸರ್ಪತ್ಯಾತ್ಮನೋಽನಾರ್ತ್ಯೈ

---

ಇತಿ । ಆಹವನೀಯಮಿತ್ಯಾ-ಹವನೀಯಮ್ । ಉಪೇತಿ । ತಿಷ್ಠತೇ । ಯಜ್ಞಃ । ವೈ ।

ಮಖಃ । (೧೧)। ಯಜ್ಞಮ್ । ವಾವ । ಸಃ । ತತ್ । ಅಹನ್ । ತಸ್ಮೈ । ಏವ ।

ನಮಸ್ಕೃತ್ಯೇತಿ ನಮಃ-ಕೃತ್ಯ । ಸದಃ । ಪ್ರೇತಿ । ಸರ್ಪತಿ । ಆತ್ಮನಃ । ಅನಾರ್ತ್ಯೈ ।

---

ಉಪಸ್ಥಾನದ ವಿಧಿ; ಅದರ ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಇತಿ ಆಹವನೀಯಮ್ ಉಪತಿಷ್ಠತೇ | ಹೀಗೆಂಬ ಮಂತ್ರದಿಂದ ಆಹವನೀಯಾಗ್ನಿಯ ಉಪಸ್ಥಾನವನ್ನು ಮಾಡಬೇಕು. |
| ಯಜ್ಞಃ ಮಖಃ ವೈ | ಮಖವೆಂದರೆ ಯಜ್ಞವಷ್ಟೆ. |
| ಯಜ್ಞಮ್ ವಾವ ಸಃ ತತ್ ಅಹನ್ | ಆ ಅಗ್ನಿದೇವನು ತನ್ನನ್ನು ನಮಸ್ಕರಿಸದವರ ಯಜ್ಞವನ್ನು ತಾನೇ ನಾಶಪಡಿಸುತ್ತಾನೆ! |
| ತಸ್ಮೈ ಏವ ನಮಸ್ಕೃತ್ಯ ಸದಃ ಪ್ರಸರ್ಪತಿ | ಆ ಅಗ್ನಿದೇವನಿಗೆ ನಮಸ್ಕರಿಸಿ ಯಜ್ಞಶಾಲೆಗೆ ಹೋಗುತ್ತಾನೆ. |
| ಆತ್ಮನಃ ಅನಾರ್ತ್ಯೈ | ಇದು ತನಗೆ ಹಿಂಸೆಗೆ ಕಾರಣವಾಗದೆ ದೇವ ಪ್ರೀತಿಗೆ ಕಾರಣವಾಗುತ್ತದೆ. |

---

ಆಹವನೀಯೋಪಸ್ಥಾನದ ಅನಂತರ ಅಗ್ನೀಧ್ರೀಯಧಿಷ್ಣಿಯದಲ್ಲಿ ಇರುವ ಅಗ್ನಿಯ ಉಪಸ್ಥಾನವನ್ನು ಮಾಡಬೇಕು.

ತನ್ನನ್ನು ನಮಿಸದವರ ಯಜ್ಞವನ್ನು ನಾಶ ಮಾಡುವ ರುದ್ರನನ್ನು ನಮಿಸುವೆನು. ಆತನು ನನ್ನ ನಮಸ್ಕಾರದಿಂದ ಪ್ರಸನ್ನನಾಗಿ ನನ್ನನ್ನು ಕಾಪಾಡಲಿ. ಹೀಗೆ ಮಾಡುವುದರಿಂದ ಯಜಮಾನನಿಗೆ ಹಿಂಸೆಯಾಗದು.

**ನಮೋ ರುದ್ರಾಯ ಮಖಘ್ನೇ ನಮಸ್ಕೃತ್ಯಾ ಮಾ ಪಾಹೀತ್ಯಾಗ್ನೀಧ್ರಂ ತಸ್ಮಾ ಏವ ನಮಸ್ಕೃತ್ಯ ಸದಃ ಪ್ರಸರ್ಪತ್ಯಾತ್ಮನೋಽನಾರ್ತ್ಯೈ**

---

ನಮಃ । ರುದ್ರಾಯ । ಮಖಘ್ನ ಇತಿ ಮಖ-ಘ್ನೇ । ನಮಸ್ಕೃತ್ಯೇತಿ ನಮಃ-ಕೃತ್ಯಾ । ಮಾ । ಪಾಹಿ । ಇತಿ । ಆಗ್ನೀಧ್ರಮಿತ್ಯಾಗ್ನಿ-ಇಧ್ರಮ್ । ತಸ್ಮೈ । ಏವ । ನಮಸ್ಕೃತ್ಯೇತಿ ನಮಃ-ಕೃತ್ಯ । ಸದಃ । ಪ್ರೇತಿ । ಸರ್ಪತಿ । ಆತ್ಮನಃ । ಅನಾರ್ತ್ಯೈ ।

---

| ಮಂತ್ರ | ವಿನಿಯೋಗ |
| --- | --- |
| ನಮೋ ರುದ್ರಾಯ...ಪಾಹಿ ॥ | ಆಗ್ನೀಧ್ರೋಪಸ್ಥಾನವನ್ನು ಮಾಡಲು. |

---

✦**ಮಖಘ್ನೇ**=ತನ್ನನ್ನು ನಮಸ್ಕರಿಸದವರ ಯಜ್ಞನಾಶಕನಾದ; **ರುದ್ರಾಯ ನಮಃ**=ರುದ್ರದೇವನನ್ನು ನಮಸ್ಕರಿಸುತ್ತೇನೆ; **ನಮಸ್ಕೃತ್ಯಾ**=ಈ ನನ್ನ ನಮಸ್ಕಾರದಿಂದ [ಪ್ರಸನ್ನನಾಗಿ] **ಮಾ ಪಾಹಿ**=ನನ್ನನ್ನು ರಕ್ಷಿಸು.

---

## ಉಪಸ್ಥಾನದ ವಿಧಿ; ಅದರ ಅರ್ಥವಾದ

| | |
| --- | --- |
| ಇತಿ ಆಗ್ನೀಧ್ರಮ್ [ಉಪತಿಷ್ಠತೇ] | ಈ ಮಂತ್ರದಿಂದ ಆಗ್ನೀಧ್ರೀಯಧಿಷ್ಣಿಯದಲ್ಲಿರುವ ಅಗ್ನಿಯ ಉಪಸ್ಥಾನವನ್ನು ಮಾಡಬೇಕು. |
| ತಸ್ಮೈ ಏವ ನಮಸ್ಕೃತ್ಯ ಸದಃ ಪ್ರಸರ್ಪತಿ | ಆ ರುದ್ರರೂಪ ಅಗ್ನಿಗೇ ನಮಸ್ಕರಿಸಿ ಸದಸ್ಸಿಗೆ ಹೋಗಬೇಕು. |
| ಆತ್ಮನಃ ಅನಾರ್ತ್ಯೈ | ಈ ರುದ್ರಾನುಗ್ರಹದಿಂದ ಯಜಮಾನನಿಗೆ ಹಿಂಸೆಯುಂಟಾಗುವುದಿಲ್ಲ. |

ನಮ ಇಂದ್ರಾಯ ಮಖಘ್ನ ಇಂದ್ರಿಯಂ ಮೇ ವೀರ್ಯಂ

ಮಾ ನಿರ್ವಧೀರಿತಿ ಹೋತ್ರೀಯಮಾಶಿಷಮೇವೈತಾ

ಮಾಶಾಸ್ತ ಇಂದ್ರಿಯಸ್ಯ ವೀರ್ಯಸ್ಯಾನಿರ್ಘಾತಾಯ

---

ನಮಃ । ಇಂದ್ರಾಯ । ಮಖಘ್ನ ಇತಿ ಮಖ–ಘ್ನೇ । ಇಂದ್ರಿಯಮ್ । ಮೇ । ವೀರ್ಯಮ್ । ಮಾ । ನಿರಿತಿ । ವಧೀಃ । ಇತಿ । ಹೋತ್ರೀಯಮ್ । ಆಶಿಷಮಿತ್ಯಾ–ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಇಂದ್ರಿಯಸ್ಯ । ವೀರ್ಯಸ್ಯ । ಅನಿರ್ಘಾತಾಯೇತ್ಯನಿಃ–ಘಾತಾಯ ।

---

| ಮಂತ್ರ | ವಿನಿಯೋಗ |
|---|---|
| ನಮ ಇಂದ್ರಾಯ...ನಿರ್ವಧೀಃ ॥ | ಹೋತ್ರೀಯೋಪಸ್ಥಾನವನ್ನು ಮಾಡಲು. |

---

✦ಮಖಘ್ನೇ=ತನಗೆ ನಮಸ್ಕರಿಸಿ ಅನುಗ್ರಹವನ್ನು ಪಡೆಯದವರ ಯಾಗವನ್ನು ನಾಶ ಗೊಳಿಸುವ; ಇಂದ್ರಾಯ ನಮಃ=ಇಂದ್ರದೇವನಿಗೆ ನಮಸ್ಕಾರವು; ಮೇ ಇಂದ್ರಿಯಮ್ ವೀರ್ಯಮ್=[ಪ್ರಸನ್ನನಾದ ನೀನು] ನನ್ನ ಇಂದ್ರಿಯಶಕ್ತಿಯನ್ನೂ, ವೀರ್ಯವನ್ನೂ; ಮಾ ನಿರ್ವಧೀಃ=ನಾಶಪಡಿಸಬೇಡ.

---

### ಉಪಸ್ಥಾನದ ವಿಧಿ; ಆದರ ಅರ್ಥವಾದ

| | |
|---|---|
| ಇತಿ ಹೋತ್ರೀಯಮ್ [ಉಪತಿಷ್ಠತೇ] | ಎಂಬ ಮಂತ್ರದಿಂದ ಹೋತೃಧಿಷ್ಣಿಯಾಗ್ನಿಯ ಉಪಸ್ಥಾನವನ್ನು ಮಾಡಬೇಕು. |
| ಏತಾಮ್ ಆಶಿಷಮ್ ಏವ ಆಶಾಸ್ತೇ | [ಯಜಮಾನನು] ಈ ಶ್ರೇಯಃಪ್ರಾರ್ಥನೆಯನ್ನೇ ಮಾಡಿದವನಾಗುತ್ತಾನೆ. |
| ಇಂದ್ರಿಯಸ್ಯ ವೀರ್ಯಸ್ಯ ಅನಿರ್ಘಾತಾಯ | ಇದು ಯಜಮಾನನ ಇಂದ್ರಿಯಶಕ್ತಿ, ಬಲಗಳಿಗೆ ಹಿಂಸೆಯಾಗದಿರುವುದಕ್ಕೆ ಕಾರಣವಾಗುತ್ತದೆ. |

ಯಾ ವೈ [(೧೨)] ದೇವತಾಸ್ಸದಸ್ಯಾರ್ತಿ

ಮಾರ್ಪಯಂತಿ ಯಸ್ತಾ ವಿದ್ವಾನ್ಪ್ರಸರ್ಪತಿ ನ ಸದಸ್ಯಾ

ರ್ತಿಮಾರ್ಛತಿ ನಮೋಽಗ್ನಯೇ ಮಖಘ್ನ ಇತ್ಯಾಹೈ

---

ಯಾಃ । ವೈ ।(೧೨)। ದೇವತಾಃ । ಸದಸಿ । ಆರ್ತಿಮ್ । ಆರ್ಪಯಂತೀತ್ಯಾ-ಅರ್ಪಯಂತಿ । ಯಃ । ತಾಃ । ವಿದ್ವಾನ್ । ಪ್ರಸರ್ಪತೀತಿ ಪ್ರ-ಸರ್ಪತಿ । ನ । ಸದಸಿ । ಆರ್ತಿಮ್ । ಏತಿ । ಋಚ್ಛತಿ । ನಮಃ । ಅಗ್ನಯೇ । ಮಖಘ್ನ ಇತಿ ಮಖ-ಘ್ನೇ । ಇತಿ । ಆಹ ।

---

## ಮಂತ್ರತ್ರಯೋಪಸ್ಥಾನದ ಪ್ರಶಂಸೆ

| | |
|---|---|
| ಯಾಃ ದೇವತಾಃ ವೈ ಸದಸಿ | ಯಾವ ದೇವತೆಗಳು ಯಾಗಶಾಲೆಯಲ್ಲಿ |
| ಆರ್ತಿಮ್ ಆರ್ಪಯಂತಿ | [ತಮ್ಮನ್ನು ನಮಸ್ಕರಿಸದವರಿಗೆ ಯಜ್ಞನಾಶವೆಂಬ] ಪೀಡೆಯನ್ನು ಉಂಟುಮಾಡುತ್ತಾರೆಯೋ |
| ತಾಃ ವಿದ್ವಾನ್ ಯಃ | ಆ ಅಗ್ನಿರುದ್ರೇಂದ್ರರನ್ನು [ಈ ವಿಷಯವನ್ನು] ತಿಳಿದಿರುವ ಯಾವ ಯಜಮಾನನು |
| ಪ್ರಸರ್ಪತಿ | [ನಮಸ್ಕರಿಸಿ] ಯಾಗಶಾಲೆಯನ್ನು ಪ್ರವೇಶಿಸುತ್ತಾನೆಯೋ |
| ಸಃ ಸದಸಿ ಆರ್ತಿಮ್ ನ ಋಚ್ಛತಿ | ಅವನು ಸದೋಮಂಟಪದಲ್ಲಿ ಯಜ್ಞನಾಶವೆಂಬ ಅನಿಷ್ಟವನ್ನು ಹೊಂದುವುದಿಲ್ಲ. |
| ನಮಃ ಮಖಘ್ನೇ ಅಗ್ನಯೇ | [ನಮಸ್ಕರಿಸದವರ] ಯಾಗವನ್ನು ನಾಶಗೊಳಿಸುವ ಅಗ್ನಿಗೆ ನಮಸ್ಕಾರ ಮಾಡುತ್ತೇನೆ. [ನಮೋ ರುದ್ರಾಯ, ನಮ ಇಂದ್ರಾಯ] |
| ಇತಿ ಆಹ | ಮೊದಲಾಗಿ ಈ ಮಂತ್ರವು ಹೇಳುತ್ತದೆ. |

-ತಾ ವೈ ದೇವತಾಸ್ಸದಸ್ಯಾರ್ತಿಮಾರ್ಪಯಂತಿ ತಾ

ಯ ಏವಂ ವಿದ್ವಾನ್ಪ್ರಸರ್ಪತಿ ನ ಸದಸ್ಯಾರ್ತಿಮಾರ್ಛತಿ

ದೃಢೇ ಸ್ಥಶ್ಶಿಥಿರೇ ಸಮೀಚೀ ಮಾಽಗ್ಂಹಸಸ್ಪಾತಗ್ಂ

---

ಏತಾಃ । ವೈ । ದೇವತಾಃ । ಸದಸಿ । ಆರ್ತಿಮ್ । ಏತಿ । ಅರ್ಪಯಂತಿ । ತಾಃ । ಯಃ । ಏವಮ್ ।

ವಿದ್ವಾನ್ । ಪ್ರಸರ್ಪತೀತಿ ಪ್ರ-ಸರ್ಪತಿ । ನ । ಸದಸಿ । ಆರ್ತಿಮ್ । ಏತಿ । ಋಚ್ಛತಿ । ದೃಢೇ

ಇತಿ । ಸ್ಥಃ । ಶಿಥಿರೇ ಇತಿ । ಸಮೀಚೀ ಇತಿ । ಮಾ । ಅಗ್ಂಹಸಃ । ಪಾತಮ್ ।

---

| | |
|---|---|
| ಏತಾಃ ವೈ ದೇವತಾಃ ಸದಸಿ ಆರ್ತಿಮ್ ಆ ಅರ್ಪಯಂತಿ | ಈ ಅಗ್ನಿ-ರುದ್ರ- ಇಂದ್ರದೇವತೆಗಳು ತಮ್ಮನ್ನು ಪ್ರಸನ್ನಗೊಳಿಸದವರ ಯಾಗವನ್ನು ನಾಶಗೊಳಿಸಿ ಪೀಡೆಯನ್ನು ಉಂಟುಮಾಡುತ್ತಾರೆ. |
| ಯಃ ಏವಮ್ ತಾಃ ವಿದ್ವಾನ್ ಪ್ರಸರ್ಪತಿ | ಆ ದೇವತೆಗಳನ್ನು ಯಾವ ವಿಷಯಜ್ಞನಾದ ಯಜಮಾನನು ನಮಸ್ಕಾರದಿಂದ ಪ್ರಸನ್ನರನ್ನಾಗಿ ಮಾಡಿಕೊಂಡು ಸದಸ್ಸಿಗೆ ಪ್ರವೇಶಿಸುತ್ತಾನೆಯೋ |
| [ಸಃ] ಸದಸಿ ಆರ್ತಿಮ್ ನ ಋಚ್ಛತಿ | ಅವನು ಯಾಗಮಂಟಪದಲ್ಲಿ ಯಜ್ಞನಾಶವೆಂಬ ಪೀಡೆಯನ್ನು ಹೊಂದುವುದಿಲ್ಲ. |

| ಮಂತ್ರ | ವಿನಿಯೋಗ |
|---|---|
| ದೃಢೇ...ಪಾತಮ್ ॥ | ದ್ಯಾವಾಪೃಥಿವಿಗಳ ಉಪಸ್ಥಾನವನ್ನು ಮಾಡಲು |

---

✦[ಎಲೈ! ದ್ಯಾವಾಪೃಥಿವಿಗಳೇ!]**ಶಿಥಿರೇ**=[ನಿಮ್ಮನ್ನು ಉಪಸ್ಥಾನ ಮಾಡದವನ ವಿಷಯದಲ್ಲಿ] ಉದಾಸೀನವಾಗಿದ್ದರೂ; **ಸಮೀಚೀ ದೃಢೇ ಸ್ಥಃ**=[ನಿಮ್ಮನ್ನು ನಮಸ್ಕರಿಸುವವರ ವಿಷಯದಲ್ಲಿ] ಅನುಕೂಲರಾಗಿಯೂ [ಅವರ ರಕ್ಷಣೆಯಲ್ಲಿ] ದೃಢರಾಗಿಯೂ ಇರುವಿರಿ. **ಅಗ್ಂಹಸಃ ಮಾ ಪಾತಮ್**=ನನ್ನನ್ನು ಪಾಪದಿಂದ ರಕ್ಷಿಸಿರಿ.

**ಸೂರ್ಯೋ॑ ಮಾ ದೇವೋ ದಿವ್ಯಾದಗ್ಂಹಸಸ್ಪಾತು**

**ವಾಯುರಂತರಿಕ್ಷಾ [ಅಂತರಿಕ್ಷಾತ್(೧೩)ಅಗ್ನಿಃ] ದಗ್ನಿಃ**

**ಪೃಥಿವ್ಯಾ ಯಮಃ ಪಿತೃಭ್ಯಃ ಸರಸ್ವತೀ ಮನುಷ್ಯೇಭ್ಯೋ॑**

---

ಸೂರ್ಯಃ । ಮಾ । ದೇವಃ । ದಿವ್ಯಾತ್ । ಅಗ್ಂಹಸಃ । ಪಾತು । ವಾಯುಃ ।

ಅಂತರಿಕ್ಷಾತ್ । (೧೩) । ಅಗ್ನಿಃ । ಪೃಥಿವ್ಯಾಃ । ಯಮಃ । ಪಿತೃಭ್ಯ ಇತಿ ಪಿತೃ-ಭ್ಯಃ ।

ಸರಸ್ವತೀ । ಮನುಷ್ಯೇಭ್ಯಃ ।

---

| ಮಂತ್ರ | ವಿನಿಯೋಗ |
|---|---|
| **ಸೂರ್ಯೋ॑ ಮಾ...ಪಾತು ॥** | ಸೂರ್ಯೋ॑ಪಸ್ಥಾನವನ್ನು ಮಾಡಲು |
| **ವಾಯುರಂತರಿಕ್ಷಾತ್...ಸಂತಾಪ್ತಮ್ ॥** | ವಾಯು, ಅಗ್ನಿ, ಯಮ, ಸರಸ್ವತೀ ಹಾಗೂ ದ್ವಾರದೇವತೆಗಳ ಉಪಸ್ಥಾನಕ್ಕಾಗಿ |

---

✦**ಸೂರ್ಯಃ ದೇವಃ**=ಪ್ರಕಾಶಮಾನನಾದ ಸೂರ್ಯದೇವನು; **ಮಾ**=ನನ್ನನ್ನು; **ದಿವ್ಯಾತ್ ಅಗ್ಂಹಸಃ**=ದ್ಯುಲೋಕಕ್ಕೆ ಸಂಬಂಧಿಸಿದ ನನ್ನ ಪ್ರಮಾದದಿಂದ ಉಂಟಾದ ಪಾಪ ದಿಂದ; **ಪಾತು**=ರಕ್ಷಿಸಲಿ. ✦**ವಾಯುಃ ಅಂತರಿಕ್ಷಾತ್** ಅಗ್ಂಹಸಃ ಮಾ ಪಾತು= ವಾಯುದೇವನು ಅಂತರಿಕ್ಷವಿಷಯದಲ್ಲಿ ನನ್ನಿಂದಾದ ಅಪರಾಧದಿಂದ ನನ್ನನ್ನು ರಕ್ಷಿಸಲಿ; **ಅಗ್ನಿಃ ಪೃಥಿವ್ಯಾಃ** ಅಗ್ಂಹಸಃ ಮಾ ಪಾತು=ಅಗ್ನಿದೇವನು ಪೃಥಿವಿಯ ವಿಷಯದಲ್ಲಿ ನನ್ನಿಂದಾದ ಅಪರಾಧದಿಂದ ನನ್ನನ್ನು ಕಾಪಾಡಲಿ. **ಯಮಃ ಪಿತೃಭ್ಯಃ** ಅಗ್ಂಹಸಃ ಮಾ ಪಾತು=ಯಮದೇವನು ಪಿತೃಗಳಿಗೆ ಸಂಬಂಧಿಸಿದಂತೆ ನನ್ನಿಂದಾದ ಅಪರಾಧದಿಂದ ನನ್ನನ್ನು ಕಾಪಾಡಲಿ. **ಸರಸ್ವತೀ ಮನುಷ್ಯೇಭ್ಯಃ** ಅಗ್ಂಹಸಃ ಮಾ ಪಾತು=ಸರಸ್ವತೀ ದೇವಿಯು ಮನುಷ್ಯರ ವಿಷಯದಲ್ಲಿ ನನ್ನಿಂದಾದ ಅಪರಾಧದಿಂದ ನನ್ನನ್ನು ಕಾಪಾಡಲಿ.

**ದೇವೀ ದ್ವಾರೌ ಮಾ ಮಾ ಸಂತಾಪ್ತಂ ನಮಸ್ಸದಸೇ ನಮಸ್ಸದಸಸ್ಪತಯೇ ನಮಸ್ಸಖೀನಾಂ ಪುರೋಗಾಣಾಂ ಚಕ್ಷುಷೇ ನಮೋ ದಿವೇ ನಮಃ ಪೃಥಿವ್ಯಾ**

---

ದೇವೀ ಇತಿ । ದ್ವಾರೌ । ಮಾ । ಮಾ । ಸಮಿತಿ । ತಾಪ್ತಮ್ । ನಮಃ । ಸದಸೇ । ನಮಃ । ಸದಸಃ । ಪತಯೇ । ನಮಃ । ಸಖೀನಾಮ್ । ಪುರೋಗಾಣಾಮಿತಿ ಪುರಃ-ಗಾನಾಮ್ । ಚಕ್ಷುಷೇ । ನಮಃ । ದಿವೇ । ನಮಃ । ಪೃಥಿವ್ಯೈ ।

---

| ಮಂತ್ರ | ವಿನಿಯೋಗ |
| --- | --- |
| ನಮಃ ಸದಸೇ...ಪೃಥಿವ್ಯೈ ॥ | ಯಜ್ಞಸಭೆ, ಬ್ರಹ್ಮ, ಋತ್ವಿಜರು, ಮತ್ತು ದ್ಯಾವಾ ಪೃಥಿವಿಗಳು-ಇವುಗಳ ಉಪಸ್ಥಾನವನ್ನು ಮಾಡಲು |

---

**ದೇವೀ ದ್ವಾರೌ**=ದ್ವಾರದೇವತೆಗಳೇ! **ಮಾ**=ನನ್ನನ್ನು; **ಮಾ ಸಂತಾಪ್ತಮ್**=ಸಂತಾಪಗೊಳಿಸದಿರಿ; ✦**ಸದಸೇ ನಮಃ**=ಯಜ್ಞಸದಸ್ಸಿಗೆ/ಸದೋಮಂಟಪಕ್ಕೆ ನಮಸ್ಕಾರ; **ಸದಸಃ ಪತಯೇ ನಮಃ**=ಸದಸ್ಸಿಗೆ ಮುಖ್ಯನಾದ ಬ್ರಹ್ಮನಿಗೆ/**ಇಂದ್ರನಿಗೆ** ನಮಸ್ಕಾರವಿರಲಿ. **ಸಖೀನಾಮ್ ಪುರೋಗಾಣಾಮ್**=ಯಜಮಾನನ ಕಾರ್ಯನಿರ್ವಾಹಕರಾಗಿ ಮಿತ್ರರಾಗಿ ತಮ್ಮ ತಮ್ಮ ಕಾರ್ಯಗಳಲ್ಲಿ ಮುಂದುವರೆಯುವ ಋತ್ವಿಜರ; **ಚಕ್ಷುಷೇ ನಮಃ**=ಕಾರ್ಯಸಾಧಕತೆಗೆ ನಮಸ್ಕಾರ/**ಲೋಕಗಳಿಗೆ ಕಣ್ಣಾಗಿರುವ ಸೂರ್ಯದೇವನಿಗೆ** ನಮಸ್ಕಾರ. **ದಿವೇ ನಮಃ**=ದ್ಯುಲೋಕಕ್ಕೆ ನಮಸ್ಕಾರ; **ಪೃಥಿವ್ಯೈ ನಮಃ**=ಭೂಲೋಕಕ್ಕೆ ನಮಸ್ಕರಿಸುತ್ತೇನೆ.

---

✦ ಈ ಹೋತ್ರೀಯೋಪಸ್ಥಾನದಲ್ಲಿ ಇಂದ್ರದೇವನನ್ನು ಯಜಮಾನನು ನಮಸ್ಕರಿಸುತ್ತಾನೆ. ಇಂದ್ರನೆಂದರೆ ಪರಮೈಶ್ವರ್ಯಯುಕ್ತನೆಂದರ್ಥ. ಅಂತಹ ಹೋತ್ರೀಯಾಗ್ನಿಯು ಇಂದ್ರಿಯ-ವೀರ್ಯಾದಿಗಳನ್ನು ಕರುಣಿಸಲಿ. ಯಜ್ಞವನ್ನು ನಾಶಗೊಳಿಸದಿರಲಿ ಎಂದು

## ಅಹೇ ದೈಧಿಷವ್ಯೋದತಸ್ತಿಷ್ಠಾನ್ಯಸ್ಯ ಸದನೇ ಸೀದ ॥ ಯೋಽಸ್ಮತ್ಪಾಕತರ ಉನ್ನಿವತ ಉದುದ್ವತಶ್ಚ ಗೇಷಂ

ಅಹೇ । ದೈಧಿಷವ್ಯ । ಉದಿತಿ । ಅತಃ । ತಿಷ್ಠ । ಅನ್ಯಸ್ಯ । ಸದನೇ । ಸೀದ । ಯಃ । ಅಸ್ಮತ್ । ಪಾಕತರ ಇತಿ ಪಾಕ-ತರಃ । ಉದಿತಿ । ನಿವತ ಇತಿ ನಿ-ವತಃ । ಉದಿತಿ । ಉದ್ವತ ಇತ್ಯುತ್-ವತಃ । ಚ । ಗೇಷಮ್ ।

| ಮಂತ್ರ | ವಿನಿಯೋಗ |
|---|---|
| **ಅಹೇ ದೈಧಿಷವ್ಯೋ...ಪಾಕತರಃ ॥** | ಯಜಮಾನನ ಆಸನದಲ್ಲಿರುವ ತೃಣವನ್ನು ತೆಗೆದುಹಾಕಲು |
| **ಉನ್ನಿವತ....ಗೇಷಮ್ ॥** | ಯಜಮಾನನು ಕುಳಿತುಕೊಳ್ಳಲು. |

✦**ದೈಧಿಷವ್ಯ**=ಯಜಮಾನನ ಸ್ಥಾನದಲ್ಲಿ ಹುಟ್ಟಿಕೊಂಡಿರುವ; **ಅಹೇ**=ಸರ್ಪದಂತೆ ಪೀಡಾಕರವಾದ ತೃಣವೇ! **ಅತಃ**=ಈ ಸ್ಥಾನದಿಂದ; **ಉತ್ ತಿಷ್ಠ**=ಏಳು; **ಯಃ ಅಸ್ಮತ್ ಪಾಕತರಃ**=ಯಾವನು ನಮಗಿಂತ ಅಲ್ಪನಾಗಿರುತ್ತಾನೆಯೋ; [ಅಂತಹ] **ಅನ್ಯಸ್ಯ ಸದನೇ**= ಬೇರೆಯವನ ಆಸನದಲ್ಲಿ; **ಸೀದ**=ಕುಳಿತುಕೋ. ✦[ನಾನು] **ನಿವತಃ**=[ನನ್ನಿಂದ] ಕೀಳಾದವರಿಗಿಂತ; **ಉತ್ ಗೇಷಮ್**=ಮೇಲೆ ಇರುತ್ತೇನೆ; **ಚ**= ಮತ್ತು; **ಉದ್ವತಃ**=[ನನಗಿಂತ] ಶ್ರೇಷ್ಠರಾದವರಿಗಿಂತಲೂ; **ಉತ್ ಗೇಷಮ್**= ಮೇಲಿರುವೆನು [ಮೇಲಿರುವಂತೆ ಆಗಲಿ]

**ಯಜಮಾನನು ಪ್ರಾರ್ಥಿಸಿಕೊಳ್ಳುತ್ತಾನೆ.**

ತಮ್ಮನ್ನು ನಮಸ್ಕರಿಸದೇ ಯಾಗಶಾಲೆಯನ್ನು ಪ್ರವೇಶಿಸಿದವರ ವಿಷಯದಲ್ಲಿ ಯಜ್ಞ ನಾಶವೆಂಬ ಪೀಡೆಯನ್ನು ಅಗ್ನಿ-ರುದ್ರ-ಇಂದ್ರರು ಮಾಡುತ್ತಾರೆ. ಅಗ್ನಿಯನ್ನು ರುದ್ರನನ್ನಾಗಿಯೂ, ಇಂದ್ರನನ್ನಾಗಿಯೂ ಇಲ್ಲಿ ಸ್ತುತಿಸಿ ಅವರನ್ನು ನಮಸ್ಕರಿಸುವವನಿಗೆ ಯಜ್ಞ ನಾಶವೆಂಬ ಪೀಡೆಯು ಒದಗುವುದಿಲ್ಲವೆಂದು ಹೇಳಲಾಗಿದೆ. **'ಅಗ್ನಿಃ ಸರ್ವಾ ದೇವತಾಃ'** ಎಂಬ ಶ್ರುತಿಯಂತೆ ಅಗ್ನಿಯ ಸ್ತುತಿಯು ಇಲ್ಲಿದೆ.

## ಪಾತಂ ಮಾ ದ್ಯಾವಾಪೃಥಿವೀ ಅದ್ಯಾಹ್ನಸ್ಸದೋ ವೈ ಪ್ರಸರ್ಪಂತಂ [(೧೪)] ಪಿತರೋಽನು ಪ್ರಸರ್ಪಂತಿ ತ ಏನಮೀಶ್ವರಾ ಹಿಗ್ಂಸಿತೋಃ

---

ಪಾತಮ್ । ಮಾ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅದ್ಯ । ಅಹ್ನಃ । ಸದಃ । ವೈ । ಪ್ರಸರ್ಪಂತಮಿತಿ ಪ್ರ-ಸರ್ಪಂತಮ್ ।(೧೪)। ಪಿತರಃ । ಅನು । ಪ್ರೇತಿ । ಸರ್ಪಂತಿ । ತೇ । ಏನಮ್ । ಈಶ್ವರಾಃ । ಹಿಗ್ಂಸಿತೋಃ ।

---

| ಮಂತ್ರ | ವಿನಿಯೋಗ |
|---|---|
| ಪಾತಂ ಮಾ...ಅದ್ಯಾಹ್ನಃ ॥ | ಯಜಮಾನನು ಆಸನದಲ್ಲಿ ಕುಳಿತು ಹೇಳಲು./ ದ್ಯಾವಾಪೃಥಿವಿಗಳನ್ನು ನೋಡಲು- ಭ.ಭಾ.ಭಾ |

---

✦ದ್ಯಾವಾಪೃಥಿವೀ=ಓ! ದ್ಯುಲೋಕ-ಭೂಲೋಕದೇವತೆಗಳೇ! ಅದ್ಯ=ಈ ದಿನ; ಅಹ್ನಃ=ಅಹಃಶಬ್ದವಾಚ್ಯವಾದ ಅಗ್ನಿಷ್ಟೋಮಾನುಷ್ಠಾನದಿಂದ/ಈ ದಿವಸದಿಂದ ಮೊದಲುಗೊಂಡು ನಡೆಯುವ ಅಗ್ನಿಷ್ಟೋಮಯಾಗದ ನ್ಯೂನಾತಿರೇಕಗಳಿಂದ; ಮಾ ಪಾತಮ್=ನನ್ನನ್ನು ರಕ್ಷಿಸಿ;/ಅದು ಉಂಟಾಗದಂತೆ ಕಾಪಾಡಿ.

---

### ಪಿತೃಪ್ರಾರ್ಥನಾವಿಧಿಯ ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಸದಃ ಪ್ರಸರ್ಪಂತಮ್ ವೈ | ಸದಸ್ಸಿಗೆ ಬರುತ್ತಿರುವ ಯಜಮಾನನನ್ನು |
| ಪಿತರಃ ಅನುಪ್ರಸರ್ಪಂತಿ | ಪಿತೃದೇವತೆಗಳು ಹಿಂಬಾಲಿಸಿ ಬರುತ್ತಾರೆ. |
| ತೇ ಏನಮ್ ಹಿಗ್ಂಸಿತೋಃ | [ಅವರನ್ನು ನಮಸ್ಕರಿಸದ] ಈ ಯಜಮಾನನನ್ನು |
| ಈಶ್ವರಾಃ | ಹಿಂಸಿಸಲು ಅವರು ಸಮರ್ಥರಾಗಿರುತ್ತಾರೆ. |

---

ಎಲೈ! ದ್ಯಾವಾಪೃಥಿವಿಗಳೇ! ನಿಮ್ಮನ್ನು ನಮಸ್ಕರಿಸದವನ ವಿಷಯದಲ್ಲಿ ನೀವು

ಸದಃ ಪ್ರಸೃಪ್ಯ ದಕ್ಷಿಣಾರ್ಧಂ ಪರೇಕ್ಷೇತಾಗಂತ ಪಿತರಃ

ಪಿತೃಮಾನಹಂ ಯುಷ್ಮಾಭಿರ್ಭೂಯಾಸಗ್ಂ

ಸುಪ್ರಜಸೋ ಮಯಾ ಯೂಯಂ ಭೂಯಾಸ್ತೇತಿ

---

ಸದಃ । ಪ್ರಸೃಪ್ಯೇತಿ ಪ್ರ-ಸೃಪ್ಯ । ದಕ್ಷಿಣಾರ್ಧಮಿತಿ ದಕ್ಷಿಣ-ಅರ್ಧಮ್ । ಪರೇತಿ । ಈಕ್ಷೇತ । ಏತಿ । ಆಗಂತ । ಪಿತರಃ । ಪಿತೃಮಾನಿತಿ ಪಿತೃ-ಮಾನ್ । ಅಹಮ್ । ಯುಷ್ಮಾಭಿಃ । ಭೂಯಾಸಮ್ । ಸುಪ್ರಜಸ ಇತಿ ಸು-ಪ್ರಜಸಃ । ಮಯಾ । ಯೂಯಮ್ । ಭೂಯಾಸ್ತ । ಇತಿ ।

---

| | |
|---|---|
| ಸದಃ ಪ್ರಸೃಪ್ಯ | [ಅವರ ಅನುಗ್ರಹಕ್ಕಾಗಿ ಯಜಮಾನನು] ಸದಸ್ಸಿಗೆ ಬಂದು |
| ದಕ್ಷಿಣಾರ್ಧಮ್ ಪರೇಕ್ಷೇತ | ಸದಸ್ಸಿನ ದಕ್ಷಿಣಭಾಗವನ್ನು [ಮುಂದಿನ ಮಂತ್ರದಿಂದ] ನೋಡಬೇಕು. |
| **ಮಂತ್ರ** | **ವಿನಿಯೋಗ** |
| ಆಗಂತ...ಭೂಯಾಸ್ತ ॥ | ಸದಸ್ಸಿನ ದಕ್ಷಿಣಭಾಗವನ್ನು ನೋಡಿ ಜಪಿಸಲು |

---

✦**ಪಿತರಃ**=ಪಿತೃದೇವತೆಗಳೇ! **ಆಗಂತ**=ಈ ಸದಃಸ್ಥಾನಕ್ಕೆ ಬನ್ನಿರಿ; **ಅಹಮ್**=ನಾನು; **ಯುಷ್ಮಾಭಿಃ**=ನಿಮ್ಮಿಂದ; **ಪಿತೃಮಾನ್**=ಒಳ್ಳೆಯ ಪಿತೃಗಳುಳ್ಳವನಾಗಿ; **ಭೂಯಾಸಮ್**=ಆಗುವೆನು; **ಮಯಾ**=[ನಿಮ್ಮ ಅನುಗ್ರಹದಿಂದ ಯಾಗಾನುಷ್ಠಾನ ಮಾಡುವ] ನನ್ನಿಂದ; **ಯೂಯಮ್**=ನೀವು; **ಸುಪ್ರಜಸಃ**=ಒಳ್ಳೆಯ ಮಕ್ಕಳುಳ್ಳವರಾಗಿ; **ಭೂಯಾಸ್ತ**=ಆಗಿರಿ/ಆಗುವಿರಿ; **ಇತಿ**=ಹೀಗೆಂದು [ಪ್ರಾರ್ಥಿಸುವೆನು]

---

ಉದಾಸೀನರಾಗಿದ್ದರೂ, ನಿಮ್ಮನ್ನು ವಂದಿಸುವವರ ವಿಷಯದಲ್ಲಿ ಅನುಕೂಲರಾಗಿರುವಿರಿ. ನನ್ನನ್ನು ಕಾಪಾಡಿರಿ.

ತೇಭ್ಯ ಏವ ನಮಸ್ಕೃತ್ಯ ಸದಃ

ಪ್ರಸರ್ಪತ್ಯಾತ್ಮನೋಽನಾರ್ತ್ಯೈ ॥೧೫-4॥

[ಮಖೋ ವಾ ಅಂತರಿಕ್ಷಾತ್ಪ್ರಸರ್ಪಂತಂ ತ್ರಯಸ್ತ್ರಿಗ್ಂಶಚ್ಚ ॥]

---

ತೇಭ್ಯಃ । ಏವ । ನಮಸ್ಕೃತ್ಯೇತಿ ನಮಃ-ಕೃತ್ಯ । ಸದಃ । ಪ್ರೇತಿ । ಸರ್ಪತಿ ।

ಆತ್ಮನಃ । ಅನಾರ್ತ್ಯೈ ॥೧೫॥

---

| | |
|---|---|
| ತೇಭ್ಯಃ ನಮಸ್ಕೃತ್ಯ ಏವ | ಆ ಪಿತೃದೇವತೆಗಳನ್ನು ನಮಸ್ಕರಿಸಿಯೇ |
| ಸದಃ ಪ್ರಸರ್ಪತಿ | [ಯಜಮಾನನು]ಸದಸ್ಸನ್ನು ಪ್ರವೇಶಿಸುತ್ತಾನೆ. |
| ಆತ್ಮನಃ ಅನಾರ್ತ್ಯೈ | ಇದು ತನಗೆ ಹಿಂಸೆಯಾಗದೆ ಇರುವುದಕ್ಕೆ ಕಾರಣವಾಗುತ್ತದೆ. |

---

ಯಜ್ಞಕ್ಕೆ ಸಂಬಂಧಿಸಿದವರೆಲ್ಲರನ್ನೂ ಇಲ್ಲಿ ನಮಸ್ಕರಿಸಿ ಪ್ರಾರ್ಥಿಸಲಾಗಿದೆ. ಪ್ರಕಾಶಮಾನನಾದ ಸೂರ್ಯದೇವನೂ, ವಾಯು, ಅಗ್ನಿ, ಯಮ, ಸರಸ್ವತೀದೇವಿ ಮತ್ತು ದ್ವಾರದೇವತೆಗಳನ್ನು ಕುರಿತು ದ್ಯುಲೋಕ, ಅಂತರಿಕ್ಷ, ಪೃಥಿವೀ, ಪಿತೃಗಳು, ಮನುಷ್ಯರು ಇವುಗಳ ನಿಮಿತ್ತವಾಗಿ ನಾನು ಎಸಗಿರಬಹುದಾದ ಪಾಪಗಳಿಂದ ನನ್ನನ್ನು ದೂರ ಮಾಡಲು ಪ್ರಾರ್ಥಿಸುವೆನು. ದ್ವಾರದೇವತೆಗಳೇ! ನನ್ನನ್ನು ತೊಂದರೆಯಾಗ ದಂತೆ ಕಾಪಾಡಿರಿ.

ಮುಂದಿನ ಮಂತ್ರಗಳಲ್ಲಿ ಸದಸ್ಸು, ಸದಸಸ್ಪತಿ, ಋತ್ವಿಜರು, ದ್ಯುಲೋಕ ಹಾಗೂ ಭೂಲೋಕಗಳಿಗೆ ನಮಸ್ಕಾರವನ್ನು ಹೇಳಲಾಗಿದೆ. ಅವುಗಳಲ್ಲಿ ಸದಸಸ್ಪತಿ ಶಬ್ದಕ್ಕೆ ಭಟ್ಟಭಾಸ್ಕರರು 'ಐಂದ್ರಂ ಸದಃ' ಎಂಬ ಶ್ರುತಿವಾಕ್ಯವನ್ನು ಆಧರಿಸಿ ವಿಶಿಷ್ಟ ಅರ್ಥವನ್ನು ವಿವರಿಸಿದ್ದಾರೆ ಹಾಗೆಯೇ 'ಚಕ್ಷುಃ' ಶಬ್ದಕ್ಕೆ ಸೂರ್ಯನೆಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣಾಚಾರ್ಯರು ಲೋಕಸಾಮಾನ್ಯವಾದ ಅರ್ಥ ವನ್ನೇ ತಿಳಿಸಿದ್ದಾರೆ.

ಬ್ರಹ್ಮನ ಆಸನದಿಂದ ಪಶ್ಚಿಮಭಾಗದಲ್ಲಿ ಯಜಮಾನನ ಆಸನ. ಅಲ್ಲಿರುವ ತೊಂದರೆ ಯನ್ನುಂಟುಮಾಡುವ ಹುಲ್ಲು ಮೊದಲಾದವನ್ನು ಕುರಿತು 'ನೀನು ಬೇರೆಡೆಗೆ ಹೋಗು'

ಎಂದು ಹೇಳಿ ತೆಗೆದುಹಾಕಬೇಕು.

ಯಜಮಾನನು ತನ್ನ ಆಸನದಲ್ಲಿ ಕುಳಿತುಕೊಳ್ಳುವಾಗ ತನಗಿಂತ ಕೀಳಾದವರಿಗಿಂತಲೂ, ತನಗಿಂತಲೂ ಶ್ರೇಷ್ಠರಾದವರಿಗಿಂತಲೂ ತಾನು ಮೇಲೆ ಇರುವೆನೆಂದು ಹೇಳಿ ಕುಳಿತುಕೊಳ್ಳುತ್ತಾನೆ.

ಯಜಮಾನನು ತನ್ನ ಆಸನದಲ್ಲಿ ಕುಳಿತುಕೊಂಡು 'ಓ ದ್ಯುಲೋಕ-ಭೂಲೋಕ ದೇವತೆಗಳೇ! ಈ ದಿನದ ಅಗ್ನಿಷ್ಟೋಮಾನುಷ್ಠಾನದಲ್ಲಿ ಉಂಟಾಗಬಹುದಾದ ನ್ಯೂನತೆಯಿಂದ ನನ್ನನ್ನು ಕಾಪಾಡಿ' 'ಈ ದಿವಸದಿಂದ ನಡೆಯುವ ಅಗ್ನಿಷ್ಟೋಮ ಯಾಗದ ನ್ಯೂನಾತಿರೇಕಗಳನ್ನು ಪರಿಹರಿಸಿರಿ' ಎಂದು ಪ್ರಾರ್ಥಿಸುತ್ತಾನೆ.

ಸದಸ್ಸಿಗೆ ಬರುತ್ತಿರುವ ಯಜಮಾನನನ್ನು ಹಿಂಬಾಲಿಸಿ ಬರುವ ಪಿತೃದೇವತೆಗಳನ್ನು ನಮಸ್ಕರಿಸಿ, ಅವರ ಅನುಗ್ರಹವನ್ನು ಗಳಿಸಬೇಕು. ಯಜಮಾನನು 'ಎಲೈ! ಪಿತೃದೇವತೆಗಳೇ! ನಿಮ್ಮಿಂದ ನಾನು ಒಳ್ಳೆಯ ಪಿತೃಗಳುಳ್ಳವನಾಗಲಿ, ನನ್ನಿಂದ ನೀವು ಒಳ್ಳೆಯ ಯಾಗಾನುಷ್ಠಾನವನ್ನು ಮಾಡುವ ಮಕ್ಕಳುಳ್ಳವರಾಗಿರಿ' ಎಂಬುದಾಗಿ ಮಂತ್ರವನ್ನು ಹೇಳುತ್ತಾನೆ.

ಹೀಗೆ ಯಜಮಾನನು ಎಲ್ಲರನ್ನೂ ನಮಸ್ಕರಿಸಿ ಯಾಗಸದಸ್ಸಿಗೆ ಪ್ರವೇಶ ಮಾಡುತ್ತಾನೆ. ಪಿತೃದೇವತೆಗಳನ್ನು ನಮಸ್ಕರಿಸುವುದರಿಂದ ಅವನಿಗೆ ಹಿಂಸೆಯಾಗುವುದಿಲ್ಲ.

## ವಿನಿಯೋಗಸಂಗ್ರಹ

ಸ್ಫ್ಯ[1] ಉತ್ಕರೇ ಪರಿಕ್ಷಿಪ್ತಂ ಸ್ಫ್ಯಂ ತತ್ರೈವೋಪತಿಷ್ಠತೇ ।
ಉಪ ದ್ಯುಭೂಮೀ ಅನ್ಯೇಷೂಪ[2] ಮಾ ಇತ್ಯನುಷಜ್ಯತೇ ॥
[1]ಆಸ್ತಾವೇತಿ ಸ್ತೋತ್ರದೇಶಂ[1] ಕಲೇತಿ ದ್ರೋಣಕುಂಭಕಮ್ ।
[1]ಸೋಮಃ ಸೋಮಂ ಚಾಗ್ನಿ[1]ರಗ್ನಿ[1]ಮುಪ ದೇವೇತಿ ದೇವತಾಃ ॥
[1]ಉಪ ಯಜ್ಞೇತಿ ಯಜ್ಞಂ ತಮುಪಮೇತಿ ತು ಹೋತ್ರಕಾನ್ ।
[1]ನಮಸ್ತ್ರಯವಿಧಿಃ ಸ್ಪಷ್ಟೋ [1]ದೃಢೇ ಸ್ಥೋ ದ್ಯುಭುವೌ ಭಜೇತ್ ॥
[1]ಸೂರ್ಯಃ ಸೂರ್ಯಂ [1]ವಾಯುರ್ವಾಯುಂ ಪಾತ್ವಿತ್ಯೇಷೋಽನುಷಜ್ಯತೇ ।
ಅಗ್ನಿರ್ಯಮಃ ಸರೇತ್ಯೇತಾನ್ ದ್ವೌ ದ್ವಾರೌ ಸದಸೋ ಭಜೇತ್ ॥
ಸದೋ ಬ್ರಹ್ಮಾ ಚರ್ತ್ವಿಜೋ ದ್ಯೌರ್ಭೂರ್ನಮಃ16-20 ಪಂಚಭಿಃ ಕ್ರಮಾತ್ ।
[21]ಅಹೇ ತೃಣಂ ನಿರಸ್ಯೋ[22]ನ್ನೇತ್ಯುಪವಿಶ್ಯಾತ್ರ ಪಾ[23] ಜಪೇತ್ ॥
[24]ಆಽಽಗಂತ ದಕ್ಷಿಣಂ ಪಶ್ಯೇನ್ಮಂತ್ರಾ ವಿಂಶತಿರೀರಿತಾಃ ।

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ=20 [24]**

---

## ॥ ಪಂಚಮೋಽನುವಾಕಃ ॥

**ಭಕ್ಷೇಹಿ ಮಾಽಽವಿಶ ದೀರ್ಘಾಯುತ್ವಾಯ**

**ಶಂತನುತ್ವಾಯ ರಾಯಸ್ಪೋಷಾಯ ವರ್ಚಸೇ**

---

ಭಕ್ಷ । ಏತಿ । ಇಹಿ । ಮಾ । ಏತಿ । ವಿಶ । ದೀರ್ಘಾಯುತ್ವಾಯೇತಿ ದೀರ್ಘಾಯು- ತ್ವಾಯ । ಶಂತನುತ್ವಾಯೇತಿ ಶಂತನು-ತ್ವಾಯ । ರಾಯಃ । ಪೋಷಾಯ । ವರ್ಚಸೇ ।

---

ನಾಲ್ಕನೆಯ ಅನುವಾಕದಲ್ಲಿ ಸ್ಫ್ಯಾದ್ಯುಪಸ್ಥಾನಮಂತ್ರಗಳು ಉಕ್ತವಾಗಿವೆ. ಈ ಐದನೆಯ ಅನುವಾಕದಲ್ಲಿ ಭಕ್ಷಣಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಭಕ್ಷೇಹಿ...ಹೃದೋಽಸಿ ॥ | ತಂದಿರುವ ಭಕ್ಷದ ಅವೇಕ್ಷಣವನ್ನು ಮಾಡಲು. |

---

✦ಭಕ್ಷ=ಭಕ್ಷಣಕ್ಕಾಗಿ ತಂದಿರುವ ಸೋಮರಸವೇ!; ಏಹಿ=ಬಾ; ದೀರ್ಘಾಯುತ್ವಾಯ =ಪೂರ್ಣವಾದ ಆಯುಸ್ಸಿಗಾಗಿಯೂ; ಶಂತನುತ್ವಾಯ=ಸುಖಕರವಾದ ದೇಹವನ್ನು ಹೊಂದಿರುವುದಕ್ಕಾಗಿಯೂ; ರಾಯಃ ಪೋಷಾಯ=ಧನದ ಪುಷ್ಟಿಗಾಗಿಯೂ; ವರ್ಚಸೇ =ಕಾಂತಿಗಾಗಿಯೂ;

---

ಸೋಮಭಕ್ಷಣಕ್ಕಾಗಿ ತಂದಿರುವ ಸೋಮರಸವನ್ನು ಕುರಿತು ಯಜಮಾನನು ಆಯುಸ್ಸು, ಕಾಂತಿ, ಶರೀರ, ಸಂತತಿಗಳಿಗಾಗಿ ನನ್ನನ್ನು ಪ್ರವೇಶಿಸು ಎಂದು ಹೇಳುತ್ತಾನೆ. ತನ್ನ ಮನಸ್ಸಿಗೆ ಸೋಮರಸವು ಅತಿಪ್ರಿಯವಾದುದ್ದೆಂಬುದಾಗಿಯೂ ಹೇಳುತ್ತಾನೆ. ಸೋಮರಸಭಕ್ಷಣದಿಂದ ಇವೆಲ್ಲವೂ ಲಭಿಸುತ್ತವೆ.

**ಸುಪ್ರಜಾಸ್ತ್ವಾಯೇಹಿ ವಸೋ ಪುರೋವಸೋ ಪ್ರಿಯೋ ಮೇ ಹೃದೋಽಸ್ಯಶ್ವಿನೋಸ್ತ್ವಾ ಬಾಹುಭ್ಯಾಗ್‌ಂ ಸಘ್ಯಾಸಂ ನೃಚಕ್ಷಸಂ ತ್ವಾ ದೇವ ಸೋಮ ಸುಚಕ್ಷಾ ಅವಖ್ಯೇಷಂ**

---

ಸುಪ್ರಜಾಸ್ತ್ವಾಯೇತಿ ಸುಪ್ರಜಾಃ-ತ್ವಾಯ । ಏತಿ । ಇಹಿ । ವಸೋ ಇತಿ । ಪುರೋವಸೋ ಇತಿ ಪುರಃ-ವಸೋ । ಪ್ರಿಯಃ । ಮೇ । ಹೃದಃ । ಅಸಿ । ಅಶ್ವಿನೋಃ । ತ್ವಾ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಸಘ್ಯಾಸಮ್ । ನೃಚಕ್ಷಸಮಿತಿ ನೃ-ಚಕ್ಷಸಮ್ । ತ್ವಾ । ದೇವ । ಸೋಮ । ಸುಚಕ್ಷಾ ಇತಿ ಸು-ಚಕ್ಷಾಃ । ಅವೇತಿ । ಖ್ಯೇಷಮ್ ।

---

| ಮಂತ್ರ | ವಿನಿಯೋಗ |
|---|---|
| ಅಶ್ವಿನೋಃ...ಸಘ್ಯಾಸಮ್ ॥ | ಸೋಮಗ್ರಹಣವನ್ನು ಮಾಡಲು |
| ನೃಚಕ್ಷಸಮ್...ಖ್ಯೇಷಮ್ ॥ | ಸೋಮರಸವನ್ನು ನೋಡಲು |

---

ಸುಪ್ರಜಾಸ್ತ್ವಾಯ=ಒಳ್ಳೆಯ ಮಕ್ಕಳನ್ನು ಪಡೆದಿರುವುದಕ್ಕಾಗಿಯೂ; **ಮಾ**=ನನ್ನನ್ನು; ಆ ವಿಶ=ಪ್ರವೇಶಿಸು. **ವಸೋ**=ಸುಖವಾಗಿ ವಾಸಿಸುವಂತೆ ಮಾಡತಕ್ಕ ಸೋಮ ರಸವೇ! **ಪುರೋವಸೋ**=ವಾಸಕ್ಕೆ ಸಾಧನವಾದ ಧನಾದಿಗಳಲ್ಲಿ ಮೊದಲನೆಯ ವನಾದ ಸೋಮರಸವೇ! ಏಹಿ=ಬಾ; **ಮೇ ಹೃದಃ ಪ್ರಿಯಃ** ಅಸಿ=ನನ್ನ ಮನಸ್ಸಿಗೆ ಪ್ರಿಯನಾಗಿರುವೆ. ✦[ಎಲೈ! ಸೋಮರಸವೇ!]**ತ್ವಾ**=ನಿನ್ನನ್ನು; **ಅಶ್ವಿನೋಃ ಬಾಹುಭ್ಯಾಮ್**=ದೇವವೈದ್ಯರಾದ ಅಶ್ವಿನೀದೇವತೆಗಳ ತೋಳುಗಳಿಂದ; **ಸಘ್ಯಾಸಮ್**=ಗ್ರಹಿಸುತ್ತೇನೆ; ✦**ಸೋಮ ದೇವ**=ದೇವನಾದ ಸೋಮನೇ!/ **ಸೋಮರಸವೇ! ನೃಚಕ್ಷಸಮ್**=ಯಜಮಾನಾದಿ ಮನುಷ್ಯರೆಲ್ಲರನ್ನೂ ನೋಡುವ/ ತಿಳಿದಿರುವ; **ತ್ವಾ**=ನಿನ್ನನ್ನು; **ಸುಚಕ್ಷಾಃ**=[ನಿನ್ನ ಅನುಗ್ರಹದಿಂದ] ಚೆನ್ನಾಗಿ ನೋಡುವ ಶಕ್ತಿಯುಳ್ಳ ನಾನು; **ಅವಖ್ಯೇಷಮ್**=ನೋಡುತ್ತೇನೆ.

# ಮಂದ್ರಾಽಭಿಭೂತಿಃ ಕೇತುರ್ಯಜ್ಞಾನಾಂ ವಾಗ್ಜುಷಾಣಾ ಸೋಮಸ್ಯ ತೃಪ್ಯತು ಮಂದ್ರಾ ಸ್ವರ್ವಾಚ್ಯದಿತಿರನಾಹತ ಶೀರ್ಷ್ಣೀ ವಾಗ್ಜುಷಾಣಾ ಸೋಮಸ್ಯ ತೃಪ್ಯ-

---

ಮಂದ್ರಾ । ಅಭಿಭೂತಿರಿತ್ಯಭಿ-ಭೂತಿಃ । ಕೇತುಃ । ಯಜ್ಞಾನಾಮ್ । ವಾಕ್ । ಜುಷಾಣಾ । ಸೋಮಸ್ಯ । ತೃಪ್ಯತು । ಮಂದ್ರಾ । ಸ್ವರ್ವಾಚೀತಿ ಸು-ಅರ್ವಾಚೀ । ಅದಿತಿಃ । ಅನಾಹತಶೀರ್ಷ್ಣೀತ್ಯನಾಹತ-ಶೀರ್ಷ್ಣೀ । ವಾಕ್ । ಜುಷಾಣಾ । ಸೋಮಸ್ಯ । ತೃಪ್ಯತು ।

---

| ಮಂತ್ರ | ವಿನಿಯೋಗ |
| --- | --- |
| ಮಂದ್ರಾಭಿಭೂತಿಃ...ಭಕ್ಷಯಾಮಿ ॥ | ಪ್ರಾತಃಸವನದ ಸೋಮರಸಭಕ್ಷಣವನ್ನು ಮಾಡಲು |

---

✦**ಮಂದ್ರಾ**=ಸಂತೋಷಕ್ಕೆ ಕಾರಣಳಾದ; **ಅಭಿಭೂತಿಃ**=ವಿಘ್ನಗಳನ್ನು ಹೋಗಲಾಡಿಸುವ; **ಯಜ್ಞಾನಾಮ್ ಕೇತುಃ**=ಯಜ್ಞಗಳಿಗೆ ಕಾರಣಭೂತಳಾಗಿರುವ; **ವಾಕ್**=ಮುಖ್ಯ ದೇವತೆಯಾದ ವಾಗ್ದೇವತೆಯು; **ಸೋಮಸ್ಯ ಜುಷಾಣಾ**=ಸೋಮರಸವನ್ನು ಸೇವಿಸುವವಳಾಗಿ; **ತೃಪ್ಯತು**=ತೃಪ್ತಿ ಹೊಂದಲಿ; **ಮಂದ್ರಾ**=ಸಂತೋಷಕಾರಣಳಾದ; **ಸ್ವರ್ವಾಚೀ**=ಚೆನ್ನಾಗಿ ಅಭಿಮುಖಳಾಗಿರುವ; **ಅದಿತಿಃ**=ಖಂಡಿಸಲು ಅಸಾಧ್ಯಳಾದ; **ಅನಾಹತಶೀರ್ಷ್ಣೀ**=ತಡೆಯಿಲ್ಲದ ಆರಂಭವುಳ್ಳ; **ವಾಕ್**= ವಾಗ್ದೇವಿಯು; **ಸೋಮಸ್ಯ ಜುಷಾಣಾ**=ಸೋಮರಸವನ್ನು ಸೇವಿಸುವವಳಾಗಿ; **ತೃಪ್ಯತು**=ತೃಪ್ತಳಾಗಲಿ.

---

ಯಜಮಾನನು ತಾನು ಸ್ವತಂತ್ರವಾಗಿ ಸೋಮರಸವನ್ನು ಗ್ರಹಿಸುತ್ತಿಲ್ಲವೆಂಬುದನ್ನು ತಿಳಿಸಲು 'ದೇವವೈದ್ಯರಾದ ಅಶ್ವಿನೀದೇವತೆಗಳ ತೋಳುಗಳಿಂದ ಈ ಸೋಮರಸವನ್ನು ಪರಿಗ್ರಹಿಸುತ್ತಿದ್ದೇನೆ' ಎಂದು ಹೇಳುತ್ತಾನೆ.

ತ್ವೇಹಿ ವಿಶ್ವಚರ್ಷಣೇ[(೧೫)]ಶಂಭೂರ್ಮಯೋಭೂ

ಸ್ಸ್ವಸ್ತಿ ಮಾ ಹರಿವರ್ಣ ಪ್ರಚರ ಕ್ರತ್ವೇ ದಕ್ಷಾಯ

ರಾಯಸ್ಪೋಷಾಯ ಸುವೀರತಾಯ್ಯೈ ಮಾ ಮಾ

ರಾಜನ್ವಿಬೀಭಿಷೋ ಮಾ ಮೇ ಹಾರ್ದಿ ತ್ವಿಷಾ ವಧೀಃ ।

---

ಏತಿ । ಇಹ । ವಿಶ್ವಚರ್ಷಣೇ ಇತಿ ವಿಶ್ವ–ಚರ್ಷಣೇ ।(೧೫)। ಶಂಭೂರಿತಿ ಶಂ–ಭೂಃ । ಮಯೋಭೂರಿತಿ ಮಯಃ–ಭೂಃ । ಸ್ವಸ್ತಿ । ಮಾ । ಹರಿವರ್ಣೇತಿ ಹರಿ–ವರ್ಣ । ಪ್ರೇತಿ । ಚರ । ಕ್ರತ್ವೇ । ದಕ್ಷಾಯ । ರಾಯಃ । ಪೋಷಾಯ । ಸುವೀರತಾಯಾ ಇತಿ ಸು–ವೀರತಾಯ್ಯೈ । ಮಾ । ಮಾ । ರಾಜನ್ । ವೀತಿ । ಬೀಭಿಷಃ । ಮಾ । ಮೇ । ಹಾರ್ದಿ । ತ್ವಿಷಾ । ವಧೀಃ ॥

---

**ವಿಶ್ವಚರ್ಷಣೇ**=ಮಾನವರೆಲ್ಲರಿಗೂ ಆತ್ಮೀಯನಾದ ಸೋಮರಸವೇ! **ಶಂಭೂಃ**=ಶಾಂತಿಯನ್ನು ಉಂಟುಮಾಡುವವನಾಗಿಯೂ; **ಮಯೋಭೂಃ**=ಸುಖವನ್ನು ಉಂಟು ಮಾಡುವವನಾಗಿಯೂ; **ಏಹಿ**=ಬಾ; **ಹರಿವರ್ಣ**=ಹಸಿರುಬಣ್ಣದವನಾದ ಸೋಮನೇ! **ಕ್ರತ್ವೇ**=ಯಾಗಗಳಿಗಾಗಿಯೂ; **ದಕ್ಷಾಯ**=ಉತ್ಸಾಹಕ್ಕಾಗಿಯೂ; **ರಾಯಃ ಪೋಷಾಯ**=ಧನದ ಅಭಿವೃದ್ಧಿಗಾಗಿಯೂ; **ಸುವೀರತಾಯ್ಯೈ**=ಉತ್ತಮ ಪುತ್ರರ ಪ್ರಾಪ್ತಿಗಾಗಿಯೂ; **ಸ್ವಸ್ತಿ**=ಶುಭಪ್ರದನಾಗಿ/ವಮನರೂಪವಾದ ವಿನಾಶವು ಒದಗದಿರುವಂತೆ; **ಮಾ ಪ್ರಚರ**=ನನ್ನನ್ನು ಪ್ರವೇಶಿಸು; **ರಾಜನ್**=ಸೋಮರಾಜನೇ! **ಮಾ ಮಾ ವಿಬೀಭಿಷಃ**=[ದೇಹದಿಂದ ಮೇಲ್ಮುಖವಾಗಿ ಅಥವಾ ಅಧೋಮುಖ ವಾಗಿ ಹೊರಬೀಳುವಿಕೆಯಿಂದ] ನನ್ನನ್ನು ಭಯಪಡಿಸಬೇಡ [ದೇಹದಲ್ಲಿಯೇ ನಿಲ್ಲು] **ಮೇ ಹಾರ್ದಿ**=ನನ್ನ ಹೃದಯದಲ್ಲಿರುವ ಮನಸ್ಸನ್ನು; **ತ್ವಿಷಾ**=ನಿನ್ನ ತೇಜಸ್ಸಿನಿಂದ; **ಮಾ ವಧೀಃ**=ಹಿಂಸಿಸಬೇಡ; [ಹೀಗೆ ಮಾಡಿ]

**ವೃಷ್ಣೇ ಶುಷ್ಮಾಯಾಯುಷೇ ವರ್ಚಸೇ । ವಸುಮದ್ಗಣಸ್ಯ ಸೋಮ ದೇವ ತೇ ಮತಿವಿದಃ ಪ್ರಾತಸ್ಸವನಸ್ಯ ಗಾಯತ್ರ ಛಂದಸ ಇಂದ್ರಪೀತಸ್ಯ ನರಾಶಗ್‌ಂಸಪೀತಸ್ಯ ಪಿತೃಪೀತಸ್ಯ**

---

ವೃಷ್ಣೇ । ಶುಷ್ಮಾಯ । ಆಯುಷೇ । ವರ್ಚಸೇ ॥ ವಸುಮದ್ಗಣಸ್ಯೇತಿ ವಸುಮತ್-ಗಣಸ್ಯ । ಸೋಮ । ದೇವ । ತೇ । ಮತಿವಿದ ಇತಿ ಮತಿ-ವಿದಃ । ಪ್ರಾತಸ್ಸವನಸ್ಯೇತಿ ಪ್ರಾತಃ-ಸವನಸ್ಯ । ಗಾಯತ್ರಛಂದಸ ಇತಿ ಗಾಯತ್ರ-ಛಂದಸಃ । ಇಂದ್ರಪೀತಸ್ಯೇತೀಂದ್ರ-ಪೀತಸ್ಯ । ನರಾಶಗ್‌ಂಸಪೀತಸ್ಯೇತಿ ನರಾಶಗ್‌ಂಸ-ಪೀತಸ್ಯ । ಪಿತೃಪೀತಸ್ಯೇತಿ ಪಿತೃ-ಪೀತಸ್ಯ ।

---

**ವೃಷ್ಣೇ**=ಇಂದ್ರಿಯಶಕ್ತಿಗೂ; **ಶುಷ್ಮಾಯ**=ಬಲಕ್ಕೂ; **ಆಯುಷೇ**=ದೀರ್ಘಾಯುಸ್ಸಿಗೂ; **ವರ್ಚಸೇ**=ಕಾಂತಿಗೂ[ಕಾರಣನಾಗು]**ಸೋಮ ದೇವ**=ಪ್ರಕಾಶಮಾನನಾದ ಸೋಮ ದೇವನೇ! **ಮತಿವಿದಃ**=ಯಜಮಾನರ ಬುದ್ಧಿಯನ್ನು/ಆಶಯವನ್ನು ತಿಳಿದಿರುವ; **ತೇ**=ನಿನಗೆ ಸಂಬಂಧಿಸಿದ; **ವಸುಮದ್ಗಣಸ್ಯ**=ಅಷ್ಟವಸುಗಳ ಸಂಬಂಧವನ್ನು ಪಡೆದಿರುವ; **ಗಾಯತ್ರಛಂದಸಃ**=ಬಹಿಷ್ಪವಮಾನಾದಿಗಳಲ್ಲಿ ಗಾಯತ್ರೀಛಂದಸ್ಸಿನ ಸಂಬಂಧವುಳ್ಳ; **ಪ್ರಾತಸ್ಸವನಸ್ಯ**=ಸೋಮಯಾಗದ ಪ್ರಾತಃಸವನಕ್ಕೆ ಸಂಬಂಧಿಸಿದ; **ಇಂದ್ರಪೀತಸ್ಯ**=ಇಂದ್ರದೇವನ ಸೋಮಪಾನವುಳ್ಳ; **ನರಾಶಗ್‌ಂಸಪೀತಸ್ಯ**=ನರಾಶಂಸರೆಂಬ ಪಿತೃ ವಿಶೇಷಗಳ ಸೋಮಪಾನವುಳ್ಳ; **ಪಿತೃಪೀತಸ್ಯ**=ಪಿತೃದೇವತೆಗಳ ಸೋಮಪಾನವುಳ್ಳ

---

ಹಾಗೆಯೇ ಸೋಮದೇವನ ಅನುಗ್ರಹದಿಂದಲೇ ದೊರಕಿರುವ ದರ್ಶನಶಕ್ತಿಯಿಂದ ಎಲ್ಲರನ್ನೂ ತಿಳಿದಿರುವ ಸೋಮನನ್ನು ನೋಡುತ್ತೇನೆ ಎಂದೂ ಹೇಳುತ್ತಾನೆ.

ಸಂತೋಷವನ್ನು ಕೊಡುವ ಮುಖದೇವತೆಯಾದ ವಾಗ್ದೇವಿಯು ವಿಘ್ನಗಳನ್ನು ನಿವಾರಿಸಬಲ್ಲಳು. ಆ ವಾಗ್ದೇವಿಯು ಸೋಮರಸವನ್ನು ಸೇವಿಸಿ ತೃಪ್ತಳಾಗಲಿ.

ಮಧುಮತ ಉಪಹೂತಸ್ಯೋಪಹೂತೋ ಭಕ್ಷಯಾಮಿ

ರುದ್ರವದ್ಗಣಸ್ಯ ಸೋಮ ದೇವ ತೇ ಮತಿವಿದೋ

ಮಾಧ್ಯಂದಿನಸ್ಯ ಸವನಸ್ಯ ತ್ರಿಷ್ಟುಪ್ಛಂದಸ

---

ಮಧುಮತ ಇತಿ ಮಧು–ಮತಃ । ಉಪಹೂತಸ್ಯೇತ್ಯುಪ–ಹೂತಸ್ಯ । ಉಪಹೂತ ಇತ್ಯುಪ–ಹೂತಃ । ಭಕ್ಷಯಾಮಿ । ರುದ್ರವದ್ಗಣಸ್ಯೇತಿ ರುದ್ರವತ್–ಗಣಸ್ಯ । ಸೋಮ । ದೇವ । ತೇ । ಮತಿವಿದ ಇತಿ ಮತಿ–ವಿದಃ । ಮಾಧ್ಯಂದಿನಸ್ಯ । ಸವನಸ್ಯ । ತ್ರಿಷ್ಟುಪ್ಛಂದಸ ಇತಿ ತ್ರಿಷ್ಟುಪ್–ಛಂದಸಃ ।

---

| ಮಂತ್ರ | ವಿನಿಯೋಗ |
|---|---|
| ರುದ್ರವದ್ಗಣಸ್ಯ...ಭಕ್ಷಯಾಮಿ ॥ [*ಮಂದ್ರಾಭಿಭೂತಿಃ...ವರ್ಚಸೇ ॥] | ಮಾಧ್ಯಂದಿನಸವನದ ಸೋಮರಸವನ್ನು ಭಕ್ಷಣ ಮಾಡಲು |

---

**ಮಧುಮತಃ**=ಮಧುರರಸವುಳ್ಳ; **ಉಪಹೂತಸ್ಯ** =ಬೇರೆಯವರಿಂದ ಅನುಮತಿ ಕೊಡಲ್ಪಟ್ಟಿರುವ [ನಿನ್ನ/ಸೋಮನ] [ರಸವನ್ನು;] **ಉಪಹೂತಃ**=ಇತರರಿಂದ ಅನುಮತಿಯನ್ನು ಪಡೆದಿರುವ ನಾನು; **ಭಕ್ಷಯಾಮಿ**=ಭಕ್ಷಿಸುತ್ತೇನೆ. ✦***[ಮಂದ್ರಾಭಿಭೂತಿಃ... ವರ್ಚಸೇ]** **ದೇವ ಸೋಮ**=ಸೋಮದೇವನೇ! **ಮತಿವಿದಃ** =ಯಜಮಾನರ ಮನಸ್ಸನ್ನು ತಿಳಿದಿರುವ; **ತೇ**=ನಿನಗೆ ಸಂಬಂಧಿಸಿದ; **ರುದ್ರವದ್ಗಣಸ್ಯ**= ಏಕಾದಶ ರುದ್ರಗಣಕ್ಕೆ ಸಂಬಂಧಿಸಿದ; **ತ್ರಿಷ್ಟುಪ್ಛಂದಸಃ**=ಮಂತ್ರಗಳಲ್ಲಿ ತ್ರಿಷ್ಟುಪ್ಛಂದಸ್ಸನ್ನು ಹೊಂದಿರುವ; **ಮಾಧ್ಯಂದಿನಸ್ಯ ಸವನಸ್ಯ**=ಸೋಮಯಾಗದ ಮಾಧ್ಯಂದಿನಸವನಕ್ಕೆ ಸಂಬಂಧಿಸಿದ;

---

*ಇಲ್ಲಿ 'ಮಂದ್ರಾಭಿಭೂತಿಃ....ವರ್ಚಸೇ' ಎಂಬಲ್ಲಿಯವರೆಗಿನ ಮಂತ್ರಭಾಗದ ಅನುಷಂಗವಿದೆ. ಅದರ ಪ್ರತಿಪದಾರ್ಥ, ತಾತ್ಪರ್ಯವನ್ನು ಹಿಂದೆ ನೀಡಿದ ಮಂತ್ರದಲ್ಲಿ ಹೇಳಲಾಗಿದೆ.

# ಇಂದ್ರಪೀತಸ್ಯ ನರಾಶಗ್ಂಸಪೀತಸ್ಯ ಪಿತೃಪೀತಸ್ಯ ಮಧುಮತ ಉಪಹೂತಸ್ಯೋಪಹೂತೋ ಭಕ್ಷಯಾ

---

ಇಂದ್ರಪೀತಸ್ಯೇತೀಂದ್ರ-ಪೀತಸ್ಯ। ನರಾಶಗ್ಂಸಪೀತಸ್ಯೇತಿ ನರಾಶಗ್ಂಸ-ಪೀತಸ್ಯ। ಪಿತೃಪೀತಸ್ಯೇತಿ ಪಿತೃ-ಪೀತಸ್ಯ। ಮಧುಮತ ಇತಿ ಮಧು-ಮತಃ। ಉಪಹೂತಸ್ಯೇತ್ಯುಪ-ಹೂತಸ್ಯ। ಉಪಹೂತ ಇತ್ಯುಪ-ಹೂತಃ। ಭಕ್ಷಯಾಮಿ।

---

ಇಂದ್ರಪೀತಸ್ಯ ನರಾಶಗ್ಂಸಪೀತಸ್ಯ ಪಿತೃಪೀತಸ್ಯ ಮಧುಮತಃ ಉಪಹೂತಸ್ಯ ಉಪಹೂತಃ ಭಕ್ಷಯಾಮಿ=ಇಂದ್ರದೇವನ, ನರಾಶಂಸಪಿತೃಗಳ, ಪಿತೃದೇವತೆಗಳ ಸೋಮಪಾನವುಳ್ಳ, ಮಧುರರಸವುಳ್ಳ, ಬೇರೆಯವರಿಂದ ಅನುಮತಿ ಕೊಡಲ್ಪಟ್ಟಿರುವ ನಿನ್ನ/ಸೋಮನ ರಸವನ್ನು ಇತರರಿಂದ ಅನುಮತಿಯನ್ನು ಪಡೆದಿರುವ ನಾನು ಭಕ್ಷಿಸುತ್ತೇನೆ.

---

ಆ ವಾಗ್ದೇವಿಯು ನಮಗೆ ಅಭಿಮುಖಳಾಗಿ ಜೊತೆಯಲ್ಲಿರಲಿ. ಆಕೆಯು ನಾಶ ರಹಿತಳು. ತಡೆಯಿಲ್ಲದ ಆರಂಭವುಳ್ಳವಳು. ಯಜ್ಞಗಳಿಗೆ ಕಾರಣೀಭೂತಳು. ಆಕೆಯು ಸೋಮರಸಸೇವನೆಯಿಂದ ತೃಪ್ತಳಾಗಲಿ.

ಎಲ್ಲರನ್ನೂ ಆತ್ಮೀಯರೆಂದು ಭಾವಿಸುವ ಸೋಮದೇವನೇ! ನೀನು ನಮಗೆ ಶಾಂತಿಯನ್ನೂ, ಸುಖವನ್ನೂ, ಮಂಗಳವನ್ನೂ, ವಮನಾದಿಕ್ಲೇಶರಾಹಿತ್ಯವನ್ನೂ ಕೊಡುವವನಾಗಿ ನಮ್ಮನ್ನು ಪ್ರವೇಶಿಸು. ನೀನು ಹಸಿರು ಬಣ್ಣದವನು. ನೀನು ನಮಗೆ ಯಜ್ಞಗಳನ್ನೂ, ಉತ್ಸಾಹವನ್ನೂ, ದೀರ್ಘಾಯುಸ್ಸನ್ನೂ, ಶಾಂತಿಯನ್ನೂ ಕರುಣಿಸು. ನಮ್ಮನ್ನು ವಮನಾದಿಗಳಿಂದ ಭಯಪಡಿಸಬೇಡ. ನಿನ್ನ ತೇಜಸ್ಸಿನಿಂದ ನಮ್ಮ ಮನಸ್ಸು ಅಶಾಂತವಾಗದಂತೆ ಅನುಗ್ರಹಿಸು. ನಿನ್ನ ಅನುಗ್ರಹದಿಂದ ಇಂದ್ರಿಯಶಕ್ತಿಯೂ, ಬಲವೂ, ಧನಸಮೃದ್ಧಿಯೂ, ತೇಜಸ್ಸೂ, ಸುಪುತ್ರಪ್ರಾಪ್ತಿಯೂ ನಮಗೆ ಉಂಟಾಗಲಿ.

ಸೋಮದೇವನೇ! ನೀನು ಶ್ರದ್ಧೆಯಿಂದ ಯಾಗವನ್ನು ಮಾಡುವವರ ಮನಸ್ಸನ್ನು

## –ಮ್ಯಾದಿತ್ಯವದ್ಗಣಸ್ಯ ಸೋಮ ದೇವ ತೇ ಮತಿವಿದ

## ಸ್ತೃತೀಯಸ್ಯ ಸವನಸ್ಯ ಜಗತೀಛಂದಸ

---

ಆದಿತ್ಯವದ್ಗಣಸ್ಯೇತ್ಯಾದಿತ್ಯವತ್–ಗಣಸ್ಯ । ಸೋಮ । ದೇವ । ತೇ । ಮತಿವಿದ ಇತಿ ಮತಿ–ವಿದಃ । ತೃತೀಯಸ್ಯ । ಸವನಸ್ಯ । ಜಗತೀಛಂದಸ ಇತಿ ಜಗತೀ–ಛಂದಸಃ।

---

| ಮಂತ್ರ | ವಿನಿಯೋಗ |
| --- | --- |
| ಆದಿತ್ಯವದ್ಗಣಸ್ಯ...ಭಕ್ಷಯಾಮಿ ॥ [*ಮಂದ್ರಾಭಿಭೂತಿಃ...ವರ್ಚಸೇ ॥] | ತೃತೀಯಸವನದ ಸೋಮರಸವನ್ನು ಭಕ್ಷಣ ಮಾಡಲು |

---

*[ಮಂದ್ರಾಭಿಭೂತಿಃ...ವರ್ಚಸೇ] ದೇವ ಸೋಮ=ಸೋಮದೇವನೇ! ಮತಿ ವಿದಃ=[ಶ್ರದ್ಧೆಯಿಂದ ಯಾಗವನ್ನು ಅನುಷ್ಠಿಸುವ ಯಜಮಾನರ] ಮನಸ್ಸನ್ನು ತಿಳಿದಿರುವ; ತೇ=ನಿನಗೆ ಸಂಬಂಧಿಸಿದ; ಆದಿತ್ಯವದ್ಗಣಸ್ಯ=ದ್ವಾದಶಾದಿತ್ಯಗಣಕ್ಕೆ ಸಂಬಂಧಿಸಿರುವ; ಜಗತೀಛಂದಸಃ=ಜಾಗತಛಂದಸ್ಸಿನ ಮಂತ್ರಗಳುಳ್ಳ; ತೃತೀಯಸ್ಯ ಸವನಸ್ಯ =ತೃತೀಯಸವನಕ್ಕೆ ಸಂಬಂಧಿಸಿದ;

---

ತಿಳಿದಿರುವೆ. ನಿನಗೆ ಸಂಬಂಧಿಸಿದ ಸೋಮಯಾಗದ ಪ್ರಾತಃಸವನಭಾಗವು ಅಷ್ಟವಸುಗಣದೇವತೆಗಳಿಗೆ ಸಂಬಂಧಿಸಿದೆ. ಈ ಯಾಗದಲ್ಲಿ ಇಂದ್ರನೂ, ನರಾಶಂಸ ಪಿತೃಗಳೂ, ಇತರ ಪಿತೃಗಳೂ ಸೋಮರಸಪಾನದಿಂದ ತೃಪ್ತರಾಗಿರುತ್ತಾರೆ. ಈ ಪ್ರಾತಸ್ಸವನದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳಿವೆ. ಈ ಪ್ರಾತಃಸವನದ ಸೋಮಪಾನವು ಇತರರಿಂದ ಅನುಮತಿಸಲ್ಪಟ್ಟಿದೆ. ಬೇರೆಯವರ ಅನುಮತಿಯನ್ನು ಪಡೆದಿರುವ ನಾನು ಈ ಮಧುರವಾದ ಸೋಮರಸವನ್ನು ಭಕ್ಷಿಸುತ್ತೇನೆ.

---

* ಇಲ್ಲಿಯೂ 'ಮಂದ್ರಾಭಿಭೂತಿಃ....ವರ್ಚಸೇ' ಎಂಬ ಅನುಷಂಗವಿದೆ. ಅದರ ಪ್ರತಿಪದಾರ್ಥ–ತಾತ್ಪರ್ಯವನ್ನು ಹಿಂದಿನಂತೆಯೇ ತಿಳಿಯಬೇಕು.

ಇಂದ್ರಪೀತಸ್ಯ ನರಾಶಗ್ಂಸಪೀತಸ್ಯ ಪಿತೃಪೀತಸ್ಯ
ಮಧುಮತ ಉಪಹೂತಸ್ಯೋಪಹೂತೋ ಭಕ್ಷಯಾಮಿ ॥
ಆ ಪ್ಯಾಯಸ್ವ ಸಮೇತು ತೇ ವಿಶ್ವತಸ್ಸೋಮ ವೃಷ್ಣಿಯಮ್ ।
ಭವಾ ವಾಜಸ್ಯ ಸಂಗಥೇ ।

---

ಇಂದ್ರಪೀತಸ್ಯೇತೀಂದ್ರ-ಪೀತಸ್ಯ । ನರಾಶಗ್ಂಸಪೀತಸ್ಯೇತಿ ನರಾಶಗ್ಂಸ-ಪೀತಸ್ಯ । ಪಿತೃಪೀತಸ್ಯೇತಿ ಪಿತೃ-ಪೀತಸ್ಯ । ಮಧುಮತ ಇತಿ ಮಧು-ಮತಃ । ಉಪಹೂತಸ್ಯೇತ್ಯುಪ-ಹೂತಸ್ಯ । ಉಪಹೂತ ಇತ್ಯುಪ-ಹೂತಃ । ಭಕ್ಷಯಾಮಿ ॥ ಏತಿ । ಪ್ಯಾಯಸ್ವ । ಸಮಿತಿ । ಏತು । ತೇ । ವಿಶ್ವತಃ । ಸೋಮ । ವೃಷ್ಣಿಯಮ್ ॥ ಭವ । ವಾಜಸ್ಯ । ಸಂಗಥ ಇತಿ ಸಂ-ಗಥೇ ॥

---

| ಮಂತ್ರ | ವಿನಿಯೋಗ |
|---|---|
| ಆ ಪ್ಯಾಯಸ್ವ...ಸಂಗಥೇ ॥ | ಭಕ್ಷಣಾನಂತರ ಚಮಸಗಳನ್ನು ಪುನಃ ತುಂಬಲು |

---

**ಇಂದ್ರಪೀತಸ್ಯ ನರಾಶಗ್ಂಸಪೀತಸ್ಯ ಪಿತೃಪೀತಸ್ಯ ಮಧುಮತಃ ಉಪಹೂತಸ್ಯ ಉಪಹೂತಃ ಭಕ್ಷಯಾಮಿ**=ಇಂದ್ರದೇವನ, ನರಾಶಂಸಪಿತೃಗಳ, ಪಿತೃದೇವತೆಗಳ ಸೋಮಪಾನವುಳ್ಳ, ಮಧುರರಸವುಳ್ಳ, ಬೇರೆಯವರಿಂದ ಅನುಮತಿ ಕೊಡಲ್ಪಟ್ಟಿರುವ ನಿನ್ನ/ಸೋಮನ ರಸವನ್ನು ಇತರರಿಂದ ಅನುಮತಿಯನ್ನು ಪಡೆದಿರುವ ನಾನು ಭಕ್ಷಿಸುವೆನು.

✦**ಸೋಮ**=ಸೋಮದೇವನೇ! **ಆಪ್ಯಾಯಸ್ವ**=ಸುತ್ತಲೂ ವೃದ್ಧಿ ಹೊಂದು; [ನಿನ್ನ] **ವೃಷ್ಣಿಯಮ್**=ವೀರ್ಯವು; **ವಿಶ್ವತಃ**=ಎಲ್ಲೆಲ್ಲಿಯೂ; **ಸಮೇತು** =ಸೇರಿಕೊಳ್ಳಲಿ; [ನೀನು] **ವಾಜಸ್ಯ**=[ನಮ್ಮ] ಅನ್ನದ; **ಸಂಗಥೇ ಭವ**=ಸಮೃದ್ಧಿಗೆ ನಿಮಿತ್ತನಾಗು.

ಹಿನ್ವ ಮೇ ಗಾತ್ರಾ ಹರಿವೋ ಗಣಾನ್ಮೇ ಮಾ ವಿತೀತೃಷಃ । ಶಿವೋ ಮೇ ಸಪ್ತರ್ಷೀನುಪತಿಷ್ಠಸ್ವ ಮಾ ಮೇಽವಾಙ್ನಾಭಿಮತಿ [(೧೮)ಗಾಃ ।] ಗಾಃ ।

---

ಹಿನ್ವ । ಮೇ । ಗಾತ್ರಾ । ಹರಿವ ಇತಿ ಹರಿ-ವಃ । ಗಣಾನ್ । ಮೇ । ಮಾ । ವೀತಿ । ತೀತೃಷಃ ॥ ಶಿವಃ । ಮೇ । ಸಪ್ತರ್ಷೀನಿತಿ ಸಪ್ತ-ಋಷೀನ್ । ಉಪೇತಿ । ತಿಷ್ಠಸ್ವ । ಮಾ । ಮೇ । ಅವಾಙ್ । ನಾಭಿಮ್ । ಅತೀತಿ । [(೧೮)] ಗಾಃ ॥

---

| ಮಂತ್ರ | ವಿನಿಯೋಗ |
|---|---|
| ಹಿನ್ವ ಮೇ...ನಾಭಿಮತಿ ಗಾಃ ॥ | ಭಕ್ಷಣಾನಂತರ ನಾಭಿದೇಶವನ್ನು ಸ್ಪರ್ಶಿಸಲು |

---

✦**ಹರಿವಃ**=[ಸೋಮ!]=ಹಸಿರು ಬಣ್ಣದ ಸೋಮದೇವನೇ! **ಮೇ ಗಾತ್ರಾ**=ನನ್ನ ಅವಯವಗಳನ್ನು; **ಹಿನ್ವ**=ಸಂತೋಷಪಡಿಸು/ವೃದ್ಧಿಗೊಳಿಸು. **ಮೇ ಗಣಾನ್**=ನನಗೆ ಸಂಬಂಧಿಸಿದ ಪುತ್ರಾದಿಗಳನ್ನು; **ಮಾ ವಿತೀತೃಷಃ**=ಅಮೃತಪಾನದಲ್ಲಿ/ಸೋಮಪಾನದಲ್ಲಿ ಆಸಕ್ತಿಯಿಲ್ಲದವರನ್ನಾಗಿ ಮಾಡಬೇಡ; **ಶಿವಃ**=ಮಂಗಲಕರನಾಗಿ; **ಮೇ ಸಪ್ತ ಋಷೀನ್**=ನನ್ನ ಮುಖ(ಬಾಯಿ), ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗುಗಳು-ಹೀಗೆ ಏಳು ಪ್ರಾಣಸ್ಥಾನಗಳನ್ನು **ಉಪತಿಷ್ಠಸ್ವ**=ಸಂತೋಷಪಡಿಸು. **ಮೇ ನಾಭಿಮ್ ಅತಿ**=ನನ್ನ ಹೊಕ್ಕಳನ್ನು ಅತಿಕ್ರಮಿಸಿ; **ಅವಾಙ್ ಮಾ ಗಾಃ**=ಕೆಳಭಾಗಕ್ಕೆ ಹೋಗಬೇಡ.

---

ಹೇ! ಸೋಮದೇವನೇ! ಈ ಮಾಧ್ಯಂದಿನಸವನವು ಏಕಾದಶ ರುದ್ರಗಣದೇವತೆಗಳಿಗೆ ಸಂಬಂಧಿಸಿದೆ. ಈ ಯಾಗದಲ್ಲಿ ಇಂದ್ರನೂ, ನರಾಶಂಸಪಿತೃಗಳೂ, ಇತರ ಪಿತೃಗಳೂ ಸೋಮರಸಪಾನದಿಂದ ತೃಪ್ತರಾಗಿರುತ್ತಾರೆ. ಈ ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳು ಇವೆ. ಈ ಮಾಧ್ಯಂದಿನಸವನದ ಸೋಮಪಾನವು

ಅಪಾಮ ಸೋಮಮಮೃತಾ ಅಭೂಮಾದರ್ಶ್ಮ ಜ್ಯೋತಿ

ರವಿದಾಮ ದೇವಾನ್ । ಕಿಮಸ್ಮಾನ್ಕೃಣವದರಾತಿಃ ಕಿಮು

ಧೂರ್ತಿರಮೃತ ಮರ್ತ್ಯಸ್ಯ ॥

---

ಅಪಾಮ । ಸೋಮಮ್ । ಅಮೃತಾಃ । ಅಭೂಮ । ಅದರ್ಶ್ಮ । ಜ್ಯೋತಿಃ ।

ಅವಿದಾಮ । ದೇವಾನ್ ॥ ಕಿಮ್ । ಅಸ್ಮಾನ್ । ಕೃಣವತ್ । ಅರಾತಿಃ । ಕಿಮ್ ।

ಉ । ಧೂರ್ತಿಃ । ಅಮೃತ । ಮರ್ತ್ಯಸ್ಯ ॥

---

| ಮಂತ್ರ | ವಿನಿಯೋಗ |
| --- | --- |
| ಅಪಾಮ...ಮರ್ತ್ಯಸ್ಯ ॥ | ಋತ್ವಿಜರು ಸಮಿತ್ಪಾಣಿಗಳಾಗಿ ಉನ್ನೇತಾರನನ್ನು ಮುಂದಿಟ್ಟು ಕೊಂಡು ಹೋಗಲು/ಆದಿತ್ಯೋಪಸ್ಥಾನಕ್ಕಾಗಿ-ಭ.ಭಾ.ಭಾ |

---

✦**ಸೋಮಮ್ ಅಪಾಮ**=ನಾವು ಸೋಮರಸಪಾನವನ್ನು ಮಾಡಿದೆವು; **ಅಮೃತಾಃ ಅಭೂಮ**=ಮರಣರಹಿತರಾದ ದೇವತೆಗಳೇ ಆದೆವು; **ಜ್ಯೋತಿಃ ಆದರ್ಶ್ಮ**= ಜ್ಯೋತಿಃಸ್ವರೂಪನಾದ ಸೂರ್ಯನನ್ನು ನೋಡಿದೆವು; **ದೇವಾನ್ ಅವಿದಾಮ** =ದೇವತೆಗಳನ್ನು ಹೊಂದಿದೆವು; **ಅಮೃತ**=ಅಮೃತಸ್ವರೂಪನಾದ ಸೋಮನೇ! [ಅಮೃತ=ಅಮೃತಾನ್] **ಅಸ್ಮಾನ್**=[ಮರಣವಿಲ್ಲದ]ನಮ್ಮನ್ನು; **ಅರಾತಿಃ**=ಪಾಪ ರೂಪಶತ್ರುವು; **ಕಿಮ್ ಕೃಣವತ್**=ಏನು ಮಾಡೀತು? **ಮರ್ತ್ಯಸ್ಯ ಧೂರ್ತಿಃ**= ಮಾನವನಿಗೆ ಒದಗುವ ಹಿಂಸೆಯು; **ಕಿಮ್ ಉ** ಕೃಣವತ್=ಏನು ಮಾಡಬಲ್ಲುದು?

---

ಇತರರಿಂದ ಅನುಮತಿಸಲ್ಪಟ್ಟಿದೆ. ಬೇರೆಯವರಿಂದ ಅನುಮತಿಯನ್ನು ಪಡೆದಿರುವ ನಾನು ಈ ಮಧುರವಾದ ಸೋಮರಸವನ್ನು ಭಕ್ಷಿಸುತ್ತೇನೆ.

ಈ ತೃತೀಯಸವನವು ದ್ವಾದಶಾದಿತ್ಯಗಣಗಳಿಗೆ ಸಂಬಂಧಿಸಿದೆ. ಈ ಯಾಗದಲ್ಲಿ ಇಂದ್ರನೂ, ನರಾಶಂಸಪಿತೃಗಳೂ, ಇತರ ಪಿತೃಗಳೂ ಸೋಮರಸಪಾನದಿಂದ

## ಯನ್ಮ ಆತ್ಮನೋ ಮಿಂದಾऽಭೂದಗ್ನಿಸ್ತತ್ಪುನ

## ರಾಹಾರ್ಜಾತವೇದಾ ವಿ ಚರ್ಷಣಿಃ ॥

---

ಯತ್ । ಮೇ । ಆತ್ಮನಃ । ಮಿಂದಾ । ಅಭೂತ್ । ಅಗ್ನಿಃ । ತತ್ । ಪುನಃ । ಐತಿ ।

ಅಹಾಃ । ಜಾತವೇದಾ ಇತಿ ಜಾತ–ವೇದಾಃ । ವೀತಿ । ಚರ್ಷಣಿಃ ॥

---

| ಮಂತ್ರ | ವಿನಿಯೋಗ |
|---|---|
| ಯನ್ಮ ಆತ್ಮನೋ...ವಿಚರ್ಷಣಿಃ ॥ | ಆಹವನೀಯದ ಉಪಸ್ಥಾನವನ್ನು ಮಾಡಲು/ ಆಗ್ನೀಧ್ರೀಯ ಹೋಮವನ್ನು ಮಾಡಲು–ಭ.ಭಾ.ಭಾ |

---

✦**ಜಾತವೇದಾಃ**=[ಯಜ್ಞದಲ್ಲಿ] ಸಂಭವಿಸುವ ನ್ಯೂನತೆಗಳನ್ನು ತಿಳಿದಿರುವ; **ವಿಚರ್ಷಣಿಃ**=ಆ ನ್ಯೂನತೆಗಳ ಪರಿಹಾರವನ್ನೂ ಅರಿತಿರುವ; **ಅಗ್ನಿಃ**=ಅಗ್ನಿದೇವನು; **ಯತ್**=ಯಾವ; **ಮೇ**=ನನ್ನ [ಯಜ್ಞದಲ್ಲಿ] **ಆತ್ಮನಃ ಮಿಂದಾ ಅಭೂತ್**= ಯಜ್ಞ ಸ್ವರೂಪದ ಹಿಂಸೆಯಾದ [ಮೇ=ನನ್ನ] ನ್ಯೂನತೆಯು ಸಂಭವಿಸಿದೆಯೋ; **ತತ್ ಪುನಃ ಆ ಅಹಾಃ**=ಆ ಅಂಗವನ್ನು ಪುನಃ ತರಲಿ.[ಆ ನ್ಯೂನತೆಯನ್ನು ಪರಿಹರಿಸಲಿ]

---

ತೃಪ್ತರಾಗಿರುತ್ತಾರೆ. ಈ ತೃತೀಯಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳು ಇವೆ. ಈ ತೃತೀಯಸವನದ ಸೋಮಪಾನವು ಇತರರಿಂದ ಅನುಮತಿಸಲ್ಪಟ್ಟಿದೆ. ಬೇರೆಯವರಿಂದ ಅನುಮತಿಯನ್ನು ಪಡೆದಿರುವ ನಾನು ಈ ಮಧುರವಾದ ಸೋಮ ರಸವನ್ನು ಭಕ್ಷಿಸುತ್ತೇನೆ.

ಆಪ್ಯಾಯನವನ್ನು ಹೊಂದಿರುವ ಚಮಸಗಳಿಗೆ ನಾರಾಶಂಸಗಳೆಂದು ಹೆಸರು.

ಸೋಮನೇ! ನೀನು ಕುಡಿಯಲ್ಪಟ್ಟರೂ ಸಹ ಕ್ಷೀಣಿಸದೆ ಸುತ್ತಲೂ ವೃದ್ಧಿಹೊಂದು. ನಿನ್ನ ವೀರ್ಯವು ಸರ್ವತ್ರ ವ್ಯಾಪಿಸಲಿ/ನಿನ್ನ ಬಲವು ವ್ಯಾಪಿಸಲಿ. ನೀನು ನಮಗೆ ಅನ್ನಸಂಪತ್ತನ್ನು ಕರುಣಿಸು.

ಎಲೈ! ಹರಿತವರ್ಣನಾದ ಸೋಮನೇ! ನೀನು ನನ್ನ ಅವಯವಗಳನ್ನು ಸಂತುಷ್ಟಿಗೊಳಿಸು. ನನ್ನ ಮಕ್ಕಳೇ ಮೊದಲಾದವರು ಆಸಕ್ತಿಯಿಂದ ಮತ್ತೆ ಮತ್ತೆ ಸೋಮಪಾನವನ್ನು

ಪುನರಗ್ನಿಶ್ಚಕ್ಷುರದಾತ್ಪುನರಿಂದ್ರೋ ಬೃಹಸ್ಪತಿಃ । ಪುನರ್ಮೇ ಅಶ್ವಿನಾ ಯುವಂ ಚಕ್ಷುರಾಧತ್ತಮಕ್ಷ್ಯೋಃ ॥

---

ಪುನಃ । ಅಗ್ನಿಃ । ಚಕ್ಷುಃ । ಅದಾತ್ । ಪುನಃ । ಇಂದ್ರಃ । ಬೃಹಸ್ಪತಿಃ ॥ ಪುನಃ । ಮೇ । ಅಶ್ವಿನಾ । ಯುವಮ್ । ಚಕ್ಷುಃ । ಏತಿ । ಧತ್ತಮ್ । ಅಕ್ಷ್ಯೋಃ ॥

---

| ಮಂತ್ರ | ವಿನಿಯೋಗ |
|---|---|
| ಪುನರಗ್ನಿ...ಮಕ್ಷ್ಯೋಃ ॥ | ಆಹವನೀಯೋಪಸ್ಥಾನದಲ್ಲಿ ವೈಕಲ್ಪಿಕವಾದ ಎರಡನೆಯ ಮಂತ್ರ/ಆಗ್ನೀಧ್ರಹೋಮದ ಎರಡನೆಯ ಮಂತ್ರ-ಭ.ಭಾ.ಭಾ |

---

✦ ಅಗ್ನಿಃ=ಅಗ್ನಿದೇವನು; ಪುನಃ ಚಕ್ಷುಃ ಅದಾತ್=ಮತ್ತೆ ಒಳ್ಳೆಯ ಕಣ್ಣನ್ನು ಕೊಟ್ಟನು/ಕೊಡಲಿ; ಪುನಃ ಇಂದ್ರಃ ಚಕ್ಷುಃ ಅದಾತ್=ಇಂದ್ರನು ಮತ್ತೆ ಕಣ್ಣನ್ನು ಕೊಟ್ಟನು/ಕೊಡಲಿ. ಬೃಹಸ್ಪತಿಃ[ಪುನಃ ಚಕ್ಷುಃ ಅದಾತ್]=ಬೃಹಸ್ಪತಿಯೂ ಮತ್ತೆ ಕಣ್ಣನ್ನು ಕೊಟ್ಟನು/ಕೊಡಲಿ. ಅಶ್ವಿನಾ=ಅಶ್ವಿನೀದೇವತೆಗಳೇ! ಯುವಮ್= ನೀವಿಬ್ಬರೂ; ಪುನಃ=ಮತ್ತೆ; ಮೇ ಅಕ್ಷ್ಯೋಃ=ನನ್ನ ಕಣ್ಣುಗುಡ್ಡೆಗಳಲ್ಲಿ; ಚಕ್ಷುಃ ಆ ಧತ್ತಮ್=ದೃಷ್ಟಿಶಕ್ತಿಯನ್ನು ಕರುಣಿಸಿ/[ನೆಲೆಗೊಳಿಸಿರಿ]

---

ಮಾಡುವಂತೆ ಮಾಡು. ನೀನು ಮಂಗಲಕರನಾಗಿ ನನ್ನ ಸಪ್ತಪ್ರಾಣಗಳನ್ನು ತೃಪ್ತಿಪಡಿಸು. ನಾಭಿದೇಶವನ್ನು ಅತಿಕ್ರಮಿಸಿ ದೇಹದ ಕೆಳಭಾಗಕ್ಕೆ ಹೋಗಬೇಡ.

ಸೋಮಪಾನದಿಂದ ದೇವತೆಗಳಾದಂತೆಯೇ ಎಂದು ಹೇಳಿದೆ. ನಾವು ಸೋಮವನ್ನು ಕುಡಿದು ಮರಣರಹಿತರಾಗೋಣ. ಸೂರ್ಯದರ್ಶನವನ್ನು ಮಾಡೋಣ. ಇಂದ್ರಾದಿದೇವತಾಸಾನ್ನಿಧ್ಯವನ್ನು ಪಡೆಯೋಣ. ನಮ್ಮನ್ನು ಪಾಪವು ಏನೂ ಮಾಡಲಾರದು. ಮರಣರಹಿತರಾದ ನಮಗೆ ಮಾನವರಿಗೆ ಒದಗಿ ಬರುವ ಯಾವ ಹಿಂಸೆಯೂ ಏನೂ ಮಾಡಲಾರದು.

ಇಷ್ಟಯಜುಷಸ್ತೇ ದೇವ ಸೋಮ ಸ್ತುತಸ್ತೋಮಸ್ಯ [(೧೯)] ಶಸ್ತೋಕ್ಥಸ್ಯ ಹರಿವತ ಇಂದ್ರಪೀತಸ್ಯ ಮಧುಮತ ಉಪಹೂತಸ್ಯೋಪಹೂತೋ ಭಕ್ಷಯಾಮಿ ।

---

ಇಷ್ಟಯಜುಷ ಇತೀಷ್ಟ-ಯಜುಷಃ । ತೇ । ದೇವ । ಸೋಮ । ಸ್ತುತಸ್ತೋಮಸ್ಯೇತಿ ಸ್ತುತ-ಸ್ತೋಮಸ್ಯ ।(೧೯)। ಶಸ್ತೋಕ್ಥಸ್ಯೇತಿ ಶಸ್ತ-ಉಕ್ಥಸ್ಯ । ಹರಿವತ ಇತಿ ಹರಿ-ವತಃ । ಇಂದ್ರಪೀತಸ್ಯೇತೀಂದ್ರ-ಪೀತಸ್ಯ । ಮಧುಮತ ಇತಿ ಮಧು-ಮತಃ । ಉಪಹೂತಸ್ಯೇತ್ಯುಪ-ಹೂತಸ್ಯ । ಉಪಹೂತ ಇತ್ಯುಪ-ಹೂತಃ । ಭಕ್ಷಯಾಮಿ ॥

---

| ಮಂತ್ರ | ವಿನಿಯೋಗ |
|---|---|
| ಇಷ್ಟಯಜುಷಸ್ತೇ...ಭಕ್ಷಯಾಮಿ ॥ | ಹಾರಿಯೋಜನಭಕ್ಷಣವನ್ನು ಮಾಡಲು |

---

✦**ದೇವ ಸೋಮ**=ಸೋಮದೇವನೇ! **ಇಷ್ಟಯಜುಷಃ**=ಯಜ್ಞಸಾಧನವಾದ ಯಜುರ್ಮಂತ್ರಗಳುಳ್ಳ; **ಸ್ತುತಸ್ತೋಮಸ್ಯ**=ಆವೃತ್ತಿಯುಳ್ಳ ಸಾಮಸ್ತೋತ್ರಮಂತ್ರಗಳುಳ್ಳ; **ಶಸ್ತೋಕ್ಥಸ್ಯ**=ಋಗ್ವೇದದ ಶಸ್ತ್ರಗಳಿಗೆ ಸಂಬಂಧಿಸಿದ ಋಙ್ಮಂತ್ರಗಳುಳ್ಳ; **ಹರಿವತಃ**=ಹಸಿರು ಬಣ್ಣವುಳ್ಳ; **ಇಂದ್ರಪೀತಸ್ಯ**=ಇಂದ್ರನ ಸೋಮಪಾನವುಳ್ಳ; **ಉಪಹೂತಸ್ಯ**=ಬೇರೆಯವರಿಂದ ಅನುಮತಿಯುಳ್ಳ; **ಮಧುಮತಃ**=ಮಧುರರಸವುಳ್ಳ; **ತೇ**=ನಿನ್ನ [ಧಾನಾಮಿಶ್ರವಾದ ಸೋಮರಸವನ್ನು] **ಉಪಹೂತಃ**=ಇತರರಿಂದ ಅನುಮತಿಯನ್ನು ಪಡೆದಿರುವ ನಾನು; **ಭಕ್ಷಯಾಮಿ**=ಭಕ್ಷಿಸುವೆನು.

---

ಅಗ್ನಿದೇವನು ಯಜ್ಞದಲ್ಲಿ ಸಂಭವಿಸುವ *ನ್ಯೂನಾತಿರೇಕಗಳನ್ನೂ, ಅವುಗಳ

---

ಸ್ಮಾರ್ತಕರ್ಮಗಳಲ್ಲಿ:- **ಸ್ಕನ್ನೇ ಚ ಭಿನ್ನೇಽಂತರಿತೇ ಚ ನಷ್ಟೇ । ಕ್ಷಾಮೇ ಚ ದಾಹೇ ಚ ಪವಿತ್ರನಾಶೇ ॥**
**ಸರ್ವತ್ರ ಯನ್ನೇ ಪುನರಗ್ನಿರೇತೇ । ಕುರ್ಯಾಚ್ಚ ಮಿಂದಾಹುತಿಸಂಜ್ಞಕೇ ದ್ವೇ ॥**
ಎಂದು ಪ್ರಾಯಶ್ಚಿತ್ತವಾಗಿ ಹೇಳಿದೆ.

ಆಪೂರ್ಯಾಃ ಸ್ಥಾಮಾ ಪೂರಯತ ಪ್ರಜಯಾ ಚ ಧನೇನ ಚ ।

---

ಆಪೂರ್ಯಾ ಇತ್ಯಾ-ಪೂರ್ಯಾಃ । ಸ್ಥ । ಏತಿ । ಮಾ । ಪೂರಯತ । ಪ್ರಜಯೇತಿ ಪ್ರ-ಜಯಾ । ಚ । ಧನೇನ । ಚ ॥

---

| ಮಂತ್ರ | ವಿನಿಯೋಗ |
|---|---|
| ಆಪೂರ್ಯಾಃ...ಧನೇನ ಚ ॥ | ಉತ್ತರವೇದಿಯಲ್ಲಿ ಶೇಷಗಳನ್ನು ಹಾಕಲು |

---

✦ಆಪೂರ್ಯಾಃ ಸ್ಥ=[ಎಲೈ! ಧಾನಾಶೇಷಗಳೇ!]ನೀವು ಎಲ್ಲೆಡೆಯಲ್ಲಿಯೂ ಪೂರ್ಣರಾಗಿರುತ್ತೀರಿ; ಮಾ=ನನ್ನನ್ನು; ಪ್ರಜಯಾ ಚ=ಪುತ್ರಾದಿಪ್ರಜೆಗಳಿಂದಲೂ; ಧನೇನ ಚ=ಧನದಿಂದಲೂ; ಆ ಪೂರಯತ=ಪೂರ್ಣಗೊಳಿಸಿರಿ.

---

ಪರಿಹಾರವನ್ನೂ ಬಲ್ಲವನು. ಆತನು ಆ ದೋಷಗಳನ್ನು ಪರಿಹರಿಸಿ ಯಜ್ಞವನ್ನು ಸರ್ವಾಂಗಪರಿಪೂರ್ಣವನ್ನಾಗಿ ಮಾಡಲಿ. ಯಜ್ಞವನ್ನು ಪೂರ್ಣಗೊಳಿಸಿಕೊಡಲಿ.

'ಯಜ್ಞಂ ಪರಾಭವಂತಂ ಯಜಮಾನೋಽನು ಪರಾಭವತಿ' ಎಂಬ ವಚನದಂತೆ ಯಜ್ಞದ ನ್ಯೂನತೆಗಳಿಂದ ಯಜಮಾನನು ದೃಷ್ಟಿಹೀನತೆಯೇ ಮೊದಲಾದ ಹಾನಿಯನ್ನು ಹೊಂದುವನು. ಅಗ್ನಿ-ಇಂದ್ರ-ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳು ಈ ಹೋಮ/ಉಪಸ್ಥಾನದಿಂದ ಪ್ರಸನ್ನರಾಗಿ ಯಜ್ಞದ ನ್ಯೂನಾತಿರೇಕಗಳನ್ನು ಪರಿಹರಿಸಿ ಒಳ್ಳೆಯ ಕಣ್ಣುಗಳನ್ನು ಕೊಡಲಿ.

'ಧಾನಾಭಿಃ ಹಾರಿಯೋಜನಂ ಶ್ರೀಣಾತಿ' ಎಂಬುದಾಗಿ ಹಾರಿಯೋಜನಗ್ರಹ ಸೋಮಕ್ಕೆ ಧಾನಾಗಳ[ಹುರಿದ ಯವಧಾನ್ಯ] ಮಿಶ್ರಣವನ್ನು ಹೇಳಲಾಗಿದೆ. ಧಾನಾಗಳ ಸಹಿತವಾದ ಹಾರಿಯೋಜನಗ್ರಹದ ಸೋಮರಸದ ಹೋಮವನ್ನು ಮಾಡಿದ ನಂತರ ಆ ಸೋಮರಸದ ಭಕ್ಷಣದಲ್ಲಿ ಈ ಮಂತ್ರವನ್ನು ಹೇಳಬೇಕು. ಯಜುಸ್ಸು, ಸಾಮ, ಹಾಗೂ ಋಕ್‌ಗಳಿಂದ ಕೂಡಿರುವ ಈ ಸೋಮಯಾಗಕ್ಕೆ ಸಂಬಂಧಿಸಿದ ಮಧುರ ವಾದ ಧಾನಾಮಿಶ್ರವಾಗಿರುವ ಸೋಮರಸವನ್ನು ಕುಡಿಯುತ್ತೇನೆ.

ಏತತ್ತೇ ತತ ಯೇ ಚ ತ್ವಾಮನ್ವೇತತ್ತೇ ಪಿತಾಮಹ

ಪ್ರಪಿತಾಮಹ ಯೇ ಚ ತ್ವಾಮನ್ವತ್ರ ಪಿತರೋ

ಯಥಾಭಾಗಂ ಮಂದಧ್ವಂ

---

ಏತತ್ । ತೇ । ತತ । ಯೇ । ಚ । ತ್ವಾಮ್ । ಅನ್ವಿತಿ । ಏತತ್ । ತೇ । ಪಿತಾಮಹ ।

ಪ್ರಪಿತಾಮಹೇತಿ ಪ್ರ-ಪಿತಾಮಹ । ಯೇ । ಚ । ತ್ವಾಮ್ । ಅನ್ವಿತಿ । ಅತ್ರ । ಪಿತರಃ ।

ಯಥಾಭಾಗಮಿತಿ ಯಥಾ-ಭಾಗಮ್ । ಮಂದಧ್ವಮ್ ।

---

| ಮಂತ್ರ | ವಿನಿಯೋಗ |
|---|---|
| ಏತತ್ತೇ...ಮಂದಧ್ವಮ್ ॥ | ಮೂರು ಧಾನಾಶೇಷಗಳನ್ನು/ಪುರೋಡಾಶಶಕಲಗಳನ್ನು ಕೊಡಲು |

---

✦**ತತ**=ಎಲೈ! ತಂದೆಯೇ; **ಏತತ್**=ಈ ಪುರೋಡಾಶಶಕಲವು; **ತೇ**=ನಿನಗೆ; [ಅನ್ನವಾಗಲಿ] **ಯೇ ಚ ತ್ವಾಮ್ ಅನು**=ನಿನ್ನನ್ನು ಅನುಸರಿಸಿ ಯಾರು ಇರುವರೋ [ಅವರಿಗೂ] ಏತತ್=ಇದು ಅನ್ನವಾಗಲಿ. **ಪಿತಾಮಹ**=ಎಲೈ! ಅಜ್ಜನೇ! **ತೇ ಏತತ್** =ಇದು ನಿನಗೆ ಅನ್ನವಾಗಲಿ; ಯೇ ಚ ತ್ವಾಮ್ ಅನು=ಯಾರು ನಿನ್ನನ್ನು ಅನುಸರಿಸಿರುತ್ತಾರೆಯೋ [ಅವರಿಗೂ]; ಏತತ್=ಇದು ಅನ್ನವಾಗಲಿ; **ಪ್ರಪಿತಾಮಹ**=ಎಲೈ! ಮುತ್ತಜ್ಜನೇ! ತೇ ಏತತ್=ನಿನಗೆ ಇದು ಅನ್ನವಾಗಲಿ; **ಯೇ ಚ ತ್ವಾಮ್ ಅನು**= ಯಾರು ನಿನ್ನನ್ನು ಅನುಸರಿಸಿ ಇರುತ್ತಾರೆಯೋ; ಏತತ್=[ಅವರಿಗೂ] ಇದು ಅನ್ನವಾಗಲಿ; **ಪಿತರಃ**=ಪಿತೃದೇವತೆಗಳೇ! **ಅತ್ರ**=ನೀವು ಈ ಕರ್ಮದಲ್ಲಿ; **ಯಥಾಭಾಗಮ್** =ಸ್ವ ಸ್ವ ಭಾಗಾನುಗುಣವಾಗಿ; **ಮಂದಧ್ವಮ್**=ತೃಪ್ತಿಯನ್ನು ಹೊಂದಿರಿ.

---

ಎಲೈ! ಧಾನಾಶೇಷಗಳೇ! ನೀವು ಎಲ್ಲೆಡೆಯಲ್ಲಿಯೂ ಪೂರ್ಣರಾಗಿರುತ್ತೀರಿ. ನನ್ನನ್ನು ಪ್ರಜಾಸಂಪತ್ತಿನಿಂದಲೂ ಧನಸಂಪತ್ತಿನಿಂದಲೂ ತುಂಬಿಸಿರಿ.

**ನಮೋ ವಃ ಪಿತರೋ ರಸಾಯ ನಮೋ ವಃ ಪಿತರ ಶ್ಶುಷ್ಮಾಯ ನಮೋ ವಃ ಪಿತರೋ ಜೀವಾಯ ನಮೋ ವಃ ಪಿತರಃ [(೨೦)] ಸ್ವಧಾಯೈ ನಮೋ ವಃ ಪಿತರೋ ಮನ್ಯವೇ ನಮೋ ವಃ ಪಿತರೋ ಘೋರಾಯ**

---

ನಮಃ । ವಃ । ಪಿತರಃ । ರಸಾಯ । ನಮಃ । ವಃ । ಪಿತರಃ । ಶುಷ್ಮಾಯ । ನಮಃ । ವಃ । ಪಿತರಃ । ಜೀವಾಯ । ನಮಃ । ವಃ । ಪಿತರಃ ।(೨೦)। ಸ್ವಧಾಯಾ ಇತಿ ಸ್ವ-ಧಾಯೈ । ನಮಃ । ವಃ । ಪಿತರಃ । ಮನ್ಯವೇ । ನಮಃ । ವಃ । ಪಿತರಃ । ಘೋರಾಯ ।

---

| ಮಂತ್ರ | ವಿನಿಯೋಗ |
|---|---|
| **ನಮೋ ವಃ ಪಿತರಃ...ಭೂಯಾಸಮ್ ॥** | ಇವು ಪಿತೃನಮಸ್ಕಾರಮಂತ್ರಗಳು. ಜಪದಲ್ಲಿ ವಿನಿಯುಕ್ತವಾಗಿವೆ. |

---

✦**ಪಿತರಃ**=ಓ ಪಿತೃದೇವತೆಗಳೇ! **ವಃ ರಸಾಯ ನಮಃ**=ನಿಮ್ಮ ಸಾರಕ್ಕೆ ನಮಸ್ಕರಿಸುತ್ತೇನೆ; **ಪಿತರಃ**=ಪಿತೃದೇವತೆಗಳೇ! **ವಃ ಶುಷ್ಮಾಯ ನಮಃ**=ನಿಮ್ಮ ಬಲಕ್ಕೆ ನಮಸ್ಕಾರವು; **ಪಿತರಃ**=ಪಿತೃದೇವತೆಗಳೇ! **ವಃ ಜೀವಾಯ ನಮಃ**=ನಿಮ್ಮ ಜೀವಾತ್ಮನಿಗೆ/ಜೀವನಕ್ಕೆ ನಮಸ್ಕಾರವು; **ಪಿತರಃ**=ಪಿತೃದೇವತೆಗಳೇ! **ವಃ ಸ್ವಧಾಯೈ ನಮಃ**=[ನಿಮಗೆ ಕವ್ಯವನ್ನು ಅರ್ಪಿಸುವ] ಸ್ವಧಾಕಾರಕ್ಕೆ ನಮಸ್ಕಾರ. **ಪಿತರಃ**=ಪಿತೃದೇವತೆಗಳೇ! **ವಃ ಮನ್ಯವೇ ನಮಃ**=ನಿಮ್ಮ ಕೋಪಕ್ಕೆ/ಪ್ರಕಾಶಕ್ಕೆ ನಮಸ್ಕಾರ. **ಪಿತರಃ**=ಹೇ! ಪಿತೃದೇವತೆಗಳೇ! **ವಃ ಘೋರಾಯ ನಮಃ**=[ತಪ್ಪಿತಸ್ಥರನ್ನು ಶಿಕ್ಷಿಸುವ ನಿಮ್ಮ] ಘೋರರೂಪಕ್ಕೆ ನಮಸ್ಕರಿಸುತ್ತೇನೆ;

**ಪಿತರೋ ನಮೋ ವೋ ಯ ಏತಸ್ಮಿಲ್ಲೋಕೇ ಸ್ಥ ಯುಷ್ಮಾಗ್ಂ ಸ್ತೇಽನು ಯೇಽಸ್ಮಿನ್ಲೋಕೇ ಮಾಂ ತೇಽನು ಯ ಏತಸ್ಮಿನ್ಲೋಕೇ ಸ್ಥ ಯೂಯಂ ತೇಷಾಂ ವಸಿಷ್ಠಾ ಭೂಯಾಸ್ತ**

---

ಪಿತರಃ । ನಮಃ । ವಃ । ಯೇ । ಏತಸ್ಮಿನ್ । ಲೋಕೇ । ಸ್ಥ । ಯುಷ್ಮಾನ್ । ತೇ । ಅನ್ವಿತಿ । ಯೇ । ಅಸ್ಮಿನ್ । ಲೋಕೇ । ಮಾಂ । ತೇ । ಅನ್ವಿತಿ । ಯೇ । ಏತಸ್ಮಿನ್ । ಲೋಕೇ । ಸ್ಥ । ಯೂಯಮ್ । ತೇಷಾಮ್ । ವಸಿಷ್ಠಾಃ । ಭೂಯಾಸ್ತ ।

---

**ಪಿತರಃ ವಃ ನಮಃ**=ಪಿತೃಗಳೇ! ನಿಮಗೆ ನಮಸ್ಕಾರ. **ಯೇ ಏತಸ್ಮಿನ್ ಲೋಕೇ ಸ್ಥ**= ಯಾವ ಪಿತೃಗಳು ಅನ್ಯಲೋಕದಲ್ಲಿ ಇರುತ್ತಾರೆಯೋ [ಯಾವ ಅನ್ಯಪಿತೃಗಳೊಡನೆ ಪಿತೃಲೋಕದಲ್ಲಿ ನೀವು ಇರುವಿರೋ] **ತೇ ಯುಷ್ಮಾನ್ ಅನು**[ಸಂತು]=ಅವರು ನಿಮ್ಮನ್ನು ಅನುಸರಿಸಿ ಇರಲಿ; **ಯೇ ಅಸ್ಮಿನ್ ಲೋಕೇ**[ಸಂತಿ]=ಯಾರು ಈ ಲೋಕದಲ್ಲಿರುತ್ತಾರೆಯೋ; **ತೇ ಮಾಮ್ ಅನು**[ಸಂತು]=ಅವರು ನನ್ನನ್ನು ಅನುಸರಿಸಿ ಇರಲಿ; **ಯೇ ಏತಸ್ಮಿನ್ ಲೋಕೇ ಸ್ಥ**=[ಯಾವ ಪಿತೃಗಳೊಡನೆ ನೀವು ಪಿತೃಲೋಕದಲ್ಲಿರುವಿರೋ] **ತೇಷಾಮ್**=ಅವರಿಗೆ; **ಯೂಯಮ್**=ನೀವು; **ವಸಿಷ್ಠಾ ಭೂಯಾಸ್ತ**=ವಾಸಕಾರಣರಾಗಿರಿ/ಶ್ರೇಷ್ಠರಾಗಿರಿ.

---

ಎಲೈ! ತಂದೆಯೇ! ಈ ಪುರೋಡಾಶಶಕಲವು ನಿನಗೂ, ನಿನ್ನನ್ನು ಅನುಸರಿಸಿ ಇರುವವರಿಗೂ ಅನ್ನವಾಗಲಿದೆ ಅಜ್ಜ-ಮುತ್ತಜ್ಜರಿಗೂ ಅವರನ್ನು ಅನುಸರಿಸಿ ಇರುವವರಿಗೂ ಇದು ಅನ್ನವಾಗಲಿ. ಹೇ! ಪಿತೃದೇವತೆಗಳೇ! ನೀವು ಈ ಕರ್ಮದಲ್ಲಿ ನಿಮ್ಮ ನಿಮ್ಮ ಹವಿರ್ಭಾಗವನ್ನು ಹೊಂದಿ ತೃಪ್ತರಾಗಿರಿ.

ರುದ್ರಾಧ್ಯಾಯದಲ್ಲಿ ರುದ್ರನ ಕೋಪಕ್ಕೂ ಬಾಣಾದಿಗಳಿಗೂ ನಮಸ್ಕಾರವೆಂದು ಹೇಳಿರುವಂತೆ ಇಲ್ಲಿ ಪಿತೃದೇವತೆಗಳ ಸಾರ, ಬಲ, ಜೀವ, ಅವರಿಗೆ ಹವಿರ್ದಾನವನ್ನೀಯುವ ಸ್ವಧಾಕಾರ, ಅವರ ಕೋಪ, ದೀಪ್ತಿ, ತಪ್ಪು ಮಾಡಿದವರನ್ನು ಶಿಕ್ಷಿಸುವ ಘೋರರೂಪ- ಇವುಗಳಿಗೆ ನಮಸ್ಕಾರವನ್ನು ಹೇಳಿದೆ. ಅನಂತರ

ಯೇಽಸ್ಮಿನ್ಲ್ಲೋಕೇಽಹಂ ತೇಷಾಂ ವಸಿಷ್ಠೋ ಭೂಯಾಸಂ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ॥ [(೨೧)] ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಗ್ಗ್‌ಂ ಸ್ಯಾಮ ಪತಯೋ ರಯೀಣಾಮ್ ॥

---

ಯೇ । ಅಸ್ಮಿನ್ನ್ । ಲೋಕೇ । ಅಹಮ್ । ತೇಷಾಮ್ । ವಸಿಷ್ಠಃ । ಭೂಯಾಸಮ್ । ಪ್ರಜಾಪತ ಇತಿ ಪ್ರಜಾ-ಪತೇ । ನ । ತ್ವತ್ । ಏತಾನಿ । ಅನ್ಯಃ । ವಿಶ್ವಾ । ಜಾತಾನಿ । ಪರೀತಿ । ತಾ । ಬಭೂವ ।(೨೧)। ಯತ್ಕಾಮಾ ಇತಿ ಯತ್-ಕಾಮಾಃ । ತೇ । ಜುಹುಮಃ । ತತ್ । ನಃ । ಅಸ್ತು । ವಯಮ್ । ಸ್ಯಾಮ । ಪತಯಃ । ರಯೀಣಾಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರಜಾಪತೇ...ರಯೀಣಾಮ್ ॥ | ಋತ್ವಿಜರು ಹಿಂತಿರುಗಿ ಹೋಗಲು/ ಗಾರ್ಹಪತ್ಯೋಪಸ್ಥಾನವನ್ನು ಮಾಡಲು-ಭ.ಭಾ.ಭಾ |

---

**ಯೇ ಅಸ್ಮಿನ್ ಲೋಕೇ**[ಸಂತಿ]=ಈ ಲೋಕದಲ್ಲಿ ಯಾರು ಇರುತ್ತಾರೆಯೋ **ತೇಷಾಮ್ ಅಹಮ್**=ಅವರಿಗೆ ನಾನು; **ವಸಿಷ್ಠಃ ಭೂಯಾಸಮ್**=ವಾಸಾಶ್ರಯ ನಾಗುವೆನು/ಶ್ರೇಷ್ಠನಾಗುವೆನು. ✦**ಪ್ರಜಾಪತೇ**=ಹೇ ಪ್ರಜಾಪತಿದೇವನೇ! **ತ್ವತ್ ಅನ್ಯಃ**=ನಿನಗಿಂತಲೂ ಬೇರೆ ಯಾವನೊಬ್ಬನೂ; **ತಾ**=ಆ; **ಏತಾನಿ ವಿಶ್ವಾ ಜಾತಾನಿ**=ಹುಟ್ಟಿರುವ ಈ ಎಲ್ಲ ಪ್ರಾಣಿಗಳನ್ನೂ; **ನ ಪರಿಬಭೂವ**=ಅಧೀನಪಡಿಸಿ ಕೊಳ್ಳಲಾರನು.[ಅಂತಹ ನಿನ್ನ ಅನುಗ್ರಹದಿಂದ] **ಯತ್ಕಾಮಾಃ ತೇ ಜುಹುಮಃ**= ಯಾವ ಫಲದ ಕಾಮನೆಯಿಂದ ನಿನಗೆ ಹೋಮ ಮಾಡುತ್ತೇವೆಯೋ; **ತತ್ ನಃ ಅಸ್ತು**=ಆ ಫಲವು ನಮಗೆ ಉಂಟಾಗಲಿ; **ವಯಮ್**=ನಾವು; **ರಯೀಣಾಮ್ ಪತಯಃ ಸ್ಯಾಮ**=ಧನಕ್ಕೆ ಸ್ವಾಮಿಗಳಾಗುವಂತಾಗಲಿ; [ಹಾಗೆ ನೀನು ಅನುಗ್ರಹಿಸು]

ದೇವಕೃತಸ್ಯೈನಸೋಽವಯಜನಮಸಿ

ಮನುಷ್ಯಕೃತಸ್ಯೈನಸೋಽವಯಜನಮಸಿ

ಪಿತೃಕೃತಸ್ಯೈನಸೋಽವಯಜನಮ-

---

ದೇವಕೃತಸ್ಯೇತಿ ದೇವ-ಕೃತಸ್ಯ । ಏನಸಃ । ಅವಯಜನಮಿತ್ಯವ-ಯಜನಮ್ । ಅಸಿ । ಮನುಷ್ಯಕೃತಸ್ಯೇತಿ ಮನುಷ್ಯ-ಕೃತಸ್ಯ । ಏನಸಃ । ಅವಯಜನಮಿತ್ಯವ-ಯಜನಮ್ । ಅಸಿ । ಪಿತೃಕೃತಸ್ಯೇತಿ ಪಿತೃ-ಕೃತಸ್ಯ । ಏನಸಃ । ಅವಯಜನಮಿತ್ಯವ-ಯಜನಮ್ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ದೇವಕೃತಸ್ಯ...ಅವಯಜನಮಸಿ ॥ | ಹಾರಿಯೋಜನಭಕ್ಷಣವನ್ನು ಮಾಡಿದವರು ಆಹವನೀಯದಲ್ಲಿ ಶಕಲಹೋಮಗಳನ್ನು ಅನುಷ್ಠಿಸಲು |

---

✦ಎಲೈ! ಶಕಲವೇ! [ಸಮಿಧೆಯೇ!] **ದೇವಕೃತಸ್ಯ ಏನಸಃ**=[ನೀನು ನಾನು] ದೇವತೆಗಳ ವಿಷಯದಲ್ಲಿ ಮಾಡಿರಬಹುದಾದ ಪಾಪಗಳನ್ನು; **ಅವಯಜನಮ್ ಅಸಿ**=ಹೋಗಲಾಡಿಸುವವನಾಗಿದ್ದೀಯೆ. [ಹಾಗೆಯೇ] **ಮನುಷ್ಯಕೃತಸ್ಯ ಏನಸಃ ಅವಯಜನಮ್ ಅಸಿ**=ಮನುಷ್ಯರ ವಿಷಯದಲ್ಲಿ ನಾನು ಮಾಡಿರಬಹುದಾದ ಅಪರಾಧ-ದೋಷಗಳನ್ನು ಹೋಗಲಾಡಿಸತಕ್ಕವನಾಗಿದ್ದೀಯೆ. **ಪಿತೃಕೃತಸ್ಯ ಏನಸಃ ಅವಯಜನಮ್ ಅಸಿ**=ನಾನು ಪಿತೃಗಳ ವಿಷಯದಲ್ಲಿ ಮಾಡಿರಬಹುದಾದ ಅಪರಾಧ-ಪಾಪಗಳನ್ನೂ ದೂರಮಾಡುವವನಾಗಿದ್ದೀಯೆ.

---

**ಸರ್ವಪಿತೃಗಳಿಗೂ ನಮಸ್ಕಾರವನ್ನು ಹೇಳಲಾಗಿದೆ. ಸಾರ ಮುಂತಾದ ಫಲಗಳಿ ಗೋಸ್ಕರ ನಮಸ್ಕಾರವೆಂಬ ಪಕ್ಷಾಂತರವನ್ನು ಭಟ್ಟಭಾಸ್ಕರರು ಹೇಳಿರುತ್ತಾರೆ. ಪಿತೃಗಳ ಅನುಗ್ರಹದಿಂದ ಶ್ರೇಷ್ಠತ್ವವು ಉಂಟಾಗಲೆಂದು ಪ್ರಾರ್ಥಿಸಲಾಗಿದೆ.**

# –ಸ್ವಪ್ಸು ಧೌತಸ್ಯ ಸೋಮ ದೇವ ತೇ ನೃಭಿಸ್ಸುತ ಸ್ಯೇಷ್ಟಯಜುಷಃ ಸ್ತುತಸ್ತೋಮಸ್ಯ ಶಸ್ತೋಕ್ಥಸ್ಯ ಯೋ ಭಕ್ಷೋ ಅಶ್ವಸನಿರ್ಯೋ ಗೋಸನಿಸ್ತಸ್ಯ

---

ಅಪ್ಸ್ವಿತ್ಯಪ್–ಸು । ಧೌತಸ್ಯ । ಸೋಮ । ದೇವ । ತೇ । ನೃಭಿರಿತಿ ನೃ–ಭಿಃ । ಸುತಸ್ಯ । ಇಷ್ಟಯಜುಷ ಇತೀಷ್ಟ–ಯಜುಷಃ । ಸ್ತುತಸ್ತೋಮಸ್ಯೇತಿ ಸ್ತುತ–ಸ್ತೋಮಸ್ಯ ।(೧೯)। ಶಸ್ತೋಕ್ಥಸ್ಯೇತಿ ಶಸ್ತ–ಉಕ್ಥಸ್ಯ । ಯಃ । ಭಕ್ಷಃ । ಅಶ್ವಸನಿರಿತ್ಯಶ್ವ–ಸನಿಃ । ಯಃ । ಗೋಸನಿರಿತಿ ಗೋ–ಸನಿಃ । ತಸ್ಯ ।

---

| ಮಂತ್ರ | ವಿನಿಯೋಗ |
|---|---|
| ಅಪ್ಸು ಧೌತಸ್ಯ...ಭಕ್ಷಯಾಮಿ ॥ | ಆಘ್ರಾಣರೂಪವಾದ ಚಮಸರಸವನ್ನು ಭಕ್ಷಿಸಲು/ ಅವಭೃಥಭಕ್ಷದ ಭಕ್ಷಣವನ್ನು ಮಾಡಲು–ಭ.ಭಾ.ಭಾ |

---

✦**ದೇವ ಸೋಮ**=ಸೋಮದೇವನೇ! **ನೃಭಿಃ**=ಮನುಷ್ಯರಿಂದ; **ಅಪ್ಸು ಧೌತಸ್ಯ**=ನೀರಿನಿಂದ ತೊಳೆಯಲ್ಪಟ್ಟ; **ಸುತಸ್ಯ**=ಅಭಿಷವ ಮಾಡಲ್ಪಟ್ಟ; **ಇಷ್ಟಯಜುಷಃ ಸ್ತುತ ಸ್ತೋಮಸ್ಯ ಶಸ್ತೋಕ್ಥಸ್ಯ**=ಋಗ್ಯಜುಸ್ಸಾಮಮಂತ್ರಯುಕ್ತವಾದ ಯಾಗಕ್ಕೆ ಸಂಬಂಧಿಸಿದ; **ತೇ**=ನಿನ್ನ; **ಯಃ ಭಕ್ಷಃ**=ಯಾವ ಆಘ್ರಾಣರೂಪಭಕ್ಷಣವು; **ಅಶ್ವಸನಿಃ**=ಕುದುರೆಗಳನ್ನು ಕೊಡುತ್ತದೆಯೋ; **ಯಃ ಗೋಸನಿಃ**=ಯಾವುದು ಹಸುಗಳನ್ನು ಕೊಡುತ್ತದೆಯೋ;

---

ಪ್ರಜಾಪತಿಯು ಸೃಷ್ಟಿ–ಪ್ರಳಯಾದಿಗಳಿಗೆ ಸಮರ್ಥನು. ಬೇರೆ ಯಾರೂ ಹಾಗೆ ಮಾಡಲಾರರು. ಆತನ ಅನುಗ್ರಹದಿಂದ ಆತನನ್ನು ಉದ್ದೇಶಿಸಿ ಹೋಮವನ್ನು ಮಾಡುವ/ಆತನನ್ನು ಆರಾಧಿಸುವ ನಮ್ಮ ಕಾಮನೆಗಳೆಲ್ಲವೂ ಕೈಗೂಡಲಿ. ಆತನ ಅನುಗ್ರಹದಿಂದ ನಾವು ಧನವಂತರಾಗುವಂತಾಗಲಿ.

ಎಲೈ! ಶಕಲವೇ! ನಾನು ದೇವ–ಮನುಷ್ಯ–ಪಿತೃಗಳ–ವಿಷಯದಲ್ಲಿ ಮಾಡಿರಬಹುದಾದ

ತೇ ಪಿತೃಭಿರ್ಭಕ್ಷಂಕೃತಸ್ಯೋಪಹೂತಸ್ಯೋಪಹೂತೋ ಭಕ್ಷಯಾಮಿ ॥ ೨೨-5 ॥

[ವಿಶ್ವಚರ್ಷಣೇ ತ್ರಿಷ್ಟುಪ್ಛಂದಸ ಇಂದ್ರಪೀತಸ್ಯ ನರಾಶಗ್ಂಸಪೀತಸ್ಯಾತಿ ಸ್ತುತಸ್ತೋಮಸ್ಯ ಜೀವಾಯ ನಮೋ ವಃ ಪಿತರೋ ಬಭೂವ ಚತುಶ್ಚತ್ವಾರಿಗ್ಂಶಚ್ಚ ॥]

ತೇ । ಪಿತೃಭಿರಿತಿ ಪಿತೃ-ಭಿಃ । ಭಕ್ಷಂಕೃತಸ್ಯೇತಿ ಭಕ್ಷಂ-ಕೃತಸ್ಯ । ಉಪಹೂತಸ್ಯೇತ್ಯುಪ-ಹೂತಸ್ಯ । ಉಪಹೂತ ಇತ್ಯುಪ-ಹೂತಃ । ಭಕ್ಷಯಾಮಿ ॥ ೨೨ ॥

**ಉಪಹೂತಸ್ಯ**=ಇತರರಿಂದ ಅನುಜ್ಞಾತವಾದ; **ಪಿತೃಭಿಃ ಭಕ್ಷಂಕೃತಸ್ಯ**= ಪಿತೃಗಳಿಂದಲೂ ಭಕ್ಷವಾಗಿ ಸ್ವೀಕರಿಸಲ್ಪಟ್ಟ; **ತಸ್ಯ**=ಅದಕ್ಕೆ ಸಂಬಂಧಿಸಿದ; **ತೇ**=ನಿನ್ನ [ಭಾಗವನ್ನು] **ಉಪಹೂತಃ**=ಇತರರಿಂದ ಅನುಜ್ಞಾತನಾದ ನಾನು; **ಭಕ್ಷಯಾಮಿ**= ಆಘ್ರಾಣರೂಪಭಕ್ಷಣವನ್ನು ಮಾಡುತ್ತೇನೆ.

ಅಪರಾಧಗಳನ್ನು ನೀನು ದೂರ ಮಾಡುವವನಾಗಿದ್ದೀಯೆ.

ಈ ಮಂತ್ರದೊಡನೆ ಆಪಸ್ತಂಬರು ಇನ್ನೂ ಮೂರು ಶಾಖಾಂತರದ ಮಂತ್ರಗಳನ್ನು ಹೇಳಿರುತ್ತಾರೆ.

ಇಲ್ಲಿ ಶಕಲಗಳಲ್ಲಿ ಚೈತನ್ಯಾರೋಪವನ್ನು ಮಾಡಲಾಗಿದೆ. ಇಂತಹ ಚೈತನ್ಯಾರೋಪವು ಶ್ರುತಿಯಲ್ಲಿ ಹಲವೆಡೆ ಬಂದಿದೆ.

ಹೇ! ಸೋಮದೇವನೇ! ಮನುಷ್ಯರಿಂದ ತೋಳೆಯಲ್ಪಟ್ಟ, ಯಾಗಕ್ಕೆ ಸಂಬಂಧಿಸಿದ, ಗೋ-ಅಶ್ವಗಳನ್ನು ತಂದೀಯುವ, ಪಿತೃಗಳಿಂದಲೂ ಸ್ವೀಕರಿಸಲ್ಪಟ್ಟ ಈ ನಿನ್ನ ಭಕ್ಷವನ್ನು ನಾನು ಆಘ್ರಾಣರೂಪವಾಗಿ ಅನುಜ್ಞೆಯನ್ನು ಪಡೆದು ಭಕ್ಷಿಸುವೆನು.

ಶ್ರುತಿಯಲ್ಲಿ **'ಅವಘ್ರೇಯಮೇವ । ತನ್ನೇವ ಪ್ರಾಶಿತಂ ನೇವಾಪ್ರಾಶಿತಮ್'** ಎಂದು ಹೇಳಿದೆ [ಅವಘ್ರಾಣವೆಂದರೆ ಪ್ರಾಶನ ಮಾಡಲಿಲ್ಲವೆಂದಲ್ಲ.] ಹೀಗಾಗಿ ಆಘ್ರಾಣವೂ ಭಕ್ಷಣಸಮಾನವಾಗಿರುತ್ತದೆ.

## ವಿನಿಯೋಗಸಂಗ್ರಹ

1ಭಕ್ಷ ಭಕ್ಷಂ ಪ್ರತೀಕ್ಷ್ಯಾಶ್ವಿ2 ಗೃಹೀತ್ವಾ3 ನೃ ಚ ವೀಕ್ಷತೇ ।
4-6ಮಂದ್ರೇತಿ ಭಕ್ಷಯೇತ್ತ್ರೇಧಾ ವಸುರುದ್ರಾದಿಭೇದತಃ ॥
7ಆಪ್ಯಾ ಭಕ್ಷಿತಮಾಪ್ಯಾಯ್ಯ ಹಿನ್ವ8 ನಾಭ್ಯಭಿಮರ್ಶನಮ್ ।
9ಅಪಾಮ ಕೃತ್ವಾಽವಭೃಥಂ ಸಮಾಯಂತ್ಯಪ್ರತೀಕ್ಷಣಮ್ ॥
10ಯನ್ಮೇ ಪುನರ್ಭಜೇದಗ್ನಿಮಿಷ್ಟ್ವಾ11ದ್ಯಾದ್ಧಾರಿಯೋಜನಮ್ ।
12ಆಪೂರ್ವೇ ದ್ಯಾಂ ಶೇಷವಾಪ ಏತತ್ತೇ13ತ್ರಿಭಿರಾವಪೇತ್ ॥
ಪುರೋಡಾಶಾಂಶಕಾನ್ ಭೂಮೌ14-19 ನಮಶ್ಚಮಸಿನಾಂ ಜಪಃ ।
20ಪ್ರಜಾ ಚಮಸಿನೋ ಯಾಂತಿ 21ದೇವವಹ್ನೌ ಸಮಿತ್ತ್ರಯಮ್ ॥
22ಅಪ್ಸು ಜಿಘ್ರಂತಿ ತಚ್ಛೇಷಂ ದ್ವಾವಿಂಶತಿರಿಹೋದಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-22

---

## ಅನುವಾಕದ ವಿಶೇಷ ವಿಷಯಗಳು

### ಅ)ಮೀಮಾಂಸಾ

### ೧) ಭಕ್ಷಾನುವಾಕದ ಮಂತ್ರಗಳ ವಿನಿಯೋಗವು ಹೇಗೆ ? [ಜೈ.ಸೂ.೩.೨]

ಜ್ಯೋತಿಷ್ಟೋಮಯಾಗದಲ್ಲಿ ಸೋಮರಸದ ಹವನವಾದ ಮೇಲೆ **'ಅಭಿಷುತ್ಯಾಽಽಹವನೀಯೇ ಹುತ್ವಾ ಪ್ರತ್ಯಂಚಃ ಪರೇತ್ಯ ಸದಸಿ ಭಕ್ಷಯಂತಿ'** ಎಂಬ ಶ್ರುತಿವಚನದಿಂದ ಸೋಮರಸದ ಶೇಷಭಕ್ಷಣವು ವಿಹಿತವಾಗಿದೆ. **'ಭಕ್ಷೇಹಿ'** ಎಂಬ ಅನುವಾಕಕ್ಕೆ ಭಕ್ಷಾನುವಾಕವೆಂಬ ಸಮಾಖ್ಯೆಯೂ ಇದೆ. ಹೀಗಿರುವಾಗ ಈ ಅನುವಾಕದ ಮಂತ್ರಗಳಿಗೆ ಕೇವಲ ಭಕ್ಷಣದಲ್ಲಿ ಮಾತ್ರ ವಿನಿಯೋಗವೇ? ಅಥವಾ ಭಕ್ಷಣವೆಂಬ ಕ್ರಿಯೆಯು ಗ್ರಹಣ, ನೋಡುವಿಕೆ, ನುಂಗುವಿಕೆ, ಮತ್ತು ಅರಗುವಿಕೆಯೆಂಬ ಕ್ರಿಯೆಗಳಿಂದ ಕೂಡಿರುವುದರಿಂದ ಆ ಕ್ರಿಯೆಗಳಲ್ಲಿಯೂ ಈ ಅನುವಾಕಕ್ಕೆ ವಿನಿಯೋಗವಿದೆಯೇ? ಇದು ಇಲ್ಲಿನ ಸಂಶಯ.

ಈ ಅನುವಾಕದಲ್ಲಿ ಪ್ರತ್ಯಕ್ಷವಾಗಿ ಭಕ್ಷಣಕ್ಕೆ ವಿನಿಯೋಗವಿರುವಂತೆ ಗ್ರಹಣಾದಿಗಳಿಗೆ ಪ್ರತ್ಯಕ್ಷ ವಿನಿಯೋಗವಿಲ್ಲದಿರುವುದರಿಂದ ಅನುವಾಕದ ಮಂತ್ರಗಳನ್ನು ವಿಭಜಿಸಿ ವಿನಿಯೋಗವಿಲ್ಲ. ಇಡೀ ಅನುವಾಕದ ಮಂತ್ರಗಳನ್ನು ಭಕ್ಷಣದಲ್ಲಿ ಮಾತ್ರ ವಿನಿಯೋಗಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಈ ಅನುವಾಕದ ಮಂತ್ರಗಳಲ್ಲಿ 'ಏಹಿ' 'ಸಘ್ಯಾಸಮ್' 'ಅವಖ್ಯೇಷಮ್' 'ಹಿನ್ವ' 'ಮಾ ಮೇ ವಾಙ್ನಾಭಿಮತಿ ಗಾಃ' ಎಂಬ ಮಂತ್ರದ ಅಂಶಗಳು ಗ್ರಹಣ, ಅವೇಕ್ಷಣ, ನಿಗರಣ ಮತ್ತು ಜರಣಗಳನ್ನು ಪ್ರತಿಪಾದಿಸುತ್ತವೆ. ಈ ಕ್ರಿಯೆಗಳು ಇಲ್ಲದೆ ಭಕ್ಷಣಕ್ರಿಯೆಯು ಆಗದು. ಆದರೂ ಅದು ಸಫಲವಾಗುವುದಿಲ್ಲ. ಆದುದರಿಂದ ಅರ್ಥಾನುಗುಣವಾಗಿ ಮಂತ್ರವಿಭಾಗವನ್ನು ಮಾಡಿ ಆಯಾ ಭಾಗಗಳನ್ನು ಅಲ್ಲಲ್ಲಿ ವಿನಿಯೋಗಿಸಬೇಕು.

ಈ ಅನುವಾಕಕ್ಕೆ ಭಕ್ಷಾನುವಾಕವೆಂಬ ಸಮಾಖ್ಯೆಯು ಇದ್ದರೂ 'ಏಹಿ' ಮುಂತಾದ ಮಂತ್ರಲಿಂಗವು ಇರುವುದರಿಂದ ಲಿಂಗವು ಸಮಾಖ್ಯೆಗಿಂತಲೂ ಪ್ರಬಲವಾದು ದರಿಂದ ಅದು ಸಮಾಖ್ಯೆಯನ್ನು ಬಾಧಿಸುತ್ತದೆ.

ಹೀಗಾಗಿ ಈ ಅನುವಾಕದ ಮಂತ್ರಗಳಿಗೆ ವಿಭಾಗದಿಂದ ವಿನಿಯೋಗವಿರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

### ೨) 'ಮಂದ್ರಾಭಿಭೂತಿಃ.....'ಎಂಬಲ್ಲಿ ವಿನಿಯೋಗವು ಹೇಗೆ?

**[ಜೈ.ಸೂ.೩..೨]**

'ಮಂದ್ರಾಭಿಭೂತಿಃ.....ತೃಪ್ಯತು' ಎಂಬ ಮಂತ್ರಭಾಗವು ನಾಲಗೆಯ ರುಚಿಯನ್ನು ವ್ಯಕ್ತಪಡಿಸಿ 'ತೃಪ್ಯತು' ಎಂದು ತೃಪ್ತಿಯನ್ನು ಪ್ರಕಾಶಪಡಿಸುತ್ತದೆ. ಇಲ್ಲಿಯೂ ಸಹ ಮಂತ್ರವನ್ನು ವಿಭಾಗಿಸಿ ವಿನಿಯೋಗಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಭಕ್ಷಣವಿಲ್ಲದೆ ತೃಪ್ತಿಯು ಉಂಟಾಗದು. ಹೀಗಾಗಿ ಭಕ್ಷಣವಿಲ್ಲದೆ ಉಂಟಾದ ತೃಪ್ತಿಯ ಪ್ರಕಾಶಕತ್ವವು ಈ ಮಂತ್ರಕ್ಕೆ ಹೊಂದಿಕೊಳ್ಳುವುದಿಲ್ಲ. ಆದುದರಿಂದ ಈ ಮಂತ್ರವನ್ನು ಭಕ್ಷಣದಲ್ಲಿಯೇ ವಿನಿಯೋಗಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

೩) ಮೈತ್ರಾವರುಣಶೇಷಭಕ್ಷಣವು ಹೇಗೆ? [ಜೈ.ಸೂ.೩.೨]

ಭಕ್ಷಣಮಂತ್ರದಲ್ಲಿ 'ಇಂದ್ರಪೀತಸ್ಯ' ಎಂಬ ಪದವು ಇದೆ. 'ಇಂದ್ರನು ಸ್ವೀಕರಿಸಿದ ಸೋಮರಸದ ಶೇಷವನ್ನು ನಾನು ಸ್ವೀಕರಿಸುವೆನು' ಎಂದು ಇಲ್ಲಿ ಅರ್ಥವಾಗುತ್ತದೆ. ಹೀಗಾಗಿ ಐಂದ್ರಸೋಮರಸಭಕ್ಷಣವು ಸಮಂತ್ರಕವಾಗುತ್ತದೆ. ಮಿತ್ರಾವರುಣದೇವತೆಯು ಸ್ವೀಕರಿಸಿದ ಸೋಮರಸದ ಶೇಷಭಕ್ಷಣಕ್ಕೆ ಮಂತ್ರವಿಲ್ಲವಾದುದರಿಂದ ಅದರ ಭಕ್ಷಣವು ಹೇಗೆ? ಇದು ಇಲ್ಲಿನ **ಸಂಶಯ.**

ಮೈತ್ರಾವರುಣಾದಿಶೇಷಭಕ್ಷಣಕ್ಕೆ ಮಂತ್ರವು ಇಲ್ಲವಾದುದರಿಂದ ಅಮಂತ್ರಕವಾದ ಭಕ್ಷಣ. ಇದು ಇಲ್ಲಿನ ಮೊದಲನೆಯ ಪೂರ್ವಪಕ್ಷ.

'ಇಂದ್ರಪೀತಸ್ಯ' ಎಂಬ ಪದದ ಸ್ಥಾನದಲ್ಲಿ 'ಮಿತ್ರಾವರುಣಪೀತಸ್ಯ' ಎಂದು ಊಹವನ್ನು ಮಾಡಿದರೆ ಆಗ ಮೈತ್ರಾವರುಣಶೇಷಭಕ್ಷಣವೂ ಸಮಂತ್ರಕವಾಗುತ್ತದೆ. ಪ್ರಕೃತಿಯಾಗವಾದ ದರ್ಶ-ಪೂರ್ಣಮಾಸೇಷ್ಟಿಯಲ್ಲಿ 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಸ್ಥಾನದಲ್ಲಿ ಸೌರ್ಯಚರುಯಾಗವನ್ನು ಅನುಷ್ಠಿಸುವಾಗ 'ಸೂರ್ಯಾಯ ಜುಷ್ಟಂ ನಿರ್ವಪಾಮಿ' ಎಂದು ಊಹವನ್ನು ಮಾಡುವಂತೆ ಇಲ್ಲಿಯೂ ಮಾಡಬೇಕು. ಇದು ಇಲ್ಲಿನ ಎರಡನೆಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ;

'ಇಂದ್ರಪೀತಸ್ಯ' ಎಂಬಲ್ಲಿ 'ಇಂದ್ರೇಣ ಪೀತಂ ಯಸ್ಮಿನ್ ತತ್ ಇಂದ್ರಪೀತಂ =ಸವನಮ್' ಎಂದು ಬಹುವ್ರೀಹಿಸಮಾಸವನ್ನು ಆಶ್ರಯಿಸಬೇಕಾಗಿರು ವುದರಿಂದ ಇಂದ್ರಭಕ್ಷಣವುಳ್ಳ ಸವನಕ್ಕೆ ಸಂಬಂಧಿಸಿದ ಎಂಬ ಅರ್ಥವಿರುವುದರಿಂದ ಊಹವನ್ನು ಮಾಡದೇ ಮೈತ್ರಾವರುಣಭಕ್ಷಣಕ್ಕೂ ಈ ಮಂತ್ರವೇ ವಿನಿಯೋಗ ವಾಗುವುದರಿಂದ ಅದು ಸಮಂತ್ರಕಭಕ್ಷಣ.

* ಊಹವಿರುವುದಾದರೆ ಇಂದ್ರನಿಗೆ ಊಹವಿದೆಯೇ? [ಜೈ.ಸೂ.೩.೨] ಎರಡನೆಯ ಪೂರ್ವಪಕ್ಷದಲ್ಲಿ 'ಮಿತ್ರಾವರುಣಪೀತಸ್ಯ' ಎಂಬ ಊಹವಿದೆ ಎಂದು ಹೇಳಲಾಗಿದೆ. ಹಾಗೆ ಒಂದು ವೇಳೆ ಊಹವಿದ್ದರೆ ಹೇಗೆ? ಎಂಬ ಕೃತ್ವಾಚಿಂತಾ ವಿಚಾರವನ್ನೂ ಹೇಳಿದ್ದಾರೆ.

ಮೈತ್ರಾವರುಣಾದಿ ಋತ್ವಿಜರು ಚಮಸಿಗಳು. ವಷಟ್ಕಾರದಿಂದ ಇಂದ್ರನಿಗೆ ಹೋಮವಾದ ಮೇಲೆ ಅನುವಷಟ್ಕಾರವಾದಾಗ ಚಮಸಗಳಲ್ಲಿ ಮತ್ತೆ ತುಂಬಿರುವ ಸೋಮರಸವನ್ನು ಹೋಮ ಮಾಡಬೇಕು. ಇಲ್ಲಿ ಮಿತ್ರಾವರುಣದೇವತೆಗೆ ಊಹ ವಿರುವಂತೆ ಇಂದ್ರನಿಗೂ ಊಹವಿದೆ.

### ೪) ಪಾತ್ನೀವತಭಕ್ಷಣದಲ್ಲಿ ಉಳಿದ ದೇವತೆಗಳನ್ನು ಹೇಳಬೇಕೆ ?

[ಜೈ.ಸೂ.೩.೨]

ಐಂದ್ರವಾಯ್ವಾದಿಗಳು ದ್ವಿದೇವತ್ಯಗಳು. ಈ ಗ್ರಹಗಳಿಂದ ಆದಿತ್ಯಸ್ಥಾಲಿಗೆ ಸೋಮರಸವನ್ನು ಹಾಕಬೇಕು. ಅನಂತರ ಆಗ್ರಯಣಪಾತ್ರಕ್ಕೆ ಹಾಕಬೇಕು. ಆ ಆಗ್ರಯಣಸ್ಥಾಲಿಯಿಂದ ಪಾತ್ನೀವತಗ್ರಹಣವನ್ನು ಮಾಡಬೇಕು. ಆ ಪಾತ್ನೀವತ ಭಕ್ಷಣದಲ್ಲಿ ಇಂದ್ರವಾಯುದೇವತೆಗಳನ್ನೂ ಹೇಳಬೇಕೆ? ಪೂರ್ವಾಧಿಕರಣದಲ್ಲಿ ಮಿತ್ರಾವರುಣದೇವತೆಯೊಡನೆ ಇಂದ್ರನೂ ಉಪಲಕ್ಷಿತನಾಗಿರುವಂತೆ ಇಲ್ಲಿಯೂ ಉಂಟೇ? ಇದು ಇಲ್ಲಿನ ಸಂಶಯ.

ಪೂರ್ವಾಧಿಕರಣದಂತೆ ಇಲ್ಲಿಯೂ ಉಳಿದ ದೇವತೆಗಳನ್ನು ಹೇಳಬೇಕು. ಇದು ಇಲ್ಲಿನ ಪೂರ್ವಪಕ್ಷ.

'ಪಾತ್ನೀವತಮಾಗ್ರಯಣಾದ್ಗೃಹ್ಣಾತಿ' ಎಂಬ ಶ್ರುತಿವಾಕ್ಯದಲ್ಲಿ ಆಗ್ರಯಣ ಸ್ಥಾಲಿಯಿಂದ ಬೇರ್ಪಡಿಸಿದ ಸೋಮರಸವನ್ನು ಪತ್ನೀವಂತದೇವತೆಗಾಗಿಯೇ ಎಂದು ಹೇಳಿರುವುದರಿಂದ ಇತರ ದೇವತೆಗಳಿಗೆ ಗ್ರಹಣವಿಲ್ಲ. ಪೂರ್ವಾಧಿಕರಣ ದಲ್ಲಿ ಐಂದ್ರಶೇಷವಿರುವುದರಿಂದ ಇಂದ್ರನು ಉಪಲಕ್ಷಿತನಾಗಿರುವನೆಂಬ ವಿಶೇಷ ವಿದೆ. ಹೀಗಾಗಿ ಪಾತ್ನೀವತಭಕ್ಷಣದಲ್ಲಿ ಇತರ ದೇವತೆಗಳಿಗೆ ಗ್ರಹಣವಿಲ್ಲ. ಇದು ಇಲ್ಲಿನ ಸಿದ್ಧಾಂತ.

### ೫) ಪಾತ್ನೀವತಗ್ರಹಣದಲ್ಲಿ ತ್ವಷ್ಟೃದೇವತೆಯು ಉಪಲಕ್ಷಿತನೇ?

[ಜೈ.ಸೂ.೩.೨]

ಪಾತ್ನೀವತಮಂತ್ರದಲ್ಲಿ 'ಅಗ್ನಾ ೩.....ತ್ವಷ್ಟ್ರಾ ಸೋಮಂ ಪಿಬ' ಎಂದು ಇರುವುದರಿಂದ ಭಕ್ಷಣಮಂತ್ರದಲ್ಲಿ 'ತ್ವಷ್ಟೃಪೀತಸ್ಯ' ಎಂಬುದಾಗಿ ಗ್ರಹಣವಿದೆಯೇ? ಇದು ಇಲ್ಲಿನ ಸಂಶಯ.

ಪತ್ನೀವಂತನಾದ ಅಗ್ನಿಯೊಡನೆ ತ್ವಷ್ಟೃದೇವತೆಯನ್ನೂ 'ಪಿಬ' ಎಂಬ ಕ್ರಿಯಾ ಪದದೊಡನೆ ಹೇಳಿರುವುದರಿಂದ ಭಕ್ಷಣಮಂತ್ರದಲ್ಲಿ 'ತ್ವಷ್ಟೃಪೀತಸ್ಯ' ಎಂದು ಹೇಳಬೇಕು. ಇದು ಇಲ್ಲಿನ ಪೂರ್ವಪಕ್ಷ.

'ಅಗ್ನಾ ೩....ಪಿಬ' ಎಂಬ ಮಂತ್ರದಲ್ಲಿ ಪತ್ನೀವದಗ್ನಿಯೊಡನೆ ತ್ವಷ್ಟನು ಜೊತೆಯಲ್ಲಿರುತ್ತಾನೆ ಎಂದು ಮಾತ್ರ ಹೇಳಿದೆ. ಜೊತೆಯಲ್ಲಿದ್ದರೂ, ಯಾರ ಜೊತೆಯಲ್ಲಿ ಇರುತ್ತಾರೆಯೋ ಅವರು ಮಾಡುವ ಕ್ರಿಯೆಯೊಡನೆ ಅನ್ವಯ ಇರಲೇ ಬೇಕೆಂಬ ನಿಯಮವಿಲ್ಲ. **'ಸಹೈವ ದಶಭಿಃ ಪುತ್ರೈಃ ಭಾರಂ ವಹತಿ ಗರ್ದಭೀ'** [ಹತ್ತು ಮರಿಗಳ ಜೊತೆಯಲ್ಲಿರುವ ಹೆಣ್ಣು ಕತ್ತೆಯು ಭಾರವನ್ನು ಹೊರುತ್ತದೆ] ಎಂಬಲ್ಲಿ ಭಾರವನ್ನು ಹೊರುವುದು ಗರ್ದಭಿಯು ಮಾತ್ರ ಎಂಬಂತೆ ತ್ವಷ್ಟನು ಜೊತೆ ಯಲ್ಲಿ ಇದ್ದರೂ ಅವನು ದೇವತೆಯಲ್ಲವಾದುದರಿಂದ ಅವನು ಉಪಲಕ್ಷಿತನಲ್ಲ. ಹೀಗಾಗಿ ಭಕ್ಷಣಮಂತ್ರದಲ್ಲಿ ತ್ವಷ್ಟೃದೇವತೆಯನ್ನು ಹೇಳಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

**೬) ಪಾತ್ನೀವತಭಕ್ಷಣಮಂತ್ರದಲ್ಲಿ ಮೂವತ್ತಮೂರು ದೇವತೆಗಳಿಗೆ ಗ್ರಹಣವಿದೆಯೇ? [ಜೈ.ಸೂ.3.2.40]**

ಪಾತ್ನೀವತಯಾಜ್ಯೆಯಲ್ಲಿ 'ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧ ಮಾವಹ ಮಾದಯಸ್ವ' ಎಂದು ಹೇಳಿದೆ. ಹೀಗಾಗಿ ಪಾತ್ನೀವತಭಕ್ಷಣಮಂತ್ರದಲ್ಲಿ ಆ ದೇವತೆಗಳಿಗೂ ಗ್ರಹಣವಿದೆಯೇ? ಇದು ಇಲ್ಲಿನ ಸಂಶಯ.

ಯಾಜ್ಯೆಯಿಂದ ಅರ್ಪಿಸುವ ಹವಿಸ್ಸಿನಿಂದ ಆ ದೇವತೆಗಳು ತೃಪ್ತಿಗೊಳ್ಳಬೇಕಾದುದ ರಿಂದ ಆ ದೇವತೆಗಳನ್ನೂ ಭಕ್ಷಣಮಂತ್ರದಲ್ಲಿ ಸೇರಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಯಜಮಾನನು ಹವಿಸ್ಸಿನಿಂದ ಅಗ್ನಿಯನ್ನು ಸಂತೋಷಪಡಿಸುತ್ತಾನೆ. ಅಗ್ನಿಯು ಆ ದೇವತೆಗಳನ್ನು ತೃಪ್ತಿಪಡಿಸುವವನಾದುದರಿಂದಲೂ ಮಂತ್ರಾರ್ಥವು ಆ ರೀತಿ ಇರುವುದರಿಂದ ಮೂವತ್ತಮೂರು ದೇವತೆಗಳಿಗೆ ಇಲ್ಲಿ ದೇವತ್ವವು ಇಲ್ಲ. ಆದು ದರಿಂದ ಭಕ್ಷಣಮಂತ್ರದಲ್ಲಿ ಆ ದೇವತೆಗಳಿಗೆ ಗ್ರಹಣವಿಲ್ಲ. ಇದು ಇಲ್ಲಿನ ಸಿದ್ಧಾಂತ.

## ೭) ಅನುವಷಟ್ಕಾರದೇವತೆಯಾದ ಅಗ್ನಿಗೆ ಗ್ರಹಣವಿದೆಯೇ ?

[ಜೈ.ಸೂ.೩.೨]

ವಿಕೃತಿಯಾಗದಲ್ಲಿ 'ಸೋಮಸ್ಯಾಗ್ನೇ ವೀಹಿತ್ಯನುಯಜತಿ' ಎಂದು ಹೇಳಿದೆ. ಐಂದ್ರವು ಸಧರ್ಮಕವಾಗಿರುವುದರಿಂದ ಪ್ರಕೃತಿಯಾಗಿದೆ. ಅನುವಷಟ್ಕಾರ ದೇವತೆಯಾದ ಅಗ್ನಿಗೆ ಪ್ರಕೃತಿಯಾದ ಐಂದ್ರರಸಪಾನದಲ್ಲಿ ಗ್ರಹಣವಿಲ್ಲ. 'ಇಂದ್ರಾಯ ಜುಷ್ಟಂ ಗೃಹ್ಣಾತಿ' ಎಂದು ಇಂದ್ರನಿಗೆ ಮಾತ್ರವೇ ಉದ್ದೇಶ್ಯತ್ವವನ್ನು ಹೇಳಿರುವುದರಿಂದ ಅಗ್ನಿಗೆ ಗ್ರಹಣವಿಲ್ಲ.

೮) ಐಂದ್ರಭಿನ್ನಭಕ್ಷಗಳು ಅಮಂತ್ರಕಗಳು ಎಂಬ ಪೂರ್ವಪಕ್ಷವನ್ನು ಇಟ್ಟುಕೊಂಡು ಕೃತ್ವಾಚಿಂತೆಯಿಂದ ಕೂಡಿದ ಮೂರು ಅಧಿಕರಣಗಳ ಮೂರು ಸಿದ್ಧಾಂತಗಳು:-

* ಐಂದ್ರಭಕ್ಷಗಳಿಗೂ ಇತರ ದೇವತಾಭಕ್ಷಗಳಿಗೂ ಪ್ರಕೃತಿ–ವಿಕೃತಿಭಾವವು ಇಲ್ಲದೇ. ಎಲ್ಲವೂ ಸಮಪ್ರಧಾನಗಳಾಗಿರುವುದರಿಂದ ಐಂದ್ರಭಿನ್ನಭಕ್ಷಗಳು ಅಮಂತ್ರಕಗಳು. ಇದು ಮೊದಲನೆಯ ಸಿದ್ಧಾಂತ.
* ಐಂದ್ರಭಕ್ಷವೂ, ಐಂದ್ರಾಗ್ನಭಕ್ಷವೂ ಬೇರೆಬೇರೆಯಾದುದರಿಂದ ದೇವತೆಗಳಿಗೆ ವಿಗ್ರಹಾದಿಪಂಚಕವನ್ನು ಒಪ್ಪದಿರುವುದರಿಂದ ಐಂದ್ರಾಗ್ನಭಕ್ಷವೂ ಅಮಂತ್ರಕವೇ. ಇದು ಎರಡನೆಯ ಸಿದ್ಧಾಂತ.
* ಮಂತ್ರದಲ್ಲಿ 'ಗಾಯತ್ರಛಂದಸಃ' ಎಂದರೆ ಗಾಯತ್ರೀಛಂದಸ್ಸು ಮಾತ್ರವೇ ಇರುವ ಎಂದು ಅರ್ಥವನ್ನು ಮಾಡದೆ ಗಾಯತ್ರೀಛಂದಸ್ಸು ಪ್ರಧಾನವಾಗಿರುವ ಎಂದು ಅರ್ಥ ಮಾಡುವುದರಿಂದ ಐಂದ್ರಭಕ್ಷಣದಲ್ಲಿಯೇ ಮಂತ್ರವು ಉಂಟು. ಇದು ಮೂರನೆಯ ಸಿದ್ಧಾಂತ.



## ॥ ಷಷ್ಠೋಽನುವಾಕಃ ॥

ಮಹೀನಾಂ ಪಯೋಽಸಿ ವಿಶ್ವೇಷಾಂ ದೇವಾನಾಂ
ತನೂರ್ ಋಧ್ಯಾಸಮದ್ಯ ಪೃಷತೀನಾಂ ಗ್ರಹಂ
ಪೃಷತೀನಾಂ ಗ್ರಹೋಽಸಿ

---

ಮಹೀನಾಮ್ । ಪಯಃ । ಅಸಿ । ವಿಶ್ವೇಷಾಮ್ । ದೇವಾನಾಮ್ । ತನೂಃ ।
ಋಧ್ಯಾಸಮ್ । ಅದ್ಯ । ಪೃಷತೀನಾಮ್ । ಗ್ರಹಮ್ । ಪೃಷತೀನಾಮ್ । ಗ್ರಹಃ । ಅಸಿ।

---

ಐದನೆಯ ಅನುವಾಕದಲ್ಲಿ ಸೋಮಭಕ್ಷಮಂತ್ರವು ಉಕ್ತವಾಗಿದೆ. ಈ ಆರನೆಯ ಅನುವಾಕದಲ್ಲಿ ಪೃಷದಾಜ್ಯಮಂತ್ರಗಳು ಇವೆ.

---

| ಮಂತ್ರ | ವಿನಿಯೋಗ |
|---|---|
| ಮಹೀನಾಮ್...ದುಗ್ಧಮ್ ॥ | *ಪೃಷದಾಜ್ಯವನ್ನು ಗ್ರಹಿಸಲು |
| ಮಹೀನಾಮ್...ಗ್ರಹೋಽಸಿ ॥ | ಪೃಷದಾಜ್ಯವನ್ನು ಗ್ರಹಿಸಲು (ಭ,ಭಾ,ಭಾ) |

---

✦ಮಹೀನಾಮ್ ಪಯಃ ಅಸಿ=[ಎಲೈ! ಪೃಷದಾಜ್ಯವೇ!] ನೀನು ಹಸುಗಳ ಹಾಲಾಗಿದ್ದೀಯೆ; ವಿಶ್ವೇಷಾಮ್ ದೇವಾನಾಮ್=ದೇವತೆಗಳೆಲ್ಲರ; ತನೂಃ [ಅಸಿ]= ಶರೀರವೇ/ಶರೀರವೃದ್ಧಿಕರವೇ ಆಗಿರುತ್ತೀಯೆ; ಅದ್ಯ=ಈ ದಿನ; *ಪೃಷತೀನಾಮ್ ಗ್ರಹಮ್=ದೇವಾಶ್ವಗಳ ಗ್ರಹಪಾತ್ರದಂತಿರುವ ನಿನ್ನನ್ನು; ಋಧ್ಯಾಸಮ್= ವೃದ್ಧಿಗೊಳಿಸುತ್ತೇನೆ. ಪೃಷತೀನಾಮ್ ಗ್ರಹಃ ಅಸಿ=ದೇವಾಶ್ವಗಳ ಗ್ರಹವಾಗಿರುವೆ;

---

*ಪೃಷದಾಜ್ಯ=ಮೊಸರು ಮತ್ತು ತುಪ್ಪದ ಮಿಶ್ರಣ. *ಪೃಷತೀ=ದೇವತೆಗಳ ಕುದುರೆ. [ನಿಘಂಟು ೧.೧೫]

ವಿಷ್ಣೋರ್ ಹೃದಯಮಸ್ಯೇಕಮಿಷ ವಿಷ್ಣುಸ್ತ್ವಾಽನು ವಿಚಕ್ರಮೇ ಭೂತಿರ್ದಧ್ನಾ ಘೃತೇನ ವರ್ಧತಾಂ ತಸ್ಯ ಮೇಷ್ಟಸ್ಯ ವೀತಸ್ಯ ದ್ರವಿಣಮಾಗಮ್ಯಾ-

---

ವಿಷ್ಣೋಃ । ಹೃದಯಮ್ । ಅಸಿ । ಏಕಮ್ । ಇಷ । ವಿಷ್ಣುಃ । ತ್ವಾ । ಅನು । ವೀತಿ । ಚಕ್ರಮೇ । ಭೂತಿಃ । ದಧ್ನಾ । ಘೃತೇನ । ವರ್ಧತಾಮ್ । ತಸ್ಯ । ಮಾ । ಇಷ್ಟಸ್ಯ । ವೀತಸ್ಯ । ದ್ರವಿಣಮ್ । ಏತಿ । ಗಮ್ಯಾತ್ ।

---

| ಮಂತ್ರ | ವಿನಿಯೋಗ |
|---|---|
| **ವಿಷ್ಣೋಃ...ವಿಚಕ್ರಮೇ ॥** | ಪೃಷದಾಜ್ಯವನ್ನು ಅಭಿಮಂತ್ರಿಸಲು (ಭ,ಭಾ,ಭಾ) |
| **ಭೂತಿಃ...ಗಮ್ಯಾತ್ ॥** | ಪೃಷದಾಜ್ಯವನ್ನು ತುಂಬಲು (ಭ,ಭಾ,ಭಾ) |

---

✦ **ವಿಷ್ಣೋಃ ಹೃದಯಮ್ ಅಸಿ**=ನೀನು [ಯಜ್ಞಸ್ವರೂಪನಾದ] ವಿಷ್ಣುವಿನ ಹೃದಯವೇ/ವಿಷ್ಣುವಿನ ಪ್ರಿಯನೇ ಆಗಿದ್ದೀಯೆ; **ಇಷ**=ಸರ್ವದೇವತೆಗಳು ಇಷ್ಟಪಡುವ ಪೃಷದಾಜ್ಯವೇ! **ಏಕಮ್ ತ್ವಾಮ್**=ಮುಖ್ಯನಾದ ನಿನ್ನನ್ನು; **ವಿಷ್ಣುಃ**= ಯಜ್ಞ ಸ್ವರೂಪನಾದ ವಿಷ್ಣುವು; **ಅನು ವಿಚಕ್ರಮೇ**=ವಿಶೇಷವಾಗಿ ಸ್ವೀಕರಿಸಿದನು. **ದಧ್ನಾ**= ಮೊಸರಿನಿಂದಲೂ; **ಘೃತೇನ**=ತುಪ್ಪದಿಂದಲೂ; ✦**ಭೂತಿಃ**=ನಿನ್ನ ಮಹಿಮೆಯು; **ವರ್ಧತಾಮ್**=ಅಭಿವೃದ್ಧಿ ಹೊಂದಲಿ; **ತಸ್ಯ**=ಅಂತಹ; **ಇಷ್ಟಸ್ಯ**= ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡಿರುವ; **ವೀತಸ್ಯ**=ದೇವತೆಗಳಿಂದ ಸ್ವೀಕೃತನಾಗಿರುವ; [ನಿನ್ನಿಂದ ಉಂಟಾಗುವ] **ದ್ರವಿಣಮ್**=ಫಲವು; **ಮಾ**=ನನ್ನನ್ನು; **ಆ ಗಮ್ಯಾತ್** =ಹೊಂದಲಿ.

---

ಹೇ ಪೃಷದಾಜ್ಯವೇ! ನೀನು ಹಸುವಿನ ಹಾಲು ಆಗಿರುವೆ. ಹಾಲು ಎಲ್ಲ ದೇವತೆಗಳಿಗೂ ಪುಷ್ಟಿಪ್ರದವಾದುದು. ನಿನ್ನನ್ನು ಈಗ ವೃದ್ಧಿಗೊಳಿಸುತ್ತೇನೆ.

ಜ್ಯೋತಿರಸಿ ವೈಶ್ವಾನರಂ ಪೃಶ್ನಿಯ್ಯೈ ದುಗ್ಧಂ ಯಾವತೀ ದ್ಯಾವಾಪೃಥಿವೀ ಮಹಿತ್ವಾ ಯಾವಚ್ಚ ಸಪ್ತ ಸಿಂಧವೋ ವಿತಸ್ಥುಃ ।

---

ಜ್ಯೋತಿಃ । ಅಸಿ । ವೈಶ್ವಾನರಮ್ । ಪೃಶ್ನಿಯ್ಯೈ । ದುಗ್ಧಮ್ । ಯಾವತೀ ಇತಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಮಹಿತ್ವೇತಿ ಮಹಿ-ತ್ವಾ । ಯಾವತ್ । ಚ । ಸಪ್ತ । ಸಿಂಧವಃ । ವಿತಸ್ಥುರಿತಿ ವಿ-ತಸ್ಥುಃ ॥

---

| | |
|---|---|
| ಜ್ಯೋತಿಃ...ದುಗ್ಧಮ್ ॥ | ದಧಿಗ್ರಹವನ್ನು ಅವೇಕ್ಷಿಸಲು [ಭ. ಭಾ. ಭಾ] |
| ಯಾವತೀ...ಅಸ್ತೃತಮ್ ॥ | ದಧಿಘರ್ಮವನ್ನು ಗ್ರಹಿಸಲು |

---

**ವೈಶ್ವಾನರಮ್ ಜ್ಯೋತಿಃ**=[ಎಲೈ! ಪೃಷದಾಜ್ಯವೇ! ನೀನು] ವಿಶ್ವಕ್ಕೆ ಹಿತವಾಗಿರುವ /ಆದಿತ್ಯಸ್ವರೂಪನಾದ ಜ್ಯೋತಿಃಸ್ವರೂಪನೇ; **ಅಸಿ**=ಆಗಿರುವೆ; [ನೀನು] **ಪೃಶ್ನಿಯ್ಯೈ ದುಗ್ಧಮ್**=ಬಿಳಿಯ ಹಸುವಿನ ಹಾಲಾಗಿರುವೆ. ✦ಇಂದ್ರ=ಇಂದ್ರನೇ! **ದ್ಯಾವಾ ಪೃಥಿವೀ**=ದ್ಯಾವಾಪೃಥಿವಿಗಳು; **ಯಾವತೀ ಮಹಿತ್ವಾ**=ತಮ್ಮ ಮಹಿಮೆಯಿಂದ ಎಷ್ಟು ಪರಿಮಾಣವನ್ನು ಹೊಂದಿವೆಯೋ; **ಸಪ್ತ ಸಿಂಧವಃ**=ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ ಮತ್ತು ಜಲಾರ್ಣವಗಳೆಂಬ ಏಳು ಸಮುದ್ರಗಳು; **ಯಾವತ್ ಚ ವಿತಸ್ಥುಃ**=ಎಲ್ಲಿಯವರೆಗೆ ಇರುತ್ತವೆಯೋ;

---

ನೀನು ದೇವಲೋಕಕ್ಕೆ ಒಯ್ಯುವ ದೇವತೆಗಳ ಕುದುರೆಯೇ ಆಗಿರುವೆ. ನಿನ್ನನ್ನು ದೇವತೆಗಳೆಲ್ಲರೂ ಇಷ್ಟಪಡುತ್ತಾರೆ. ಯಜ್ಞಸ್ವರೂಪನಾದ ವಿಷ್ಣುವಿನ ಹೃದಯವೇ ನೀನು. ವಿಷ್ಣುವು ನಿನ್ನನ್ನು ಮುಖ್ಯನನ್ನಾಗಿ ಸ್ವೀಕರಿಸಿರುತ್ತಾನೆ. ನಿನ್ನ ಮಹಿಮೆಯು ಮೊಸರಿನಿಂದಲೂ, ಆಜ್ಯದಿಂದಲೂ ವೃದ್ಧಿಹೊಂದಲಿ. ದೇವತೆಗಳಿಗಾಗಿ ನಿನ್ನನ್ನು ಹವಿಸ್ಸನ್ನಾಗಿ ಯಾಗದಲ್ಲಿ ಅರ್ಪಿಸುತ್ತೇನೆ. ಇದನ್ನು ದೇವತೆಗಳು ಸ್ವೀಕರಿಸಲಿ. ನೀನು ಆದಿತ್ಯಸ್ವರೂಪನು. ನೀನು ಬಿಳಿಯ ಹಸುಗಳ ಹಾಲಿನಿಂದ ಉಂಟಾಗಿರುವೆ. ದೇವತೆಗಳ ಅನುಗ್ರಹದಿಂದ ನನಗೆ ಫಲಗಳು ಉಂಟಾಗಲಿ. ನಿನ್ನನ್ನು ಈ ಪೃಷದಾಜ್ಯಧಾನಿಯಲ್ಲಿ ಗ್ರಹಿಸುವೆನು.

ತಾವಂತಮಿಂದ್ರ ತೇ[ಮಿಂದ್ರ ತೇ(೨೩)]ಗ್ರಹಗ್ಂ

ಸಹೋರ್ಜಾ ಗೃಹ್ಣಾಮ್ಯಸ್ತೃತಮ್ । ಯತ್ಕೃಷ್ಣಶಕುನಃ

ಪೃಷದಾಜ್ಯಮವಮೃಶೇ–

---

ತಾವಂತಮ್ । ಇಂದ್ರ । ತೇ ।(೨೩)। ಗ್ರಹಮ್ । ಸಹ । ಊರ್ಜಾ । ಗೃಹ್ಣಾಮಿ । ಅಸ್ತೃತಮ್ ॥ ಯತ್ । ಕೃಷ್ಣಶಕುನ ಇತಿ ಕೃಷ್ಣ–ಶಕುನಃ । ಪೃಷದಾಜ್ಯಮಿತಿ ಪೃಷತ್–ಆಜ್ಯಮ್ । ಅವಮೃಶೇದಿತ್ಯವ–ಮೃಶೇತ್ ।

---

ತಾವಂತಮ್=ಅಷ್ಟು ದೇಶ–ಕಾಲವ್ಯಾಪಿಯಾದ; ಗ್ರಹಮ್=ದಧಿಗ್ರಹವನ್ನು; ಊರ್ಜಾ ಸಹ=ಸಾರದೊಡನೆ; ತೇ=ನಿನಗಾಗಿ ಅಸ್ತೃತಮ್=ವಿನಾಶವಿಲ್ಲದಂತೆ; ಗೃಹ್ಣಾಮಿ=ತೆಗೆದುಕೊಳ್ಳುತ್ತೇನೆ.

---

**ನಷ್ಟವಾದ ಪೃಷದಾಜ್ಯದ ಸ್ಥಾನದಲ್ಲಿ ಪುನಃ ಪೃಷದಾಜ್ಯಗ್ರಹಣಕ್ಕಾಗಿ ಅರ್ಥವಾದ**

| | |
|---|---|
| ಯತ್ ಕೃಷ್ಣಶಕುನಃ ಪೃಷದಾಜ್ಯಮ್ ಅವಮೃಶೇತ್ | ಒಮ್ಮೆ ಕಾಗೆಯೇ ಮೊದಲಾದ ಕಪ್ಪು ಬಣ್ಣದ ಹಕ್ಕಿಯು ಗ್ರಹಣ ಮಾಡಿರುವ ಪೃಷದಾಜ್ಯವನ್ನು ಮುಟ್ಟಿದರೆ |

---

ಇಂದ್ರನೇ! ಭೂಮಿ–ದ್ಯುಲೋಕಗಳು ಎಷ್ಟು ಪರಿಮಾಣವನ್ನು ಹೊಂದಿವೆಯೋ, *ಸಪ್ತ ಸಾಗರಗಳು ಎಷ್ಟು ಕಾಲದವರೆಗೆ ಇರುತ್ತವೆಯೋ, ಅಷ್ಟು ದೇಶ–ಕಾಲ ವ್ಯಾಪಿಯಾಗಿ ಫಲಪ್ರದವಾದ ದಧಿಗ್ರಹವನ್ನು ನಿನಗಾಗಿ ತೆಗೆದುಕೊಳ್ಳುತ್ತೇನೆ.

---

*ಸಪ್ತ ಸಿಂಧುಗಳು ಶ್ರೀಮದ್ಭಾಗವತದಲ್ಲಿ **'ಕ್ಷಾರೋದೇಕ್ಷುರಸೋದ–ಸುರೋದ–ಘೃತೋದ–ದಧಿ–ಮಂಡೋದ–ಕ್ಷೀರೋದ–ಶುದ್ಧೋದಾಃ'** ಸಪ್ತ ಜಲಧಯಃ, ಎಂದು ಹೇಳಲ್ಪಟ್ಟವೆ. [ಶ್ರೀಮದ್ಭಾಗವತ–5.20.46]

ಚ್ಛೂದ್ರಾ ಅಸ್ಯ ಪ್ರಮಾಯುಕಾಸ್ಸ್ಯುರ್ಯಚ್ಛ್ವಾಽವಮೃಶೇ
ಚ್ಚತುಷ್ಪಾದೋಽಸ್ಯ ಪಶವಃ ಪ್ರಮಾಯುಕಾಸ್ಸ್ಯುರ್ಯತ್ಸ್ಕಂ-
ದೇದ್ಯಜಮಾನಃ ಪ್ರಮಾಯುಕಸ್ಸ್ಯಾತ್ಪಶವೋ ವೈ ಪೃಷದಾಜ್ಯಂ

---

ಶೂದ್ರಾಃ । ಅಸ್ಯ । ಪ್ರಮಾಯುಕಾ ಇತಿ ಪ್ರ-ಮಾಯುಕಾಃ । ಸ್ಯುಃ । ಯತ್ । ಶ್ವಾ । ಅವ
ಮೃಶೇದಿತ್ಯವ-ಮೃಶೇತ್ । ಚತುಷ್ಪಾದ ಇತಿ ಚತುಃ-ಪಾದಃ । ಅಸ್ಯ । ಪಶವಃ ।
ಪ್ರಮಾಯುಕಾ ಇತಿ ಪ್ರ-ಮಾಯುಕಾಃ । ಸ್ಯುಃ । ಯತ್ । ಸ್ಕಂದೇತ್ । ಯಜಮಾನಃ ।
ಪ್ರಮಾಯುಕ ಇತಿ ಪ್ರ-ಮಾಯುಕಃ । ಸ್ಯಾತ್ । ಪಶವಃ । ವೈ । ಪೃಷದಾಜ್ಯಮಿತಿ
ಪೃಷತ್-ಆಜ್ಯಮ್ ।

---

| | |
|---|---|
| ಅಸ್ಯ ಶೂದ್ರಾಃ | ಯಜಮಾನನಿಗೆ ಸಂಬಂಧಿಸಿದ ಶೂದ್ರರೇ |
| ಪ್ರಮಾಯುಕಾಃ ಸ್ಯುಃ | ಮೊದಲಾದ ಜನರು ಸಾಯುತ್ತಾರೆ. |
| ಯತ್ ಶ್ವಾ ಅವಮೃಶೇತ್ | ನಾಯಿಯು ಮುಟ್ಟಿದರೆ |
| ಅಸ್ಯ ಚತುಷ್ಪಾದಃ ಪಶವಃ | ಈ ಯಜಮಾನನ ಹಸುಗಳೇ ಮೊದಲಾದ ನಾಲ್ಕು ಕಾಲಿನ ಪ್ರಾಣಿಗಳು |
| ಪ್ರಮಾಯುಕಾಃ ಸ್ಯುಃ | ಸತ್ತು ಹೋಗುತ್ತವೆ. |
| ಯತ್ ಸ್ಕಂದೇತ್ | ಪೃಷದಾಜ್ಯವು ಚೆಲ್ಲಿ ಹೋದರೆ |
| ಯಜಮಾನಃ | ಯಜಮಾನನು ಸಾಯುತ್ತಾನೆ. |
| ಪ್ರಮಾಯುಕಃ ಸ್ಯಾತ್ | |
| ಪಶವಃ ವೈ | ಪೃಷದಾಜ್ಯವು [ಪಶುಸಾಧನವಾದುದರಿಂದ] |
| ಪೃಷದಾಜ್ಯಮ್ | ಪಶುರೂಪವೇ ಆಗಿದೆ. |

---

ಈ ಮಂತ್ರದಿಂದ ಪ್ರತಿಪ್ರಸ್ಥಾತನು ಸ್ರುಕ್ಕಿನಲ್ಲಿ ದಧಿಗ್ರಹವನ್ನು ಗ್ರಹಿಸುತ್ತಾನೆ.

ಪಶವೋ ವಾ ಏತಸ್ಯ ಸ್ಕಂದಂತಿ ಯಸ್ಯ
ಪೃಷದಾಜ್ಯಗ್ಗ್ಂ ಸ್ಕಂದತಿ ಯತ್ಪೃಷದಾಜ್ಯಂ
ಪುನರ್ಗೃಹ್ಣಾತಿ ಪಶೂನೇವಾಸ್ಮೈ ಪುನರ್ಗೃಹ್ಣಾತಿ

---

ಪಶವಃ । ವೈ । ಏತಸ್ಯ । ಸ್ಕಂದಂತಿ । ಯಸ್ಯ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಸ್ಕಂದತಿ । ಯತ್ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಪುನಃ । ಗೃಹ್ಣಾತಿ । ಪಶೂನ್ । ಏವ । ಅಸ್ಮೈ । ಪುನಃ । ಗೃಹ್ಣಾತಿ ।

---

| | |
|---|---|
| ಯಸ್ಯ ಪೃಷದಾಜ್ಯಮ್ ಸ್ಕಂದತಿ | ಯಾವ ಯಜಮಾನನ ಪೃಷದಾಜ್ಯವು ಚೆಲ್ಲಿ ಹೋಗುತ್ತದೆಯೋ/ ನಷ್ಟವಾಗುತ್ತದೆಯೋ |
| ಏತಸ್ಯ ಪಶವಃ ಸ್ಕಂದಂತಿ ವೈ | ಆ ಯಜಮಾನನ ಪಶುಗಳು ನಷ್ಟವಾಗುತ್ತವೆ. |
| ಯತ್ ಪೃಷದಾಜ್ಯಮ್ ಪುನಃ ಗೃಹ್ಣಾತಿ | ಪೃಷದಾಜ್ಯವನ್ನು ಇಲ್ಲಿ ಹೇಳಿರುವಂತೆ ಮತ್ತೆ ತೆಗೆದುಕೊಂಡರೆ |
| ಅಸ್ಮೈ ಪಶೂನ್ ಏವ ಪುನಃ ಗೃಹ್ಣಾತಿ | ಈ ಯಜಮಾನನಿಗಾಗಿ ಪಶುಗಳನ್ನೇ ಮತ್ತೆ ಪಡೆದಂತಾಗುತ್ತದೆ. |

---

ಇದು ಒಂದು ಪ್ರಾಯಶ್ಚಿತ್ತ. ಯಜಮಾನನ ಪೃಷದಾಜ್ಯವು ಸ್ರುಕ್ಕಿನಲ್ಲಿ/ ಪೃಷದಾಜ್ಯಧಾನಿಯಲ್ಲಿ ಗೃಹೀತವಾಗಿರುತ್ತದೆ. ಅದು ಪಕ್ಷಿಗಳಿಂದ ಅಥವಾ ಶುನಕಾದಿಗಳಿಂದ ಮುಟ್ಟಲ್ಪಟ್ಟು ಯಾಗಾನರ್ಹವಾದರೆ ಅಥವಾ ಚೆಲ್ಲಿ ಹೋದರೆ ಯಜಮಾನನ ಸೇವಕವರ್ಗವೂ, ಪಶುಸಮೂಹವೂ ಮತ್ತು ಯಜಮಾನನೂ ನಾಶ ಹೊಂದುತ್ತಾರೆ. ಏಕೆಂದರೆ ಪೃಷದಾಜ್ಯವು ಪಶುಸ್ವರೂಪವಾಗಿದೆ. ಅದರ ನಾಶದಿಂದ ಸಂಬಂಧಿಸಿದವರ ನಾಶವಾಗುತ್ತದೆ.

ಪ್ರಾಣೋ ವೈ ಪೃಷದಾಜ್ಯಂ ಪ್ರಾಣೋ ವಾ [ವೈ(೨೪)]

ಏತಸ್ಯ ಸ್ಕಂದತಿ ಯಸ್ಯ ಪೃಷದಾಜ್ಯಗ್ಂ ಸ್ಕಂದತಿ

ಯತ್ಪೃಷದಾಜ್ಯಂ ಪುನರ್ಗೃಹ್ಣಾತಿ ಪ್ರಾಣಮೇವಾಸ್ಮೈ

ಪುನರ್ಗೃಹ್ಣಾತಿ

---

ಪ್ರಾಣ ಇತಿ ಪ್ರ-ಅನಃ । ವೈ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಪ್ರಾಣ ಇತಿ ಪ್ರ-ಅನಃ । ವೈ ।(೨೪)] ಏತಸ್ಯ । ಸ್ಕಂದತಿ । ಯಸ್ಯ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಸ್ಕಂದತಿ । ಯತ್ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಪುನಃ । ಗೃಹ್ಣಾತಿ । ಪ್ರಾಣಮಿತಿ ಪ್ರ-ಅನಮ್ । ಏವ । ಅಸ್ಮೈ । ಪುನಃ । ಗೃಹ್ಣಾತಿ ।

---

### ಪ್ರಾಣಸ್ವರೂಪವಾಗಿ ಪೃಷದಾಜ್ಯದ ವರ್ಣನೆ; ವಿಧಿ; ಅರ್ಥವಾದ

| | |
|---|---|
| ಪೃಷದಾಜ್ಯಮ್ ಪ್ರಾಣಃ ವೈ | ಪೃಷದಾಜ್ಯವು ಪ್ರಾಣಸ್ವರೂಪವಷ್ಟೆ. |
| ಯಸ್ಯ ಪೃಷದಾಜ್ಯಮ್ ಸ್ಕಂದತಿ | ಯಾವ ಯಜಮಾನನಿಗೆ ಪೃಷದಾಜ್ಯವು ನಷ್ಟವಾಗುತ್ತದೆಯೋ |
| ಏತಸ್ಯ ಪ್ರಾಣಃ ವೈ ಸ್ಕಂದತಿ | ಈ ಯಜಮಾನನಿಗೆ ಪ್ರಾಣನಾಶವೇ ಒದಗುತ್ತದೆ. |
| ಯತ್ ಪೃಷದಾಜ್ಯಮ್ ಪುನಃ ಗೃಹ್ಣಾತಿ | ಅಧ್ವರ್ಯುವು ಪೃಷದಾಜ್ಯವನ್ನು ಮತ್ತೆ ಗ್ರಹಣ ಮಾಡುವುದರಿಂದ |
| ಅಸ್ಮೈ ಪ್ರಾಣಮ್ ಏವ ಪುನಃ ಗೃಹ್ಣಾತಿ | ಈ ಯಜಮಾನನ ಪ್ರಾಣವನ್ನೇ ಪುನಃ ಪಡೆದವನಾಗುತ್ತಾನೆ. |

ಹಿರಣ್ಯಮವಧಾಯ ಗೃಹ್ಣಾತ್ಯಮೃತಂ ವೈ ಹಿರಣ್ಯಂ
ಪ್ರಾಣಃ ಪೃಷದಾಜ್ಯಮಮೃತಮೇವಾಸ್ಯ ಪ್ರಾಣೇ
ದಧಾತಿ ಶತಮಾನಂ ಭವತಿ

---

ಹಿರಣ್ಯಮ್ । ಅವಧಾಯೇತ್ಯವ-ಧಾಯ । ಗೃಹ್ಣಾತಿ । ಅಮೃತಮ್ । ವೈ । ಹಿರಣ್ಯಮ್ । ಪ್ರಾಣ ಇತಿ ಪ್ರ-ಅನಃ । ಪೃಷದಾಜ್ಯಮಿತಿ ಪೃಷತ್-ಆಜ್ಯಮ್ । ಅಮೃತಮ್ । ಏವ । ಅಸ್ಯ । ಪ್ರಾಣ ಇತಿ ಪ್ರ-ಅನೇ । ದಧಾತಿ । ಶತಮಾನಮಿತಿ ಶತ-ಮಾನಮ್ । ಭವತಿ ।

---

### ಶತಮಾನಪ್ರಮಾಣದ ಹಿರಣ್ಯದ ನಿಧಾನವಿಧಿ; ಪ್ರಶಂಸೆ

| | |
|---|---|
| ಹಿರಣ್ಯಮ್ ಅವಧಾಯ | ಗ್ರಹಣಪಾತ್ರದಲ್ಲಿ ಚಿನ್ನವನ್ನು ಇಟ್ಟು |
| ಗೃಹ್ಣಾತಿ | ಪೃಷದಾಜ್ಯಗ್ರಹಣವನ್ನು ಮಾಡಬೇಕು. [ವಿಧಿ] |
| ಹಿರಣ್ಯಮ್ ಅಮೃತಮ್ ವೈ | ಹಿರಣ್ಯವು ಅಮೃತಸ್ವರೂಪವೇ ಆಗಿದೆ. |
| ಪೃಷದಾಜ್ಯಮ್ ಪ್ರಾಣಃ | ಪೃಷದಾಜ್ಯವು ಪ್ರಾಣಸ್ವರೂಪವಾಗಿದೆ. |
| ಅಸ್ಯ ಪ್ರಾಣೇ ಅಮೃತಮ್ ಏವ ದಧಾತಿ | ಅಧ್ವರ್ಯುವು ಯಜಮಾನನ ಪ್ರಾಣದಲ್ಲಿ ಅಮೃತವನ್ನೇ ಇಟ್ಟವನಾಗುತ್ತಾನೆ. |
| ಶತಮಾನಮ್ ಭವತಿ | ಆ ಹಿರಣ್ಯವು ನೂರು*ಮಾನವುಳ್ಳದ್ದಾಗಿರಬೇಕು. |

---

ಪೃಷದಾಜ್ಯವನ್ನು ಇಲ್ಲಿ ಹೇಳಿರುವಂತೆ ಮತ್ತೆ ತೆಗೆದುಕೊಂಡರೆ ಪಶುಗಳನ್ನೇ ಮತ್ತೆ ಪಡೆದಂತಾಗುತ್ತದೆ. ಪ್ರಾಣಹಾನಿಯೂ ಆಗುವುದಿಲ್ಲ.

---

*ಗುಲಗಂಜೀ ತೂಕವಿರಬಹುದು.

ಶತಾಯುಃ ಪುರುಷಶ್ಶತೇಂದ್ರಿಯ

ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠತ್ಯಶ್ವಮವಘ್ರಾಪಯತಿ

ಪ್ರಾಜಾಪತ್ಯೋ ವಾ ಅಶ್ವಃ ಪ್ರಾಜಾಪತ್ಯಃ ಪ್ರಾಣ-

---

ಶತಾಯುರಿತಿ ಶತ-ಆಯುಃ । ಪುರುಷಃ । ಶತೇಂದ್ರಿಯ ಇತಿ ಶತ-ಇಂದ್ರಿಯಃ । ಆಯುಷಿ । ಏವ । ಇಂದ್ರಿಯೇ । ಪ್ರತೀತಿ । ತಿಷ್ಠತಿ । ಅಶ್ವಮ್ । ಅವೇತಿ । ಘ್ರಾಪಯತಿ । ಪ್ರಾಜಾಪತ್ಯ ಇತಿ-ಪ್ರಾಜಾ-ಪತ್ಯಃ । ವೈ । ಅಶ್ವಃ । ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ । ಪ್ರಾಣ ಇತಿ ಪ್ರ-ಅನಃ ।

---

| | |
|---|---|
| ಶತಾಯುಃ ಪುರುಷಃ | ಪುರುಷನು ನೂರು ವರ್ಷಗಳ ಆಯುಸ್ಸುಳ್ಳವನು. |
| ಶತೇಂದ್ರಿಯಃ | ನೂರು ವರ್ಷಗಳು ಇಂದ್ರಿಯಶಕ್ತಿಯನ್ನು ಹೊಂದಿರುವನು. |
| ಆಯುಷಿ ಏವ ಇಂದ್ರಿಯೇ ಪ್ರತಿತಿಷ್ಠತಿ | [ಶತಮಾನ ಹಿರಣ್ಯನಿಧಾನದಿಂದ]ಯಜಮಾನನು ನೂರು ವರ್ಷಗಳ ಆಯುಸ್ಸನ್ನೂ, ಇಂದ್ರಿಯಶಕ್ತಿಯನ್ನೂ ಪಡೆದು ಪ್ರತಿಷ್ಠಿತನಾಗಿ ಬಾಳುತ್ತಾನೆ. |

### ಅಶ್ವಾವಘ್ರಾಪಣವಿಧಿ; ಅದರ ಪ್ರಶಂಸೆ

| | |
|---|---|
| ಅಶ್ವಮ್ ಅವಘ್ರಾಪಯತಿ | ಆ ಪೃಷದಾಜ್ಯವನ್ನು ಕುದುರೆಯು ಮೂಸಿ ನೋಡುವಂತೆ ಮಾಡಬೇಕು. [ವಿಧಿ] |
| ಅಶ್ವಃ ಪ್ರಾಜಾಪತ್ಯಃ ವೈ | ಕುದುರೆಯು ಪ್ರಾಜಾಪತ್ಯವಾಗಿದೆ.* |
| ಪ್ರಾಣಃ ಪ್ರಾಜಾಪತ್ಯಃ | ಪ್ರಾಣವೂ ಪ್ರಜಾಪತಿಸಂಬಂಧಿಯಾಗಿದೆ.* |

---

*ಕುದುರೆಯು ಪ್ರಜಾಪತಿಯ ಕಣ್ಣಿನಿಂದ ಹುಟ್ಟಿದೆ.

*[ಶ್ರುತಿ] ಸ ಪ್ರಾಣಮಸೃಜತ [ಸಃ=ಪ್ರಜಾಪತಿಃ] ಪ್ರಜಾಪತಿಯು ಪ್ರಾಣವನ್ನು ಸೃಷ್ಟಿಸಿದನು.

ಸ್ವಾದೇವಾಸ್ಮೈ ಯೋನೇಃ ಪ್ರಾಣಂ ನಿರ್ಮಿಮೀತೇ ವಿ ವಾ ಏತಸ್ಯ ಯಜ್ಞಶ್ಛಿದ್ಯತೇ ಯಸ್ಯ ಪೃಷದಾಜ್ಯಗ್ಗ್ಂ ಸ್ಕಂದತಿ ವೈಷ್ಣವ್ಯರ್ಚಾ ಪುನರ್ಗೃಹ್ಣಾತಿ ಯಜ್ಞೋ ವೈ ವಿಷ್ಣು–

---

ಸ್ವಾತ್ । ಏವ । ಅಸ್ಮೈ । ಯೋನೇಃ । ಪ್ರಾಣಮಿತಿ ಪ್ರ–ಅನಮ್ । ನಿರಿತಿ । ಮಿಮೀತೇ । ವೀತಿ । ವೈ । ಏತಸ್ಯ । ಯಜ್ಞಃ । ಛಿದ್ಯತೇ । ಯಸ್ಯ । ಪೃಷದಾಜ್ಯಮಿತಿ ಪೃಷತ್–ಆಜ್ಯಮ್ । ಸ್ಕಂದತಿ । ವೈಷ್ಣವ್ಯಾ । ಋಚಾ । ಪುನಃ । ಗೃಹ್ಣಾತಿ । ಯಜ್ಞಃ । ವೈ । ವಿಷ್ಣುಃ ।

---

| | |
|---|---|
| ಅಸ್ಮೈ ಸ್ವಾತ್ ಏವ ಯೋನೇಃ ಪ್ರಾಣಮ್ ನಿರ್ಮಿಮೀತೇ | ಹೀಗೆ ಅಧ್ವರ್ಯುವು ತನ್ನದಾದ ಉತ್ಪತ್ತಿ ಸ್ಥಾನದಿಂದಲೇ ಯಜಮಾನನಿಗೆ ಪ್ರಾಣವನ್ನು ನಿರ್ಮಿಸಿ ಕೊಟ್ಟವನಾಗುತ್ತಾನೆ. |

## ಪೃಷದಾಜ್ಯಗ್ರಹಣದಲ್ಲಿ ವೈಷ್ಣವಮಂತ್ರವಿಧಿ; ಅದರ ಪ್ರಶಂಸೆ

| | |
|---|---|
| ಯಸ್ಯ ಪೃಷದಾಜ್ಯಮ್ ಸ್ಕಂದತಿ | ಯಾವ ಯಜಮಾನನ ಪೃಷದಾಜ್ಯವು ನಷ್ಟವಾಗುವುದೋ |
| ಏತಸ್ಯ ಯಜ್ಞಃ ವಿಚ್ಛಿದ್ಯತೇ ವೈ | ಆ ಯಜ್ಞವು ಮಧ್ಯದಲ್ಲಿಯೇ ವಿಚ್ಛಿನ್ನವಾದಂತಾಗುತ್ತದೆ. |
| ವೈಷ್ಣವ್ಯಾ ಋಚಾ ಪುನಃ ಗೃಹ್ಣಾತಿ | ವಿಷ್ಣುದೇವತಾಕವಾದ **ವಿಷ್ಣೋ ತ್ವಂ ನೋ ಅಂತಮಃ**/*'ಇದಮ್ ವಿಷ್ಣುಃ' ಎಂಬ ಋಕ್ಕಿನಿಂದ ಮತ್ತೆ ಪೃಷದಾಜ್ಯಗ್ರಹಣವನ್ನು ಮಾಡಬೇಕು. |
| ಯಜ್ಞಃ ವಿಷ್ಣುಃ ವೈ | ವಿಷ್ಣುವು ಯಜ್ಞಸ್ವರೂಪನೇ ಆಗಿರುತ್ತಾನೆ. [ಹೀಗಾಗಿ ಈ ಮಂತ್ರದಿಂದ ಪುನರ್ಗ್ರಹಣ ಮಾಡುವುದರಿಂದ] |

---

*ಆಪಸ್ತಂಬಮತ.

ಯ॒ರ್ಜ್ಞೇನ॒ೈವ ಯ॒ಜ್ಞಗ್ಂ ಸಂತನೋತಿ ॥೨೫-6॥

[ತೇ॒ ಪೃ॒ಷ॒ದಾ॒ಜ್ಯಂ ಪ್ರಾ॒ಣೋ ವೈ ಯೋನೇಃ ಪ್ರಾ॒ಣಂ ದ್ವಾವಿಗ್ಂಶತಿಶ್ಚ ॥]

---

ಯ॒ಜ್ಞೇನ । ಏ॒ವ । ಯ॒ಜ್ಞಮ್ । ಸಮಿತಿ । ತ॒ನೋ॒ತಿ॒ ॥೨೫॥

---

| | |
|---|---|
| ಯಜ್ಞೇನ ಏವ ಯಜ್ಞಮ್ ಸಮ್ ತನೋತಿ | ಯಜ್ಞದಿಂದಲೇ ಯಜ್ಞವನ್ನು ಕೂಡಿಸಿದವನಾಗುತ್ತಾನೆ. [ಯಜ್ಞವಿಚ್ಛಿತ್ತಿಯಾಗುವುದಿಲ್ಲ] |

---

ಪೃಷದಾಜ್ಯವು ಪ್ರಾಣಸ್ವರೂಪವಾದುದರಿಂದ ಅದು ನಷ್ಟವಾದರೆ ಯಜಮಾನನಿಗೆ ಪ್ರಾಣಹಾನಿಯೇ ಒದಗುತ್ತದೆ. ಅಧ್ವರ್ಯುವು ಪೃಷದಾಜ್ಯವನ್ನು ಪುನಃ ಗ್ರಹಿಸುವುದರಿಂದ ಯಜಮಾನನಿಗಾಗಿ ಪ್ರಾಣವನ್ನೇ ಪುನಃ ಪಡೆದವನಾಗುತ್ತಾನೆ. ಇಲ್ಲಿ ಪೃಷದಾಜ್ಯವನ್ನು ಪ್ರಾಣಸ್ವರೂಪವಾಗಿ ಹೇಳಲಾಗಿದೆ.

ಪೃಷದಾಜ್ಯವನ್ನು ಗ್ರಹಿಸುವಾಗ ಗ್ರಹಣಪಾತ್ರದಲ್ಲಿ ಚಿನ್ನವನ್ನು ಇಟ್ಟು ಗ್ರಹಿಸಬೇಕು. ಹಿರಣ್ಯವು ಅಮೃತವೇ ಆದುದರಿಂದ ಅದು ನೂರು ಮಾನವುಳ್ಳದ್ದಾಗಿರಬೇಕೆಂಬ ವಿಧಿಯಿರುವುದರಿಂದ ಯಜಮಾನನು ನೂರು ವರ್ಷಗಳು ಆಯುಸ್ಸು ಹಾಗೂ ಇಂದ್ರಿಯಶಕ್ತಿಗಳನ್ನು ಪಡೆದು ಬಾಳುತ್ತಾನೆ.

ಹೀಗೆ ಸಮಾನಸಂಖ್ಯಾಪ್ರಾಶಸ್ತ್ಯವು ಶ್ರುತಿಯಲ್ಲಿ ಹಲವೆಡೆ ವರ್ಣಿತವಾಗಿದೆ.

ಆ ಪೃಷದಾಜ್ಯವನ್ನು ಕುದುರೆಯು ಆಘ್ರಾಣಿಸುವಂತೆ ಮಾಡಬೇಕು. ಕುದುರೆಯು ಪ್ರಜಾಪತಿಯ ಕಣ್ಣಿನಿಂದ ಜನಿಸಿದುದರಿಂದಲೂ, ಪ್ರಜಾಪತಿಯೇ ಪ್ರಾಣವನ್ನು ಸೃಜಿಸಿದುದರಿಂದಲೂ, ಅಶ್ವಾವಘ್ರಾಪಣದಿಂದ ತನ್ನದಾದ ಉತ್ಪತ್ತಿಸ್ಥಾನದಿಂದಲೇ ಯಜಮಾನನಿಗೆ ಅಧ್ವರ್ಯುವು ಪ್ರಾಣವನ್ನು ನಿರ್ಮಿಸುವುದರಿಂದ ಯಜಮಾನನಿಗೆ ಪ್ರಾಣಹಾನಿಯಾಗುವುದಿಲ್ಲ.

ಪೃಷದಾಜ್ಯದ ಸ್ಕನ್ನದೋಷಪ್ರಾಯಶ್ಚಿತ್ತವಾಗಿ ವಿಷ್ಣುದೇವತಾಕವಾದ ಮಂತ್ರದಿಂದ ಪೃಷದಾಜ್ಯಗ್ರಹಣವನ್ನು ಮಾಡಬೇಕು. ವಿಷ್ಣುವು ಯಜ್ಞಸ್ವರೂಪನೇ. ಹೀಗೆ ಯಜ್ಞದಿಂದಲೇ ಯಜ್ಞವನ್ನು ಕೂಡಿಸಿದಂತಾಗಿ ಯಜ್ಞವಿಚ್ಛಿತ್ತಿಯಾಗುವುದಿಲ್ಲ.

# ವಿನಿಯೋಗಸಂಗ್ರಹ

[1]ಮಹೀತಿ ಪೃಷದಾಜ್ಯೇ ಸ್ಯಾದ್ಯಾವತೀತಿ[2] ದಧಿಗ್ರಹೇ ।
[3]ಇದಂ ವಿಷ್ಣುರ್ವೈಷ್ಣವೀ ಸ್ಯಾದಿಹ ಮಂತ್ರಾಸ್ತ್ರಯೋ ಮತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–3, ಭ.ಭಾ.ಭಾ–6

## ॥ ಸಪ್ತಮೋಽನುವಾಕಃ ॥

**ದೇವ ಸವಿತರೇತತ್ತೇ ಪ್ರಾಹ ತತ್ಪ್ರ ಚ ಸುವ ಪ್ರ ಚ**

**ಯಜ ಬೃಹಸ್ಪತಿರ್ಬ್ರಹ್ಮಾಽಽಯುಷ್ಮತ್ಯಾ ಋಚೋ**

---

ದೇವ । ಸವಿತಃ । ಏತತ್ । ತೇ । ಪ್ರೇತಿ । ಆಹ । ತತ್ । ಪ್ರೇತಿ । ಚ । ಸುವ । ಪ್ರೇತಿ । ಚ । ಯಜ । ಬೃಹಸ್ಪತಿಃ । ಬ್ರಹ್ಮಾ । ಆಯುಷ್ಮತ್ಯಾಃ । ಋಚಃ ।

---

ಆರನೆಯ ಅನುವಾಕದಲ್ಲಿ ಪೃಷದಾಜ್ಯಮಂತ್ರಗಳು ಮತ್ತು ದಧಿಗ್ರಹಮಂತ್ರಗಳು ಹೇಳಲ್ಪಟ್ಟಿವೆ. ಈ ಏಳನೆಯ ಅನುವಾಕದಲ್ಲಿ ಸ್ತೋತ್ರ-ಶಸ್ತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ದೇವ ಸವಿತಃ...ಪ್ರಸವೇ ॥ | ಬ್ರಹ್ಮನು ಸ್ತೋತ್ರಕ್ಕೆ ಅನುಜ್ಞೆಯನ್ನು ಕೊಡಲು |

---

✦**ದೇವ ಸವಿತಃ**=ಎಲ್ಲಕ್ಕೂ ಅನುಮತಿಯನ್ನು ನೀಡುವ ಸವಿತೃದೇವನೇ! **ಏತತ್ ತೇ ಪ್ರಾಹ**=[ಉದ್ಗಾತೃವು **'ಸ್ತೋಷ್ಯಾಮಃ'** ಎಂಬ ವಾಕ್ಯವನ್ನು] ನಿನ್ನನ್ನು ಕುರಿತು ಹೇಳಿರುತ್ತಾನೆ. **ತತ್ ಪ್ರ ಸುವ ಚ**=ಆ ಸ್ತೋತ್ರವನ್ನು ನೀನು ಚೆನ್ನಾಗಿ ಅನುಮತಿಸು; **ಪ್ರ ಯಜ ಚ**=ಯಾಗವು ಚೆನ್ನಾಗಿ ನಡೆಯುವಂತೆ ಮಾಡು; [ಉದ್ಗಾತೃಗಳೇ!] **ಬೃಹಸ್ಪತಿಃ ಬ್ರಹ್ಮಾ**=ಬೃಹಸ್ಪತಿಸ್ವರೂಪನಾದ ಬ್ರಹ್ಮನಾಗಿ [ನಾನು ಈ ಮಾತನ್ನು ಹೇಳುತ್ತಿದ್ದೇನೆ] **ಆಯುಷ್ಮತ್ಯಾಃ ಋಚಃ**=ಯಜ್ಞದ ಆಯುಃಸ್ವರೂಪವಾಗಿರುವ ಋಕ್ಕಿನ ಅಕ್ಷರಗಳ ವಿಷಯದಲ್ಲಿಯೂ;

---

ಆಪಸ್ತಂಬ ಶ್ರೌತಸೂತ್ರದಲ್ಲಿ **'ಬ್ರಹ್ಮನ್ ಸ್ತೋಷ್ಯಾಮಃ ಪ್ರಶಾಸ್ತರಿತ್ಯುಚ್ಯಮಾನೇ**

## ಮಾ ಗಾತ ತನೂಪಾಥ್ಸಾಮ್ನಸ್ಸತ್ಯಾ ವ ಆಶಿಷಃ ಸಂತು ಸತ್ಯಾ ಆಕೂತಯ ಋತಂ ಚ ಸತ್ಯಂ ಚ ವದತ ಸ್ತುತ ದೇವಸ್ಯ ಸವಿತುಃ ಪ್ರಸವೇ ಸ್ತುತಸ್ಯ ಸ್ತುತಮಸ್ಯೂರ್ಜಂ ಮಹ್ಯಗ್ಂ

ಮಾ । ಗಾತ । ತನೂಪಾದಿತಿ ತನೂ–ಪಾತ್ । ಸಾಮ್ನಃ । ಸತ್ಯಾಃ । ವಃ । ಆಶಿಷ ಇತ್ಯಾ–ಶಿಷಃ । ಸಂತು । ಸತ್ಯಾಃ । ಆಕೂತಯ ಇತ್ಯಾ–ಕೂತಯಃ । ಋತಮ್ । ಚ । ಸತ್ಯಮ್ । ಚ । ವದತ । ಸ್ತುತ । ದೇವಸ್ಯ । ಸವಿತುಃ । ಪ್ರಸವ ಇತಿ ಪ್ರ–ಸವೇ । ಸ್ತುತಸ್ಯ । ಸ್ತುತಮ್ । ಅಸಿ । ಊರ್ಜಮ್ । ಮಹ್ಯಮ್ ।

| ಮಂತ್ರ | ವಿನಿಯೋಗ |
| --- | --- |
| ಸ್ತುತಸ್ಯ...ಗಮ್ಯಾತ್ ॥ | ಸ್ತೋತ್ರಕ್ಕೆ ಯಜಮಾನನು ಅನುಮತಿಯನ್ನು ನೀಡಲು |

**ತನೂಪಾತ್ ಸಾಮ್ನಃ**=ಯಜ್ಞದ ದೇಹರೂಪವಾದ ಋಕ್ಕನ್ನು ಅಭಿವ್ಯಕ್ತಿಗೊಳಿಸುವ ಸಾಮದ ವಿಷಯದಲ್ಲಿಯೂ; **ಮಾ ಗಾತ**=ತಪ್ಪದಿರಿ. **ವಃ ಆಶಿಷಃ**=[ಸ್ತೋತ್ರಗಳಲ್ಲಿ] ನೀವು ಹೇಳುವ ಯಜಮಾನನ ಶುಭಾಶಂಸನೆಗಳು; **ಸತ್ಯಾಃ ಸಂತು**=ಸತ್ಯವಾಗಲಿ; **ಆಕೂತಯಃ ಸತ್ಯಾಃ** ಸಂತು=ಯಜಮಾನನ ಸಂಕಲ್ಪಗಳೂ ಸತ್ಯವಾಗಲಿ; **ಋತಮ್ ಚ ಸತ್ಯಮ್ ಚ ವದತ**=ಮನಸ್ಸಿನಿಂದ ಯಥಾರ್ಥವನ್ನೇ ನೆನೆಯಿರಿ; ಮಾತಿನಲ್ಲೂ ಸತ್ಯವನ್ನೇ ಆಡಿರಿ; **ದೇವಸ್ಯ ಸವಿತುಃ ಪ್ರಸವೇ ಸ್ತುತ**=ಸವಿತೃದೇವನ ಅನುಮತಿಯಾಗಲು ನೀವು ಸ್ತೋತ್ರ ಮಾಡಿರಿ; ✦**ಸ್ತುತಸ್ಯ ಸ್ತುತಮ್ ಅಸಿ**=[ಎಲೈ! ಸ್ತೋತ್ರವೇ!] ನೀನು ಸ್ತೋತ್ರಗಳಲ್ಲಿ ಉತ್ತಮವಾದ ಸ್ತೋತ್ರವಾಗಿರುವೆ. **ಸ್ತುತಮ್**=ಅಂತಹ ಉತ್ತಮಸ್ತೋತ್ರವಾದ [ನಿನ್ನಿಂದ] ನಿನ್ನನ್ನು; **ಮಹ್ಯಮ್**=ನನಗಾಗಿ; **ಊರ್ಜಮ್**=ಸಾರ/ಬಲವನ್ನು/ಅನ್ನವನ್ನು;

'ದೇವ ಸವಿತರೇತತ್ತೇತ್ಯನುದ್ರುತ್ಯ ರಶ್ಮಿರಸಿ ಕ್ಷಯಾಯ ತ್ವಾ ಕ್ಷಯಂ ಜಿನ್ವ ಓಂ

**ಸ್ತುತಂ ದುಹಾಮಾ ಮಾ ಸ್ತುತಸ್ಯ ಸ್ತುತಂ ಗಮ್ಯಾಚ್ಛಸ್ತ್ರಸ್ಯ ಶಸ್ತ್ರ[ಶಸ್ತ್ರಮ್(೨೬)ಅಸ್ಯೂ]ಮಸ್ಯೂರ್ಜಂ ಮಹ್ಯಗ್‌ಂ ಶಸ್ತ್ರಂ**

---

**ಸ್ತುತಮ್ । ದುಹಾಮ್ । ಏತಿ । ಮಾ । ಸ್ತುತಸ್ಯ । ಸ್ತುತಮ್ । ಗಮ್ಯಾತ್ । ಶಸ್ತ್ರಸ್ಯ । ಶಸ್ತ್ರಮ್ ।(೨೬)। ಅಸಿ । ಊರ್ಜಮ್ । ಮಹ್ಯಮ್ । ಶಸ್ತ್ರಮ್ ।**

---

| ಮಂತ್ರ | ವಿನಿಯೋಗ |
|---|---|
| ಶಸ್ತ್ರಸ್ಯ...ಗಮ್ಯಾತ್ ॥ | ಶಸ್ತ್ರಗಳಿಗೆ ಯಜಮಾನನು ಅನುಮತಿಯನ್ನು ನೀಡಲು |

---

**ದುಹಾಮ್**=ಕರೆದುಕೊಳ್ಳುತ್ತೇನೆ/ಪಡೆದುಕೊಳ್ಳುತ್ತೇನೆ; **ಮಾ**=ನನ್ನನ್ನು ಕುರಿತು; **ಸ್ತುತಸ್ಯ ಸ್ತುತಮ್**=ಸ್ತೋತ್ರಗಳಲ್ಲಿ ಉತ್ತಮವಾದ ಸ್ತೋತ್ರವು; **ಆ ಗಮ್ಯಾತ್**= ಹೊಂದಲಿ/ಫಲಪ್ರದವಾಗಲಿ. [ಇದು ಸ್ತುತದೋಹದ ಮಂತ್ರಭಾಗ]

✦**ಶಸ್ತ್ರಸ್ಯ ಶಸ್ತ್ರಮ್ ಅಸಿ**=[ಎಲೈ! ಶಸ್ತ್ರದೋಹವೇ!] ನೀನು ಶಸ್ತ್ರಗಳಲ್ಲಿ ಉತ್ತಮವಾದ ಶಸ್ತ್ರನಾಗಿದ್ದೀಯೆ; **ಶಸ್ತ್ರಮ್**=[ನಾನು] ಈ ಶಸ್ತ್ರವನ್ನು; **ಮಹ್ಯಮ್**=ನನಗಾಗಿ; **ಊರ್ಜಮ್**=ಅನ್ನವನ್ನೂ/ಬಲವನ್ನೂ;

---

ಸ್ತುತೇತಿ ಪ್ರಸೌತಿ' [ಆಪ.ಶ್ರೌ. ಸೂ.14.9.7.10.1] ಎಂದು ವಿಧಿಯು ಇದೆ. ಹೀಗೆ ಸ್ತೋತ್ರಕ್ಕೆ ಅನುಮತಿಯನ್ನು ನೀಡುವುದು ಬ್ರಹ್ಮನ ಕಾರ್ಯ.

ಅವನು 'ಎಲೈ ಸವಿತೃದೇವನೇ! ನೀನು ಸ್ತೋತ್ರವನ್ನು ಅನುಮತಿಸಿ, ಯಾಗವು ಚೆನ್ನಾಗಿ ನಡೆಯುವಂತೆ ಮಾಡು.' 'ಹೇ! ಉದ್ಗಾತೃಗಳೇ! ನೀವು ಚೆನ್ನಾಗಿ ಗಮನಿಸಿ ಅವಧಾನದಿಂದ ಗಾನ ಮಾಡಿರಿ. ನಿಮ್ಮ ಆಶಂಸನೆಗಳು ನಿಜವಾಗಲಿ. ಯಜಮಾನನ ಸಂಕಲ್ಪಗಳೂ ಫಲಿಸಲಿ. ನೀವು ಸವಿತೃದೇವನ ಅನುಮತಿಯನ್ನು ಪಡೆದು ಸ್ತುತಿಸಿರಿ.' ಎಂದು ಹೇಳುತ್ತಾನೆ. ಇಲ್ಲಿ ಬೃಹಸ್ಪತಿಯೇ ಬ್ರಹ್ಮಸ್ವರೂಪನೆಂದು ವರ್ಣಿತವಾಗಿದೆ. ಉದ್ಗಾತೃಗಳು ಋಕ್ಕುಗಳ ಮತ್ತು ಸಾಮಗಳ ವಿಷಯದಲ್ಲಿ ಪ್ರಮಾದದಿಂದ ತಪ್ಪಾಗದಂತೆ ಎಚ್ಚರ ವಹಿಸಿ ಸ್ತೋತ್ರವನ್ನು ಮಾಡಬೇಕು.

ದುಹಾಮಾ ಮಾ ಶಸ್ತ್ರಸ್ಯ ಶಸ್ತ್ರಂ ಗಮ್ಯಾದಿಂದ್ರಿಯಾವಂತೋ
ವನಾಮಹೇ ಧುಕ್ಷೀಮಹಿ ಪ್ರಜಾಮಿಷಮ್ । ಸಾ ಮೇ ಸತ್ಯಾಽಽಶೀ
ರ್ದೇವೇಷು ಭೂಯಾದ್ಬ್ರಹ್ಮವರ್ಚಸಂ ಮಾಽಽಗಮ್ಯಾತ್ ।

---

ದುಹಾಮ್ । ಏತಿ । ಮಾ । ಶಸ್ತ್ರಸ್ಯ । ಶಸ್ತ್ರಮ್ । ಗಮ್ಯಾತ್ । ಇಂದ್ರಿಯಾವಂತ ಇತೀಂದ್ರಿಯ-ವಂತಃ । ವನಾಮಹೇ । ಧುಕ್ಷೀಮಹಿ । ಪ್ರಜಾಮಿತಿ ಪ್ರ-ಜಾಮ್ । ಇಷಮ್ ॥ ಸಾ । ಮೇ । ಸತ್ಯಾ । ಆಶೀರಿತ್ಯಾ-ಶೀಃ.। ದೇವೇಷು । ಭೂಯಾತ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಮಾ । ಏತಿ । ಗಮ್ಯಾತ್ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಿಯಾವಂತಃ...ರಯೀಣಾಮ್ ॥ | ಮೇಲಿನ ಸ್ತುತ-ಶಸ್ತ್ರಗಳೆರಡರಲ್ಲಿಯೂ ಅನುಷಂಗವನ್ನು ಮಾಡಲು |

---

**ದುಹಾಮ್**=ಕರೆದುಕೊಳ್ಳುತ್ತೇನೆ. **ಶಸ್ತ್ರಸ್ಯ ಶಸ್ತ್ರಮ್**=ಉತ್ತಮಶಸ್ತ್ರವು; **ಮಾ ಆಗಮ್ಯಾತ್**=ನನ್ನನ್ನು ಫಲಪ್ರದವಾಗಿ ಹೊಂದಲಿ. [ಇದು ಶಸ್ತ್ರದೋಹದ ಮಂತ್ರಭಾಗ] ✦**ಇಂದ್ರಿಯಾವಂತಃ**=[ನಾವು ನಿಮ್ಮ ಅನುಗ್ರಹದಿಂದ] ಬಲಿಷ್ಠವಾದ ಇಂದ್ರಿಯಗಳುಳ್ಳವರಾಗಿ; **ವನಾಮಹೇ**=[ನಿಮ್ಮನ್ನೇ=ಸ್ತುತ-ಶಸ್ತ್ರಗಳನ್ನೇ] ಸೇವಿಸುತ್ತೇವೆ. **ಪ್ರಜಾಮ್ ಇಷಮ್**=[ನಿಮ್ಮ ಅನುಗ್ರಹದಿಂದ] ಪುತ್ರಾದಿಪ್ರಜೆಯನ್ನೂ, ಅನ್ನವನ್ನೂ; **ಧುಕ್ಷೀಮಹಿ**=ಕರೆದುಕೊಳ್ಳುತ್ತೇವೆ/ಪಡೆಯುತ್ತೇವೆ. **ದೇವೇಷು**=ದೇವತೆಗಳ ವಿಷಯದಲ್ಲಿ; **ಮೇ ಸಾ ಆಶೀಃ**=[ಯಾಗ ಮಾಡುತ್ತಿರಬೇಕೆಂಬ] ನನ್ನ ಆ ಪ್ರಾರ್ಥನೆಯು; **ಸತ್ಯಾ ಭೂಯಾತ್**=ಸತ್ಯವಾಗಲಿ. **ಬ್ರಹ್ಮವರ್ಚಸಮ್**=ಯಜ್ಞಾನುಷ್ಠಾನಸಾಧಕವಾದ ಬ್ರಹ್ಮವರ್ಚಸವು; **ಮಾ ಆಗಮ್ಯಾತ್**=ನನ್ನನ್ನು ಹೊಂದಲಿ.

ಯಜ್ಞೋ ಬಭೂವ ಸ ಆ ಬಭೂವ ಸ ಪ್ರಜಜ್ಞೇ ಸ ವಾವೃಧೇ।

ಸ ದೇವಾನಾಮಧಿಪತಿರ್ಬಭೂವ ಸೋ ಅಸ್ಮಾಗ್ಂ ಅಧಿಪತೀ

ನ್ಕರೋತು ವಯಗ್ಗ್ಂ ಸ್ಯಾಮ ಪತಯೋ ರಯೀಣಾಮ್॥

---

ಯಜ್ಞಃ। ಬಭೂವ। ಸಃ। ಏತಿ। ಬಭೂವ। ಸಃ। ಪ್ರೇತಿ। ಜಜ್ಞೇ। ಸಃ।

ವಾವೃಧೇ॥ ಸಃ। ದೇವಾನಾಮ್। ಅಧಿಪತಿರಿತ್ಯಧಿ-ಪತಿಃ। ಬಭೂವ। ಸಃ।

ಅಸ್ಮಾನ್। ಅಧಿಪತೀನಿತ್ಯಧಿ-ಪತೀನ್। ಕರೋತು। ವಯಮ್। ಸ್ಯಾಮ।

ಪತಯಃ। ರಯೀಣಾಮ್॥

---

**ಯಜ್ಞಃ ಬಭೂವ**=ಯಜ್ಞವು ಸಂಪೂರ್ಣವಾಗಲಿ; **ಸಃ ಆಬಭೂವ**=ಆ ಯಜ್ಞವು ಮತ್ತೆ ಮತ್ತೆ ನೆರವೇರಲಿ; **ಸಃ ಪ್ರಜಜ್ಞೇ**=ಆ ಯಜ್ಞವು [ನಮ್ಮನ್ನು/ನಮ್ಮ ಆಶಯವನ್ನು] ಚೆನ್ನಾಗಿ ತಿಳಿಯಲಿ; **ಸಃ ವಾವೃಧೇ**=ಆ ಯಜ್ಞವು ವೃದ್ಧಿ ಹೊಂದಲಿ; **ಸಃ ದೇವಾನಾಮ್**=ಆ ಯಜ್ಞವು [ಹವಿಃಪ್ರದಾನದಿಂದ] ದೇವತೆಗಳ; **ಅಧಿಪತಿಃ ಬಭೂವ**=ಪಾಲಕನಾಗಲಿ. **ಸಃ ಅಸ್ಮಾನ್ ಅಧಿಪತೀನ್ ಕರೋತು**=ಆ ಯಜ್ಞವು ನಮ್ಮನ್ನು ಯಜ್ಞಾನುಷ್ಠಾನದ ಪಾಲಕರನ್ನಾಗಿ/ಸ್ವಾಮಿಗಳನ್ನಾಗಿ ಮಾಡಲಿ; **ವಯಮ್ ರಯೀಣಾಮ್ ಪತಯಃ ಸ್ಯಾಮ**=ನಾವು [ಯಜ್ಞಪುರುಷನ ಅನುಗ್ರಹದಿಂದ] ಯಜ್ಞಸಾಧನವಾದ ಅರ್ಥಗಳಿಗೆ[ಧನಗಳಿಗೆ] ಒಡೆಯರಾಗೋಣ.

---

ಯಜ್ಞವು ಚೆನ್ನಾಗಿ ನಡೆದು ಯಜಮಾನನು ಬಯಸಿದ ಫಲಗಳು ದೊರೆಯಲಿ ಎಂದು ಬ್ರಹ್ಮನ ಅನುಮತಿಯ ಸಾರಾಂಶ.

ಎಲೈ! ಸ್ತೋತ್ರವೇ! ನೀನು ಶ್ರೇಷ್ಠನು. ನನಗೆ ಫಲವನ್ನು ನೀಡು. ಎಲೈ! ಶಸ್ತ್ರವೇ! ನೀನು ಶಸ್ತ್ರಗಳಲ್ಲಿ ಶ್ರೇಷ್ಠನು. ನೀನು ನನಗೆ ಉತ್ತಮ ಫಲವನ್ನು ನೀಡು.

ಈ ಸ್ತುತ-ಶಸ್ತ್ರಗಳ ಅನುಗ್ರಹದಿಂದ ನಾವು ಸಮೃದ್ಧಿಯನ್ನು ಹೊಂದೋಣ. ನಮ್ಮ ಯಾಗದ ಸಂಕಲ್ಪವು ಫಲಿಸಲಿ. ಯಜ್ಞವು ವರ್ಧಿಸಲಿ. ನಮ್ಮನ್ನು ಯಜ್ಞಪಾಲಕರನ್ನಾಗಿ

ಯಜ್ಞೋ ವಾ ವೈ [(೨೭)] ಯಜ್ಞಪತಿಂ ದುಹೇ

ಯಜ್ಞಪತಿರ್ವಾ ಯಜ್ಞಂ ದುಹೇ ಸ ಯಸ್ಸ್ತುತಶಸ್ತ್ರಯೋ

ರ್ದೋಹಮವಿದ್ವಾನ್ ಯಜತೇ ತಂ ಯಜ್ಞೋ ದುಹೇ

---

ಯಜ್ಞಃ । ವಾ । ವೈ ।(೨೭)। ಯಜ್ಞಪತಿಮಿತಿ ಯಜ್ಞ-ಪತಿಮ್ । ದುಹೇ ।

ಯಜ್ಞಪತಿರಿತಿ ಯಜ್ಞ-ಪತಿಃ । ವಾ । ಯಜ್ಞಮ್ । ದುಹೇ । ಸಃ । ಯಃ ।

ಸ್ತುತಶಸ್ತ್ರಯೋರಿತಿ ಸ್ತುತ-ಶಸ್ತ್ರಯೋಃ । ದೋಹಮ್ । ಅವಿದ್ವಾನ್ । ಯಜತೇ ।

ತಮ್ । ಯಜ್ಞಃ । ದುಹೇ ।

---

### ಸ್ತುತ-ಶಸ್ತ್ರಗಳಿಗೆ ಸಂಬಂಧಿಸಿದ ಅರ್ಥವಾದ;ವಿಧಿ

| | |
|---|---|
| ಯಜ್ಞಃ ವಾ ವೈ ಯಜ್ಞಪತಿಮ್ ದುಹೇ | ಯಜ್ಞವು ಯಜ್ಞಸ್ವಾಮಿಯಾದ ಯಜಮಾನನನ್ನು ಹಿಂಡಿಕೊಳ್ಳುತ್ತದೆಯೋ/ಅವನ ಸಂಪತ್ತನ್ನು ಹಾಳುಮಾಡುತ್ತದೆಯೋ? |
| ಯಜ್ಞಪತಿಃ ವಾ ಯಜ್ಞಮ್ ದುಹೇ | ಅಥವಾ ಯಜಮಾನನು ಯಜ್ಞವನ್ನು ಹಿಂಡಿಕೊಳ್ಳುತ್ತಾನೆಯೋ/ಯಜ್ಞದ ಸಂಪೂರ್ಣ ಫಲವನ್ನು ಪಡೆಯುತ್ತಾನೆಯೋ? [ಎಂಬ ವಿಚಾರ ಮಾಡಿದರೆ] |
| ಸಃ ಯಃ ಸ್ತುತಶಸ್ತ್ರಯೋಃ ದೋಹಮ್ | ಆ ಯಾವ ಯಜಮಾನನು ಸ್ತುತ-ಶಸ್ತ್ರಗಳ ದೋಹವನ್ನು |
| ಅವಿದ್ವಾನ್ ಯಜತೇ | ತಿಳಿಯದವನಾಗಿ ಯಾಗ ಮಾಡುತ್ತಾನೆಯೋ |
| ತಮ್ ಯಜ್ಞಃ ದುಹೇ | ಅವನನ್ನು ಯಜ್ಞವು ಹಿಂಡಿಕೊಳ್ಳುತ್ತದೆ/ಅವನ ಸಂಪತ್ತನ್ನು ಹಾಳು ಮಾಡುತ್ತದೆ. |

---

ಮಾಡಲಿ. ನಾವು ಅರ್ಥಪತಿಗಳಾಗೋಣ.

ಈ ಮಂತ್ರಗಳಿಂದ ಯಜಮಾನನು ಅವುಗಳ ಪ್ರಾರಂಭಕ್ಕೆ ಅನುಮತಿಯನ್ನು ನೀಡಬೇಕು.

ಸ ಇಷ್ಟ್ವಾ ಪಾಪೀಯಾನ್ಭವತಿ ಯ ಏನಯೋರ್ದೋಹಂ

ವಿದ್ವಾನ್, ಯಜತೇ ಸ ಯಜ್ಞಂ ದುಹೇ ಸ ಇಷ್ಟ್ವಾ

ವಸೀಯಾನ್ಭವತಿ ಸ್ತುತಸ್ಯ ಸ್ತುತಮಸ್ಯೂರ್ಜಂ ಮಹ್ಯಗ್ಂ

ಸ್ತುತಂ ದುಹಾಮಾ ಮಾ ಸ್ತುತಸ್ಯ ಸ್ತುತಂ ಗಮ್ಯಾ-

---

ಸಃ । ಇಷ್ಟ್ವಾ । ಪಾಪೀಯಾನ್ । ಭವತಿ । ಯಃ । ಏನಯೋಃ । ದೋಹಮ್ ।

ವಿದ್ವಾನ್ । ಯಜತೇ । ಸಃ । ಯಜ್ಞಮ್ । ದುಹೇ । ಸಃ । ಇಷ್ಟ್ವಾ । ವಸೀಯಾನ್ ।

ಭವತಿ । ಸ್ತುತಸ್ಯ । ಸ್ತುತಮ್ । ಅಸಿ । ಊರ್ಜಮ್ । ಮಹ್ಯಮ್ । ಸ್ತುತಮ್ ।

ದುಹಾಮ್ । ಏತಿ । ಮಾ । ಸ್ತುತಸ್ಯ । ಸ್ತುತಮ್ । ಗಮ್ಯಾತ್ ।

---

| | |
|---|---|
| ಸಃ ಇಷ್ಟ್ವಾ ಪಾಪೀಯಾನ್ ಭವತಿ | ಆ ಯಜಮಾನನು ಯಾಗದ ಫಲವನ್ನು ಪಡೆಯದೆ ದರಿದ್ರನಾಗುತ್ತಾನೆ. |
| ಯಃ ಏನಯೋಃ ದೋಹಮ್ ವಿದ್ವಾನ್ ಯಜತೇ | ಯಾವ ಯಜಮಾನನು ಈ ಸ್ತುತ-ಶಸ್ತ್ರಗಳ ದೋಹವನ್ನು ತಿಳಿದು ಯಜ್ಞ ಮಾಡುವನೋ [ಮಾಡಬೇಕು. (ವಿಧಿ)] |
| ಸಃ ಯಜ್ಞಮ್ ದುಹೇ | ಅವನು ಯಜ್ಞದ ಸಂಪೂರ್ಣಫಲವನ್ನು ಪಡೆದು ಯಜ್ಞವನ್ನು ಹಿಂಡಿಕೊಂಡವನಾಗುತ್ತಾನೆ. |
| ಸಃ ಇಷ್ಟ್ವಾ ವಸೀಯಾನ್ ಭವತಿ | ಆ ಯಜಮಾನನು ಯಾಗವನ್ನು ಮಾಡಿ ಶ್ರೀಮಂತನಾಗುತ್ತಾನೆ. |
| ಸ್ತುತಸ್ಯಸ್ತುತಮ್ ಅಸಿ ಸ್ತುತಮ್ ಮಹ್ಯಮ್ ಊರ್ಜಮ್ ದುಹಾಮ್ ಮಾ ಸ್ತುತಸ್ಯಸ್ತುತಮ್ ಆಗಮ್ಯಾತ್ | ಎಲೈ! ಸ್ತೋತ್ರವೇ! ನೀನು ಸ್ತೋತ್ರಗಳಲ್ಲಿ ಉತ್ತಮವಾದ ಸ್ತೋತ್ರವಾಗಿರುವೆ. ಅಂತಹ ನಿನ್ನಿಂದ ನಾನು ಬಲವನ್ನು ಪಡೆದುಕೊಳ್ಳುವೆನು ಇಂತಹ ಉತ್ತಮ ಸ್ತೋತ್ರವು ನನ್ನನ್ನು ಸೇರಲಿ. |

ಚ್ಛಸ್ತ್ರಸ್ಯ ಶಸ್ತ್ರಮಸ್ಯೂರ್ಜಂ ಮಹ್ಯಗ್‌ಂ ಶಸ್ತ್ರಂ
ದುಹಾಮಾ ಮಾ ಶಸ್ತ್ರಸ್ಯ ಶಸ್ತ್ರಂ ಗಮ್ಯಾದಿತ್ಯಾಹೈಷ
ವೈ ಸ್ತುತಶಸ್ತ್ರಯೋರ್ದೋಹಸ್ತಂ ಯ ಏವಂ
ವಿದ್ವಾನ್, ಯಜತೇ ದುಹ ಏವ ಯಜ್ಞ- .

---

ಶಸ್ತ್ರಸ್ಯ । ಶಸ್ತ್ರಮ್ । ಅಸಿ । ಊರ್ಜಮ್ । ಮಹ್ಯಮ್ । ಶಸ್ತ್ರಮ್ । ದುಹಾಮ್ । ಏತಿ । ಮಾ । ಶಸ್ತ್ರಸ್ಯ । ಶಸ್ತ್ರಮ್ । ಗಮ್ಯಾತ್ । ಇತಿ । ಆಹ । ಏಷಃ । ವೈ । ಸ್ತುತಶಸ್ತ್ರಯೋರಿತಿ ಸ್ತುತ-ಶಸ್ತ್ರಯೋಃ । ದೋಹಃ । ತಮ್ । ಯಃ । ಏವಮ್ । ವಿದ್ವಾನ್ । ಯಜತೇ । ದುಹೇ । ಏವ । ಯಜ್ಞಮ್ ।

---

| | |
|---|---|
| ಶಸ್ತ್ರಸ್ಯ ಶಸ್ತ್ರಮ್ ಅಸಿ ಶಸ್ತ್ರಮ್ | ಎಲೈ! ಶಸ್ತ್ರವೇ! ನೀನು ಉತ್ತಮಶಸ್ತ್ರನಾಗಿರುವೆ. |
| ಮಹ್ಯಮ್ ಊರ್ಜಮ್ | ಅಂತಹ ನಿನ್ನಿಂದ ಬಲವನ್ನು ಪಡೆದುಕೊಳ್ಳುತ್ತೇನೆ. |
| ದುಹಾಮ್ ಶಸ್ತ್ರಸ್ಯ ಶಸ್ತ್ರಮ್ ಮಾ ಆಗಮ್ಯಾತ್ | ಇಂತಹ ಶಸ್ತ್ರವು ನನ್ನನ್ನು ಫಲಪ್ರದನಾಗಿ ಹೊಂದಲಿ. |
| ಇತಿ ಆಹ | ಹೀಗೆ ಶ್ರುತಿಯು ಹೇಳುತ್ತದೆ. |
| ಸ್ತುತಶಸ್ತ್ರಯೋಃ ಏಷಃ ವೈ ದೋಹಃ | ಇದೇ ಸ್ತುತ-ಶಸ್ತ್ರಗಳ ದೋಹವಾಗಿದೆಯಷ್ಟೆ. |
| ಯಃ ತಮ್ ಏವಮ್ ವಿದ್ವಾನ್ ಯಜತೇ | ಹೀಗೆ ತಿಳಿದವನಾಗಿ ಯಾವನು ಯಾಗ ಮಾಡುವನೋ |
| ಯಜ್ಞಮ್ ಏವ ದುಹೇ | ಅವನು ಯಜ್ಞವನ್ನೇ ಹಿಂಡಿಕೊಳ್ಳುತ್ತಾನೆ. |

# ಮಿಷ್ಟ್ವಾ ವಸೀಯಾನ್ಭವತಿ ॥ ೨೮-7 ॥

[ಶಸ್ತ್ರಂ ವೈ ಶಸ್ತ್ರಂ ದುಹಾಂ ದ್ವಾವಿಗ್ಂಶತಿಶ್ಚ ॥]

---

ಇಷ್ಟ್ವಾ । ವಸೀಯಾನ್ । ಭವತಿ ॥ ೨೮ ॥

---

| | |
|---|---|
| ಇಷ್ಟ್ವಾ ವಸೀಯಾನ್ ಭವತಿ | ಅವನು ಯಾಗ ಮಾಡಿ ಫಲಗಳನ್ನು ಪಡೆದು ಅಧಿಕ ಧನವಂತನಾಗುತ್ತಾನೆ. |

---

ಸ್ತೋತ್ರ-ಶಸ್ತ್ರ ಈ ಶಬ್ದಗಳು **'ಷ್ಟುಞ್ ಸ್ತುತೌ' 'ಶಂಸು ಸ್ತುತೌ'** ಎಂದು ಸ್ತುತ್ಯರ್ಥಕಗಳಾದ ಧಾತುಗಳಿಂದಲೇ ಆಗಿವೆ. ಆದರೂ ಋಕ್ಕುಗಳಿಂದ ಹೋತೃವು ಮಾಡುವ ಸ್ತೋತ್ರಗಳು ಶಸ್ತ್ರಗಳು.

ಸಾಮಗಾನಪೂರ್ವಕವಾಗಿ ಉದ್ಗಾತೃವು ಋಕ್ಕುಗಳಿಂದ ಮಾಡುವ ಸ್ತೋತ್ರಗಳು **'ಸ್ತುತ'**ಗಳೆಂದು ಯಾಜ್ಞಿಕರೂಢಿಯಾಗಿದೆ. ಮೇಲಿನ ಮಂತ್ರಗಳಿಗೆ **'ಸ್ತುತ-ಶಸ್ತ್ರ ದೋಹ'** ಗಳೆಂಬ ಪ್ರಸಿದ್ಧಿ ಇದೆ.

ಸ್ತುತ-ಶಸ್ತ್ರದೋಹಗಳನ್ನು ತಿಳಿಯದೇ ಯಾಗ ಮಾಡುವವನ ಸಂಪತ್ತನ್ನು ಯಜ್ಞವು ನಾಶ ಮಾಡುತ್ತದೆ. ಅವುಗಳನ್ನು ತಿಳಿದವನು ಯಾಗದ ಪೂರ್ಣಫಲವನ್ನು ಹೊಂದುವನು. **'ಸ್ತುತಸ್ಯ...ಗಮ್ಯಾತ್' 'ಶಸ್ತ್ರಸ್ಯ...ಗಮ್ಯಾತ್'** ಇವೇ ಸ್ತುತ-ಶಸ್ತ್ರಗಳ ದೋಹಗಳು.

## ವಿನಿಯೋಗಸಂಗ್ರಹ

1ದೇವ ಬ್ರಹ್ಮಾ ಸೌತಿ ಗಾತ್ಯಾನ್ 2ಸ್ತುತಸ್ಯ ಯಜಮಾನಕಃ ।

ಸ್ತೋತ್ರಂ ಸಂಮಂತ್ರ್ಯ ಶಸ್ತ್ರಸ್ಯ ಮಂತ್ರಯೇಚ್ಛಸ್ತ್ರಯೋಸ್ತಯೋಃ ।

3ಇಂದ್ರಃ ಶೇಷಃ ಸ ಣಾಮಂತಃ ಮಂತ್ರಾ ಅತ್ರ ತ್ರಯೋ ಮತಾಃ ॥

**ಅನುವಾಕದಲ್ಲಿರುವ ಮಂತ್ರಸಂಖ್ಯೆ-3**

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧) ಸಾಮಗಾನವು ಪ್ರಧಾನಕರ್ಮವೇ? ಸಂಸ್ಕಾರಕರ್ಮವೇ?

[ಜೈ.ಸೂ.9.2.3]

'ತನೂಪಾತ್ಸಾಮ್ನಃ' ಎಂದು ಸಾಮಗಳು ಋಕ್ಕಿನ ಅಕ್ಷರಾಭಿವ್ಯಂಜಕವಾಗಿರುವುದರಿಂದ ಋಕ್ಕನ್ನು ರಕ್ಷಿಸುತ್ತವೆ. ಈ ಸಾಮಗಾನವು ಪ್ರಧಾನಕರ್ಮವೇ? ಸಂಸ್ಕಾರ ಕರ್ಮವೇ? ಎಂದು ಸಂಶಯ.

ಯಾಗಾನುಷ್ಠಾನದ ಸಮಯದಲ್ಲಿ ಮಾತ್ರವಲ್ಲದೆ, ಬೇರೆ ಸಮಯ–ಸ್ಥಳಗಳಲ್ಲಿಯೂ ಗಾನದ ಪಾಠವಿದೆ. ಯಾಗದ ಮಧ್ಯದಲ್ಲಿ ಮಾತ್ರವೇ ಇದ್ದರೆ ವ್ರೀಹಿಪ್ರೋಕ್ಷಣದಂತೆ ಅದು ಸಂಸ್ಕಾರಕರ್ಮವಾಗಬಹುದು. ಸಂಸ್ಕಾರ ಕರ್ಮವಾಗಿದ್ದರೆ ಯಾಗದ ಮಧ್ಯ ದಲ್ಲಿ ಮಾತ್ರ ಅನುಷ್ಠಾನವಿರುತ್ತಿತ್ತು. ಯಾಗಕ್ಕಿಂತಲೂ ಬೇರೆಡೆ ಮಾಡುವ ಗಾನಕ್ಕೆ– ವಿಶ್ವಜಿನ್ನ್ಯಾಯದಂತೆ ಅರ್ಥಾತ್ ವಿಶ್ವಜಿತ್ ಯಾಗಕ್ಕೆ ಫಲೋಲ್ಲೇಖವಿಲ್ಲದಿರುವಾಗ ಸ್ವರ್ಗವನ್ನೇ ಫಲವೆಂದು ಕಲ್ಪಿಸಿರುವಂತೆ–ಫಲವನ್ನು ಕಲ್ಪಿಸಬಹುದು. ಹೀಗಾಗಿ ಸಾಮಗಾನವು ಪ್ರಯಾಜಾದಿಗಳಂತೆ ಮುಖ್ಯಕರ್ಮವೇ ಆಗುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

ಯಾಗದ ಹೊರಗಿನ ಗಾನವು ಅಭ್ಯಾಸಮಾತ್ರ. ಹೊರಗಿನ ಪಾಠಮಾತ್ರದಿಂದ ಗಾನವನ್ನು ಪ್ರಧಾನಕರ್ಮವೆಂದು ಪರಿಗಣಿಸಲಾಗುವುದಿಲ್ಲ. ಗಾನವನ್ನು ಸಂಸ್ಕಾರ ವೆಂದು ಹೇಳಿದರೆ ಪ್ರಯೋಜನವು ಇಲ್ಲವೆಂದಲ್ಲ. ಗಾನದಿಂದ ಸಂಸ್ಕರಿಸಲ್ಪಟ್ಟ ಋಕ್ಕಿನ ಅಕ್ಷರಗಳಿಂದ ಸ್ತುತಿಯನ್ನು ಮಾಡಿದಂತಾಗುತ್ತದೆ. 'ಆಜ್ಯೈಃ ಸ್ತುವತೇ' ಮೊದಲಾಗಿ ಸಾಮಸ್ತೋತ್ರಗಳು ವಿಹಿತವಾಗಿವೆ. ಗಾನಗಳಿಂದ ಋಗಕ್ಷರಾಭಿವ್ಯಕ್ತಿ ಯಾಗುವುದರಿಂದ ಅಕ್ಷರಾಭಿವ್ಯಕ್ತಿಯೆಂಬ ದೃಷ್ಟಪ್ರಯೋಜನವಿರುವುದರಿಂದ ಗಾನವು ಸಂಸ್ಕಾರಕರ್ಮವಾಗಿದೆ. ದೃಷ್ಟಪ್ರಯೋಜನವಿರುವಾಗ ಅದೃಷ್ಟಪ್ರಯೋಜನವನ್ನು ಕಲ್ಪಿಸುವುದು ಯುಕ್ತವಲ್ಲ. ಹೀಗಾಗಿ ಗಾನವು ಸಂಸ್ಕಾರಕರ್ಮವಾಗಿದೆ. ಇದು ಇಲ್ಲಿನ **ಸಿದ್ಧಾಂತ.**

## ೨) ಸ್ತೋತ್ರ-ಶಸ್ತ್ರಗಳು ಯಾವ ರೀತಿಯ ಕರ್ಮಗಳು?

[ಜೈ.ಸೂ.2.1.18-19]

ಜ್ಯೋತಿಷ್ಟೋಮದಲ್ಲಿ 'ಪ್ರ ಉಗಂ ಶಂಸತಿ, ಆಜ್ಯೈಃ ಸ್ತುವತೇ' ಎಂದು ಹೇಳಿದೆ. ಈ *ಸ್ತೋತ್ರ-*ಶಸ್ತ್ರಗಳು ಯಾವ ಕರ್ಮಗಳು? ಇದು ಇಲ್ಲಿನ ಸಂಶಯ.

ಸ್ತೋತ್ರ-ಶಸ್ತ್ರಗಳು 'ಗುಣಿನಿಷ್ಠಗುಣಾಭಿಧಾನಂ ಸ್ತೋತ್ರಮ್' ಎಂಬಂತೆ ದೇವತಾಪ್ರಕಾಶಕಗಳಾಗಿ ಸಂಸ್ಕಾರವನ್ನು ಉಂಟುಮಾಡುತ್ತವೆಯಾದುದರಿಂದ ಅವು ಸಂಸ್ಕಾರಕರ್ಮಗಳು ಎನಿಸುತ್ತವೆ. ಇದು ಇಲ್ಲಿನ ಪೂರ್ವಪಕ್ಷ.

'ಪ್ರ ಉಗಂ ಶಂಸತಿ' 'ಪೃಷ್ಠೈಃ ಸ್ತುವತೇ' ಎಂಬ ಕಡೆಯಲ್ಲಿ ಸ್ತೋತ್ರ-ಶಸ್ತ್ರ ಶಬ್ದಗಳ ಮುಖ್ಯಾರ್ಥವು ಬಾಧಿತವಾಗುತ್ತದೆ. ಏಕೆಂದರೆ ಆ ಶಬ್ದಗಳು ಗುಣವಾಚಕಗಳಲ್ಲ. ಆದುದರಿಂದ ಅದೃಷ್ಟರೂಪಫಲವನ್ನು ಅಂಗೀಕರಿಸಿ, ಪ್ರಧಾನಕರ್ಮಗಳೆಂದು ಅಂಗೀಕರಿಸಬೇಕು. ಹೀಗಾಗಿ ಸ್ತೋತ್ರ-ಶಸ್ತ್ರಗಳು ಪ್ರಧಾನಕರ್ಮಗಳು. ಇದು ಇಲ್ಲಿನ **ಸಿದ್ಧಾಂತ.**



*ಪ್ರಗೀತಮಂತ್ರಸಾಧ್ಯಾ ಸ್ತುತಿಃ-ಸ್ತೋತ್ರಮ್ । ಗಾನವನ್ನು ಅಳವಡಿಸಿದ ಮಂತ್ರದಿಂದ ಮಾಡುವ ಸ್ತುತಿಯು ಸ್ತೋತ್ರ.

*ಅಪ್ರಗೀತಮಂತ್ರಸಾಧ್ಯಾ ಸ್ತುತಿಃ-ಶಸ್ತ್ರಮ್ । ಗಾನವನ್ನು ಅಳವಡಿಸದ ಮಂತ್ರದಿಂದ ಮಾಡುವ ಸ್ತುತಿ-ಶಸ್ತ್ರ.

# ॥ ಅಷ್ಟಮೋಽನುವಾಕಃ ॥

**ಶ್ಯೇನಾಯ ಪತ್ವನೇ ಸ್ವಾಹಾ**

**ವಟ್ಥ್ಸ್ವಯಮಭಿಗೂರ್ತಾಯ ನಮೋ**

---

ಶ್ಯೇನಾಯ । ಪತ್ವನೇ । ಸ್ವಾಹಾ । ವಟ್ । ಸ್ವಯಮಭಿಗೂರ್ತಾಯೇತಿ

ಸ್ವಯಮ್-ಅಭಿಗೂರ್ತಾಯ । ನಮಃ ।

---

ಎಂಟನೆಯ ಈ ಅನುವಾಕದಲ್ಲಿ ಮಾಧ್ಯಂದಿನಸವನ-ತೃತೀಯಸವನದ ಹೋಮವಿಶೇಷದ ಮಂತ್ರಗಳು ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಶ್ಯೇನಾಯ...ನಮಃ ॥ | ಚಮಸಗಳಿಂದ ಹೋಮವನ್ನು ಅನುಷ್ಠಿಸಲು [ಏಳು ಹೋಮಗಳು]* |

---

✦**ಶ್ಯೇನಾಯ**=ಗಿಡಗದಂತೆ; **ಪತ್ವನೇ**=ಹಾರಬಲ್ಲ;[ಇಂದ್ರ ಋಭುಭಿಃ **(ಋ.ಸಂ.3.60.5)** ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ] **ಸ್ವಾಹಾ**=ಇದು ಹುತವಾಗಲಿ; **ವಟ್**=ಅವಶ್ಯವಾಗಿ; **ಸ್ವಯಮಭಿಗೂರ್ತಾಯ**=ತಾನಾಗಿಯೇ ಸೋಮಸಮೀಪಕ್ಕೆ ಹೋಗಲು ಯತ್ನಿಸುತ್ತಿರುವ ದೇವನಿಗೆ; **ನಮಃ**= ನಮಸ್ಕರಿಸುತ್ತೇನೆ.

---

* ಈ ಏಳು ಮಂತ್ರಗಳಲ್ಲಿಯೂ ಮೊದಲನೆಯ ಮಂತ್ರದಿಂದ '**ಸ್ವಾಹಾ**' ಎಂದು ಮುಕ್ತಾಯವಾಗುವಲ್ಲಿ ವಷಟ್ಕಾರವನ್ನು ಹೇಳಿದೊಡನೆ ಹೋಮವನ್ನು ಅನುಷ್ಠಿಸಬೇಕು. '**ವಟ್**' ಎಂದು ಆರಂಭವಾಗುವ ಎರಡನೆಯ ಮಂತ್ರಗಳಿಂದ ಅನುವಷಟ್ಕಾರವಾದೊಡನೆ ಹೋಮವನ್ನು ಮಾಡಬೇಕು. ಅನಂತರ ಭಕ್ಷವನ್ನು ಒಯ್ಯಬೇಕು. [ಆಪ.ಶ್ರೌ.ಸೂತ್ರ.13.12.3-7]

# ವಿಷ್ಟಂಭಾಯ ಧರ್ಮಣೇ ಸ್ವಾಹಾ ವಟ್ಸ್ವಯ
# ಮಭಿಗೂರ್ತಾಯ ನಮಃ ಪರಿಧಯೇ ಜನಪ್ರಥನಾಯ
# ಸ್ವಾಹಾ ವಟ್ಸ್ವಯಮಭಿಗೂರ್ತಾಯ ನಮ

---

ವಿಷ್ಟಂಭಾಯೇತಿ ವಿ-ಸ್ತಂಭಾಯ । ಧರ್ಮಣೇ । ಸ್ವಾಹಾ । ವಟ್ ।

ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ । ಪರಿಧಯ

ಇತಿ ಪರಿ-ಧಯೇ । ಜನಪ್ರಥನಾಯೇತಿ ಜನ-ಪ್ರಥನಾಯ । ಸ್ವಾಹಾ । ವಟ್ ।

ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ ।

---

| ಮಂತ್ರ | ವಿನಿಯೋಗ |
| --- | --- |
| ವಿಷ್ಟಂಭಾಯ...ನಮಃ ॥<br>ಪರಿಧಯೇ...ನಮಃ ॥ | ಚಮಸಗಳಿಂದ ಹೋಮವನ್ನು ಅನುಷ್ಠಿಸಲು |

---

✦ **ವಿಷ್ಟಂಭಾಯ**=ಶತ್ರುನಾಶಕನಾದ; **ಧರ್ಮಣೇ**=ನಮ್ಮ ಧಾರಕ/ಪೋಷಕನಾದ [**ಇಂದ್ರಾವರುಣಾ ಸುತಪೌ(ಋ.ಸಂ.6.68.10)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ] **ಸ್ವಾಹಾ**=ಇದು ಹುತವಾಗಲಿ. **ವಟ್ ಸ್ವಯಮಭಿಗೂರ್ತಾಯ**=ಅವಶ್ಯವಾಗಿ ತಾನಾಗಿಯೇ ಸೋಮಸಮೀಪಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ; **ನಮಃ**=ನಮಸ್ಕಾರ. ✦**ಪರಿಧಯೇ**=ಸುತ್ತಲೂ ನಮ್ಮನ್ನು ಧರಿಸಿರುವ; **ಜನಪ್ರಥನಾಯ**=ಜನರನ್ನು ಬೆಳಕಿಗೆ ತರುವ [**ಇಂದ್ರಶ್ಚ ಸೋಮಂ ಪಿಬತಮ್ (ಋ.ಸಂ.4.50.10)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ] **ಸ್ವಾಹಾ**=ಇದು ಸುಹುತವಾಗಲಿ; **ವಟ್ ಸ್ವಯಮಭಿಗೂರ್ತಾಯ ನಮಃ**=ಅವಶ್ಯವಾಗಿ ತಾನಾಗಿಯೇ ಸೋಮಪಾರ್ಶ್ವಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ ನಮಸ್ಕಾರ.

**ಊರ್ಜೇ ಹೋತ್ರಾಣಾಗ್ಂ ಸ್ವಾಹಾ ವಟ್ಥ್ಸ್ವಯಮಭಿ ಗೂರ್ತಾಯ ನಮಃ ಪಯಸೇ ಹೋತ್ರಾಣಾಗ್ಂ ಸ್ವಾಹಾ ವಟ್ಥ್ಸ್ವಯಮಭಿಗೂರ್ತಾಯ ನಮಃ**

---

ಊರ್ಜೇ । ಹೋತ್ರಾಣಾಮ್ । ಸ್ವಾಹಾ । ವಟ್ । ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ । ಪಯಸೇ । ಹೋತ್ರಾಣಾಮ್ । ಸ್ವಾಹಾ । ವಟ್ । ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ಊರ್ಜೇ ಹೋತ್ರಾಣಾಮ್ ...ನಮಃ ॥** **ಪಯಸೇ...ನಮಃ ॥** | ಚಮಸಗಳಿಂದ ಹೋಮವನ್ನು ಅನುಷ್ಠಿಸಲು |

---

✦**ಊರ್ಜೇ ಹೋತ್ರಾಣಾಮ್**=ಹೌತ್ರವನ್ನು ಮಾಡುವವರಿಗೆ ಊರ್ಕ್ಸ್ವರೂಪ/ಅನ್ನಪ್ರದನಾದ[**ಆ ವೋ ವಹಂತು ಸಪ್ತಯಃ(ಋ.ಸಂ.೧.೮೫.೬)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ] **ಸ್ವಾಹಾ**=ಇದು ಹುತವಾಗಲಿ; **ವಟ್ ಸ್ವಯಮಭಿಗೂರ್ತಾಯ ನಮಃ**=ಅವಶ್ಯವಾಗಿ ತಾನಾಗಿಯೇ ಸೋಮಪಾರ್ಶ್ವಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ ನಮಸ್ಕಾರ.✦**ಪಯಸೇ ಹೋತ್ರಾಣಾಮ್**=ಹೋಮ ಮಾಡುವವರಿಗೆ ಹಾಲನ್ನು ಕೊಡುವ/ಸರ್ವಸಮೃದ್ಧಿಪ್ರದನಾದ;[**ಅಮೇವ ನಃ ಸುಹವಾ (ಋ.ಸಂ.೨.೩೬.೩)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ]**ಸ್ವಾಹಾ**=ಇದು ಸುಹುತವಾಗಲಿ; **ವಟ್ ಸ್ವಯಮಭಿಗೂರ್ತಾಯ ನಮಃ**=ಅವಶ್ಯವಾಗಿ ತಾನಾಗಿಯೇ ಸೋಮಪಾರ್ಶ್ವಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ ನಮಸ್ಕಾರ.

---

'ಶ್ಯೇನಾಯ...ನಮಃ' ಎಂಬ ಮಂತ್ರದಿಂದ ಆರಂಭವಾಗುವ ಈ ಏಳು ಹೋಮಗಳಿಗೆ ಪ್ರಸ್ಥಿತಯಾಜ್ಯಾಹೋಮಗಳೆಂದು ಹೆಸರು. ಯಾಜ್ಯಾನುವಾಕ್ಯಗಳನ್ನು ವಿವರಣೆಯಲ್ಲಿ

# ಪ್ರಜಾಪತಯೇ ಮನವೇ ಸ್ವಾಹಾ ವಟ್ಥ್ಸ್ವಯಮಭಿ ಗೂರ್ತಾಯ ನಮ ಋತಮೃತಪಾಸ್ಸುವರ್ವಾಟ್ಥ್ಸ್ವಾಹಾ ವಟ್ಥ್ಸ್ವಯಮಭಿಗೂರ್ತಾಯ ನಮ

---

ಪ್ರಜಾಪತಯ ಇತಿ ಪ್ರಜಾ-ಪತಯೇ । ಮನವೇ । ಸ್ವಾಹಾ । ವಟ್ ।
ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ । ಋತಮ್ ।
ಋತಪಾ ಇತ್ಯೃತ-ಪಾಃ । ಸುವರ್ವಾಡಿತಿ ಸುವಃ-ವಾಟ್ । ಸ್ವಾಹಾ । ವಟ್ ।
ಸ್ವಯಮಭಿಗೂರ್ತಾಯೇತಿ ಸ್ವಯಮ್-ಅಭಿಗೂರ್ತಾಯ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ಪ್ರಜಾಪತಯೇ...ನಮಃ ॥**<br>**ಋತಮ್...ನಮಃ ॥** | ಚಮಸಗಳಿಂದ ಹೋಮವನ್ನು ಅನುಷ್ಠಿಸಲು |

---

✦**ಪ್ರಜಾಪತಯೇ**=ಪ್ರಜೆಗಳನ್ನು ಪಾಲಿಸುವ; **ಮನವೇ**=ನಾವು ತಿಳಿದುಕೊಳ್ಳಬೇಕಾಗಿರುವ;[**ಇಂದ್ರಾವಿಷ್ಣೂ ಪಿಬತಂ (ಋ.ಸಂ.೬.೬೯.೭)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ]**ಸ್ವಾಹಾ**=ಇದು ಸುಹುತವಾಗಲಿ; **ವಟ್ ಸ್ವಯಮಭಿಗೂರ್ತಾಯ ನಮಃ**=ಅವಶ್ಯವಾಗಿ ತಾನಾಗಿಯೇ ಸೋಮಪಾರ್ಶ್ವಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ ನಮಸ್ಕಾರ. ✦**ಋತಪಾಃ**=ಸತ್ಯರಕ್ಷಕನಾದವನೇ! **ಸುವರ್ವಾಟ್**=ಸ್ವರ್ಗಪ್ರಾಪಕನೇ! [ನೀನು] **ಋತಮ್**=ನಮ್ಮ ಯಜ್ಞವನ್ನು [ಪಾಲಯ=ರಕ್ಷಿಸು.] ಅಂತಹ [**ಇಮಂ ಸ್ತೋಮಮರ್ಹತೇ(ಋ.ಸಂ.೧.೯೪.೧)**ಎಂಬ ಯಾಜ್ಯೆಯಿಂದ ಪ್ರತಿಪಾದ್ಯನಾದ ದೇವನಿಗೆ]**ಸ್ವಾಹಾ**=ಇದು ಸುಹುತವಾಗಲಿ; **ವಟ್ ಸ್ವಯಮಭಿಗೂರ್ತಾಯ ನಮಃ**=ಅವಶ್ಯವಾಗಿ ತಾನಾಗಿಯೇ ಸೋಮಪಾರ್ಶ್ವಕ್ಕೆ ಹೋಗಲು ತವಕಿಸುತ್ತಿರುವ ದೇವನಿಗೆ ನಮಸ್ಕಾರ.

**ಸ್ತೃಂಪಂತಾಗ್ಂ ಹೋತ್ರಾ ಮಧೋರ್ಘೃತಸ್ಯ ಯಜ್ಞಪತಿ ಮೃಷಯ ಏನಸಾ[ಏನಸಾ(೨೯)ಆಹುಃ]ಹುಃ। ಪ್ರಜಾ ನಿರ್ಭಕ್ತಾ ಅನುತಪ್ಯಮಾನಾ ಮಧವ್ಯೌ ಸ್ತೋಕಾವಪ ತೌ ರರಾಧ।**

---

ತೃಂಪಂತಾಮ್। ಹೋತ್ರಾಃ। ಮಧೋಃ। ಘೃತಸ್ಯ। ಯಜ್ಞಪತಿಮಿತಿ ಯಜ್ಞ-ಪತಿಮ್। ಋಷಯಃ। ಏನಸಾ।(೨೯)। ಆಹುಃ॥ ಪ್ರಜಾ ಇತಿ ಪ್ರ-ಜಾಃ। ನಿರ್ಭಕ್ತಾ ಇತಿ ನಿಃ-ಭಕ್ತಾಃ। ಅನುತಪ್ಯಮಾನಾ ಇತ್ಯನು-ತಪ್ಯಮಾನಾಃ। ಮಧವ್ಯೌ। ಸ್ತೋಕೌ। ಅಪೇತಿ। ತೌ। ರರಾಧ॥

---

| ಮಂತ್ರ | ವಿನಿಯೋಗ |
|---|---|
| ತೃಂಪಂತಾಂ...ಘೃತಸ್ಯ॥ | ಹೋಮಾನಂತರ ಜಪವನ್ನು ಮಾಡಲು |
| ಯಜ್ಞಪತಿಮ್....ವಿಶ್ವಕರ್ಮಾ॥ | ಇಲ್ಲಿ ವಿಹಿತವಾಗಿರುವ ಐದು ವೈಶ್ವಕರ್ಮಣ ಹೋಮಗಳಲ್ಲಿ ಮೊದಲನೆಯ ಹೋಮದ ಮಂತ್ರ. |

---

✦**ಹೋತ್ರಾಃ**=ನಾವು ಹೋಮಗಳಿಂದ ಆರಾಧಿಸುತ್ತಿರುವ ದೇವತೆಗಳು; **ಮಧೋಃ ಘೃತಸ್ಯ**=ಮಧುರವಾದ ಆಜ್ಯದಿಂದ; **ತೃಂಪಂತಾಮ್**=ತೃಪ್ತರಾಗಲಿ. ✦[ಯಾವಾಗ] **ಪ್ರಜಾಃ**=ಪ್ರಜೆಗಳು; **ನಿರ್ಭಕ್ತಾಃ**=ಅನ್ನವಿಲ್ಲದವರಾಗಿ; **ಅನುತಪ್ಯಮಾನಾಃ**=ದುಃಖದಿಂದ ಪೀಡಿಸಲ್ಪಡುತ್ತಾರೆಯೋ;[ಆಗ] **ಋಷಯಃ**=ಋಷಿಗಳು; **ಯಜ್ಞಪತಿಮ್**=ಯಜಮಾನನನ್ನು; **ಏನಸಾ**[ಯುಕ್ತಮ್]=ಪ್ರಜೆಗಳ ಸಂತಾಪಕ್ಕೆ ಕಾರಣನಾದ ಪಾಪಿಯೆಂದು; **ಆಹುಃ**=ಹೇಳುತ್ತಾರೆ; [ಈ ಯಜಮಾನನು]**ಸ್ತೋಕೌ ಮಧವ್ಯೌ**=ಸೋಮಯಜ್ಞದಿಂದ ಆರಾಧಿಸಲ್ಪಡಬೇಕಾದ ಚೈತ್ರ-ವೈಶಾಖಮಾಸಗಳ ವಿಷಯದಲ್ಲಿ; **ತೌ**=ಆ ಮಾಸಗಳನ್ನು ಕುರಿತು; **ಅಪರರಾಧ**=ಯಾಗವನ್ನು ಅನುಷ್ಠಿಸದೆ ತಪ್ಪೆಸಗಿದ್ದಾನೆ;[ಇದರಿಂದ ಅವನಿಗೆ ಪಾಪವು ಬಂದಿದೆ]

## ಸಂ ನಸ್ತಾಭ್ಯಾಗ್ಂ ಸೃಜತು ವಿಶ್ವಕರ್ಮಾ ಘೋರಾ ಋಷಯೋ ನಮೋ ಅಸ್ತ್ವೇಭ್ಯಃ ।

---

ಸಮಿತಿ । ನಃ । ತಾಭ್ಯಾಮ್ । ಸೃಜತು । ವಿಶ್ವಕರ್ಮೇತಿ ವಿಶ್ವ-ಕರ್ಮಾ । ಘೋರಾಃ । ಋಷಯಃ । ನಮಃ । ಅಸ್ತು । ಏಭ್ಯಃ ॥

---

| ಮಂತ್ರ | ವಿನಿಯೋಗ |
| --- | --- |
| ಘೋರಾ...ಅಸ್ಮಾನ್ ॥ | ವೈಶ್ವಕರ್ಮಣಹೋಮದ ಎರಡನೆಯ ಮಂತ್ರ |

---

[ಈಗ] **ವಿಶ್ವಕರ್ಮಾ**=ಪ್ರಪಂಚವನ್ನು ಸೃಷ್ಟಿಸುವ ವಿಶ್ವಕರ್ಮನು; **ನಃ**=ನಮ್ಮನ್ನು; **ತಾಭ್ಯಾಮ್**=[ಯಜ್ಞಾನುಷ್ಠಾನ ಮಾಡುವಂತೆ ಮಾಡಿ] ಆ ಮಾಸಗಳೊಡನೆ; **ಸಮ್ ಸೃಜತು**=ಸೇರಿಸಲಿ.✦[ಯೇ]**ಘೋರಾಃ ಋಷಯಃ**=ಯಾವ ಋಷಿಗಳು ನಮ್ಮ ಅಪರಾಧದಿಂದ ಕೋಪಿಸಿಕೊಂಡು ಉಗ್ರರಾಗಿರುತ್ತಾರೆಯೋ; **ಏಭ್ಯಃ ನಮಃ ಅಸ್ತು**=[ಶಾಂತರನ್ನಾಗಿ ಮಾಡಲು] ಇವರಿಗೆ ನಮಸ್ಕರಿಸುತ್ತೇನೆ.

---

ತಿಳಿಸಲಾಗಿದೆ. ನಾವು ಅನುಷ್ಠಿಸುತ್ತಿರುವ ಹೋಮಗಳಿಂದ ಆರಾಧಿಸಲ್ಪಡುತ್ತಿರುವ ದೇವತೆಗಳು ಆಜ್ಯದಿಂದ ತೃಪ್ತರಾಗಲಿ.

ಪ್ರಜೆಗಳು ಆಹಾರವಿಲ್ಲದೆ ದುಃಖಿತರಾದಾಗ ಋಷಿಗಳು ಯಾಗಕರ್ತರನ್ನು ಯಜ್ಞಾನುಷ್ಠಾನವನ್ನು ನಡೆಸದ ಕಾರಣ ಅವರನ್ನು ಪಾಪಿಗಳೆನ್ನುತ್ತಾರೆ. *ಯಜ್ಞದಿಂದ ವೃಷ್ಟಿಯು ಉಂಟಾಗುವುದು. ವೃಷ್ಟಿಯಿಂದ ಸಸ್ಯಸಂಪತ್ತು ಉಂಟಾಗಿ ಲೋಕದಲ್ಲಿ ಸುಭಿಕ್ಷವುಂಟಾಗುತ್ತದೆ.

---

*ಕಾಳಿದಾಸನು ದಿಲೀಪನ ರಾಜ್ಯಭಾರವನ್ನು ವರ್ಣಿಸುವಾಗ

ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಮ್ ।
ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್ ॥ ರಘುವಂಶ ಮಹಾಕಾವ್ಯ 1.26

ರಾಜನಾದ ದಿಲೀಪನು ಯಜ್ಞವನ್ನು ಅನುಷ್ಠಿಸಲು ಭೂಲೋಕದಲ್ಲಿ ತೆರಿಗೆಗಳನ್ನು ಸಂಗ್ರಹಿಸಿ, ಯಜ್ಞಾನುಷ್ಠಾನದಿಂದ ದೇವಲೋಕವನ್ನು ತೃಪ್ತಿಪಡಿಸಿದನು. ಇಂದ್ರನು ಮಳೆಯನ್ನು ಸುರಿಸಿ, ಸಸ್ಯೋತ್ಪಾದನೆಯನ್ನು ಮಾಡಿ ಭೂಲೋಕವನ್ನು ಸಂತೋಷಪಡಿಸಿದನು. ಹೀಗೆ ಇಂದ್ರ-ದಿಲೀಪರಲ್ಲಿ ಐಶ್ವರ್ಯದ ವಿನಿಮಯವಿದ್ದು ಎರಡು ಲೋಕಗಳೂ ಅವರಿಂದ ಪೋಷಿಸಲ್ಪಟ್ಟವು. ಎಂದು ಹೇಳಿದ್ದಾನೆ.

## ಚಕ್ಷುಷ ಏಷಾಂ ಮನಸಶ್ಚ ಸಂಧೌ ಬೃಹಸ್ಪತಯೇ ಮಹಿ ಷದ್ದ್ಯುಮನ್ನಮಃ । ನಮೋ ವಿಶ್ವಕರ್ಮಣೇ ಸ ಉ ಪಾತ್ವಸ್ಮಾನನನ್ಯಾನ್ಸೋಮಪಾನ್ಮನ್ಯಮಾನಃ ।

---

ಚಕ್ಷುಷಃ । ಏಷಾಮ್ । ಮನಸಃ । ಚ । ಸಂಧಾವಿತಿ ಸಂ-ಧೌ । ಬೃಹಸ್ಪತಯೇ । ಮಹಿ । ಸತ್ । ದ್ಯುಮದಿತಿ ದ್ಯು-ಮತ್ । ನಮಃ ॥ ನಮಃ । ವಿಶ್ವಕರ್ಮಣ ಇತಿ ವಿಶ್ವ-ಕರ್ಮಣೇ । ಸಃ । ಉ । ಪಾತು । ಅಸ್ಮಾನ್ । ಅನನ್ಯಾನ್ । ಸೋಮಪಾನಿತಿ ಸೋಮ-ಪಾನ್ । ಮನ್ಯಮಾನಃ ॥

---

| ಮಂತ್ರ | ವಿನಿಯೋಗ |
|---|---|
| ಅನನ್ಯಾನ್...ಸ್ವಸ್ತಯೇ ॥ | ವೈಶ್ವಕರ್ಮಣಹೋಮದ ಮೂರನೆಯ ಮಂತ್ರ. |

---

**ಏಷಾಮ್**=ಈ ಋಷಿಗಳ; **ಚಕ್ಷುಷಃ**=[ಅನುಗ್ರಹಪೂರ್ಣವಾದ] ಕಣ್ಣುಗಳಿಗೂ; **ಮನಸಃ ಚ**=[ಭಕ್ತಿಪೂರ್ಣವಾದ ನಮ್ಮ ಯಾಗಾನುಷ್ಠಾನಪರವಾದ] ಮನಸ್ಸಿಗೂ; **ಸಂಧೌ**=ಸೇರುವಿಕೆ/ಒಂದಾಗುವಿಕೆಯುಂಟಾಗುವುದಕ್ಕಾಗಿ; **ಬೃಹಸ್ಪತಯೇ**= ಬೃಹಸ್ಪತಿಗೆ /ವಿಶ್ವಕರ್ಮಪ್ರಜಾಪತಿಗೆ; **ಮಹಿ**=ಅಷ್ಟಾಂಗಯುಕ್ತವಾಗಿ ಮಹತ್ತಾಗಿರುವ; **ಸತ್**= ಶುಭಕರವಾದ/ಮನಸ್ಸಿಗೆ ಮುಟ್ಟುವಂತೆ ಮಾಡುವ; **ದ್ಯುಮತ್**=ಭಕ್ತಿ ರಸಯುಕ್ತವಾಗಿ ಪ್ರಕಾಶಿಸುವ; **ನಮಃ**=ನಮಸ್ಕಾರವನ್ನು [ಮಾಡುತ್ತೇವೆ]. **ವಿಶ್ವ ಕರ್ಮಣೇ ನಮಃ**=ವಿಶ್ವಕರ್ಮನಾದ ಪ್ರಜಾಪತಿಗೆ ನಮಸ್ಕಾರವು. **ಸಃ ಉ ಅಸ್ಮಾನ್ ಪಾತು**= ಆವನು ನಮ್ಮನ್ನು ರಕ್ಷಿಸಲಿ. ✦**ವಿಶ್ವಕರ್ಮನ್**=ವಿಶ್ವಕರ್ಮಪ್ರಜಾಪತಿಯೇ! **ಅನನ್ಯಾನ್**=ನಿನ್ನನ್ನು ಬಿಟ್ಟು ಬೇರೆಯ ರಕ್ಷಕರಿಲ್ಲದ ನಮ್ಮನ್ನು; **ಸೋಮಪಾನ್ ಮನ್ಯಮಾನಃ**=ಸೋಮಯಾಗವನ್ನು ಮಾಡಿದವರಂತೆ ಭಾವಿಸಿದವನಾಗಿ;

ಪ್ರಾಣಸ್ಯ ವಿದ್ವಾನ್ಥ್ಸಮರೇ ನ ಧೀರ ಏನಶ್ಚಕೃವಾನ್ಮಹಿ

ಬದ್ಧ ಏಷಾಮ್ । ತಂ ವಿಶ್ವಕರ್ಮ

[ವಿಶ್ವಕರ್ಮನ್(೩೦)ಪ್ರಮುಂಚಾ]ನ್ಪ್ರಮುಂಚಾ ಸ್ವಸ್ತಯೇ

---

ಪ್ರಾಣಸ್ಯೇತಿ ಪ್ರ-ಅನಸ್ಯ । ವಿದ್ವಾನ್ । ಸಮರ ಇತಿ ಸಂ-ಅರೇ । ನ । ಧೀರಃ । ಏನಃ । ಚಕೃವಾನ್ । ಮಹಿ । ಬದ್ಧಃ । ಏಷಾಮ್ ॥ ತಮ್ । ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್।(೩೦)। ಪ್ರೇತಿ। ಮುಂಚ। ಸ್ವಸ್ತಯೇ।

---

ಸಮರೇ ಪ್ರಾಣಸ್ಯ=ಯುದ್ಧದಲ್ಲಿ [ಶತ್ರುವಾಗಿದ್ದರೂ ಅವನ] ಪ್ರಾಣಕ್ಕೆ ಅಪಾಯ ವುಂಟಾಗಿರುವುದನ್ನು; ವಿದ್ವಾನ್=ತಿಳಿದವನಾಗಿ; ಧೀರಃ ನ=[ಶರಣಾಗತನಾಗುವ ಶತ್ರುವನ್ನು ರಕ್ಷಿಸುವ] ಧೀರಪುರುಷನಂತೆ; [ಅನನ್ಯಭಕ್ತರಾದ ನಮ್ಮನ್ನು ರಕ್ಷಿಸಲು ಅರ್ಹನಾಗಿದ್ದೀಯೆ.] ಬದ್ಧಃ=ತಮೋಗುಣದಿಂದ/ಪಾಪದಿಂದ ಬದ್ಧನಾಗಿರುವ ಈ ಯಜಮಾನನು; ಏಷಾಮ್=ಈ ಋಷಿಗಳ ವಿಷಯದಲ್ಲಿ; ಮಹಿ ಏನಃ=ಹೆಚ್ಚಾದ ಅಪರಾಧವನ್ನು; ಚಕೃವಾನ್=ಮಾಡಿದವನಾಗಿದ್ದಾನೆ. ತಮ್=ಆ ಯಜಮಾನನನ್ನು; ಸ್ವಸ್ತಯೇ=ಕ್ಷೇಮಕ್ಕಾಗಿ/ಅವಿನಾಶವನ್ನು ಹೊಂದುವುದಕ್ಕಾಗಿ; ಪ್ರಮುಂಚ=ಪಾಪ ದಿಂದ ರಕ್ಷಿಸು.

---

ವಿಶ್ವಕರ್ಮನು ಯಜ್ಞಕರ್ತರನ್ನು ಪ್ರೇರಿಸಿ ಸೋಮಯಾಗವನ್ನು ಅನುಷ್ಠಿಸುವಂತೆ ಮಾಡಲಿ. ಪುನಃ ತಪ್ಪು ಮಾಡದಂತೆ ಮಾಡಲಿ.

ವಿಶ್ವಕರ್ಮನು ನಮ್ಮ ನಮಸ್ಕಾರದಿಂದ ಸಂತುಷ್ಟನಾಗಿ ಋಷಿಗಳು ನಮ್ಮನ್ನು ಕೃಪಾಕಟಾಕ್ಷದಿಂದ ನೋಡುವಂತೆ ಮಾಡಲಿ. ನಮ್ಮ ಮನಸ್ಸಿನಲ್ಲಿ ಯಾಗವನ್ನು ಅನುಷ್ಠಿಸುವಂತೆ ಪ್ರೇರಿಸಲಿ. ನಮ್ಮನ್ನು ರಕ್ಷಿಸಲಿ.

ಯಜಮಾನನು ತನ್ನ ತಪ್ಪನ್ನು ತಿಳಿದು ವಿಶ್ವಕರ್ಮಪ್ರಜಾಪತಿಗೆ ಶರಣಾಗಿದ್ದಾನೆ. ಆ ವಿಶ್ವಕರ್ಮನು ಯಜಮಾನನನ್ನು ರಕ್ಷಿಸಿ ಕ್ಷೇಮವನ್ನುಂಟುಮಾಡಲಿ.

ಯೇ ಭಕ್ಷಯಂತೋ ನ ವಸೂನ್ಯಾನೃಹುಃ । ಯಾನಗ್ನಯೋ ಽನ್ವತಪ್ಯಂತ ಧಿಷ್ಣಿಯಾ ಇಯಂ ತೇಷಾಮವಯಾ ದುರಿಷ್ಟ್ಯೈ೪ಲ ಸ್ವಿಷ್ಟಿಂ ನಸ್ತಾಂ ಕೃಣೋತು ವಿಶ್ವಕರ್ಮಾ ॥

---

ಯೇ । ಭಕ್ಷಯಂತಃ । ನ । ವಸೂನಿ । ಆನೃಹುಃ ॥ ಯಾನ್ । ಅಗ್ನಯಃ । ಅನ್ವತಪ್ಯಂತೇತ್ಯನು-ಅತಪ್ಯಂತ । ಧಿಷ್ಣಿಯಾಃ । ಇಯಮ್ । ತೇಷಾಮ್ । ಅವಯಾ । ದುರಿಷ್ಟ್ಯಾ ಇತಿ ದುಃ-ಇಷ್ಟ್ಯೈ೪ಲ । ಸ್ವಿಷ್ಟಿಮಿತಿ ಸು-ಇಷ್ಟಿಮ್ । ನಃ । ತಾಮ್ । ಕೃಣೋತು । ವಿಶ್ವಕರ್ಮೇತಿ ವಿಶ್ವ-ಕರ್ಮಾ ॥

---

| ಮಂತ್ರ | ವಿನಿಯೋಗ |
|---|---|
| ಯೇ ಭಕ್ಷಯಂತೋ...ವಿಶ್ವಕರ್ಮಾ ॥ | ವೈಶ್ವಕರ್ಮಣಹೋಮದ ನಾಲ್ಕನೆಯ ಮಂತ್ರ. |

---

✦**ಯೇ ಭಕ್ಷಯಂತಃ** ನ=ಯಾರು ಸೋಮಭಕ್ಷಣ ಮಾಡುವರಂತೆ ನಟಿಸುತ್ತಾ ಯಜ್ಞಭಿಕ್ಷೆಯನ್ನು ಮಾಡಿ; **ವಸೂನಿ**=ಗವಾದಿಧನಾದಿಗಳನ್ನು; **ಆನೃಹುಃ**=ಪೂಜಿಸಿದರೋ/ತಮ್ಮ ಭೋಗಕ್ಕಾಗಿಯೇ ಉಪಯೋಗಿಸಿಕೊಂಡರೋ; **ಯಾನ್**=ಯಾರನ್ನು ಕುರಿತು; **ಧಿಷ್ಣಿಯಾಃ ಅಗ್ನಯಃ**=ಧಿಷ್ಣಿಯಸ್ಥಾನದಲ್ಲಿರುವ ಅಗ್ನಿಗಳು; **ಅನ್ವತಪ್ಯಂತ**=[ಇವರು ಹೀಗೆ ನಡೆದುಕೊಂಡರಲ್ಲ ಎಂದು]ನೊಂದುಕೊಂಡರೋ; **ತೇಷಾಮ್**=ಅಂತಹವರ; **ದುರಿಷ್ಟ್ಯೈ೪ಲ**=ಯಾಗವನ್ನು ಅನುಷ್ಠಿಸದೆ ಧನವನ್ನು ವ್ಯಯಮಾಡುವಿಕೆಗೆ; [ಆ ದೋಷಕ್ಕೆ] **ಇಯಮ್**=ಈ ಆಹುತಿಯು; **ಅವಯಾ**=[ಭವತು] ಪಾಪನಾಶಕವಾಗಿ/ಪರಿಹಾರಕವಾಗಿ;[ಆಗಲಿ]**ವಿಶ್ವಕರ್ಮಾ**=ಪ್ರಜಾಪತಿದೇವನು; **ನಃ**= ನಮ್ಮ; **ತಾಮ್**=ಆ ದುರಿಷ್ಟಿಯನ್ನು; **ಸ್ವಿಷ್ಟಿಮ್**=ಒಳ್ಳೆಯ ಯಾಗವನ್ನಾಗಿ; **ಕೃಣೋತು**=ಮಾಡಲಿ.

---

ಯಾಗವನ್ನು ಮಾಡುವೆನೆಂದು ನಟಿಸುತ್ತಾ, ಆ ನೆಪದಿಂದ ಹಣವನ್ನು ಗಳಿಸಿ, ತಾವು ತಮ್ಮ ಭೋಗಕ್ಕಾಗಿ ಉಪಯೋಗಿಸುವುದು ಅಪರಾಧ. ಆ ರೀತಿ ಸಂಗ್ರಹಿಸಿದ ಧನದಲ್ಲಿ

**ನಮಃ ಪಿತೃಭ್ಯೋ ಅಭಿ ಯೇ ನೋ ಅಖ್ಯನ್**
**ಯಜ್ಞಕೃತೋ ಯಜ್ಞಕಾಮಾಸ್ಸುದೇವಾ ಅಕಾಮಾ ವೋ**
**ದಕ್ಷಿಣಾಂ ನ ನೀನಿಮ ಮಾ ನಸ್ತಸ್ಮಾದೇನಸಃ ಪಾಪಯಿಷ್ಟ ॥**

---

ನಮಃ । ಪಿತೃಭ್ಯ ಇತಿ ಪಿತೃ-ಭ್ಯಃ । ಅಭೀತಿ । ಯೇ । ನಃ । ಅಖ್ಯನ್ । ಯಜ್ಞಕೃತ ಇತಿ ಯಜ್ಞ-ಕೃತಃ । ಯಜ್ಞಕಾಮಾ ಇತಿ ಯಜ್ಞ-ಕಾಮಾಃ । ಸುದೇವಾ ಇತಿ ಸು-ದೇವಾಃ । ಅಕಾಮಾಃ । ವಃ । ದಕ್ಷಿಣಾಮ್ । ನ । ನೀನಿಮ । ಮಾ । ನಃ । ತಸ್ಮಾತ್ । ಏನಸಃ । ಪಾಪಯಿಷ್ಟ ॥

---

| ಮಂತ್ರ | ವಿನಿಯೋಗ |
|---|---|
| **ನಮಃ ಪಿತೃಭ್ಯೋ...ಪಾಪಯಿಷ್ಟ ॥** | ವೈಶ್ವಕರ್ಮಣಹೋಮದ ಐದನೆಯ ಮಂತ್ರ. |

---

✦**ಯೇ ನಃ ಅಭಿ ಅಖ್ಯನ್**=ಯಾವ ಪಿತೃಗಳು ಯಜ್ಞಭಾಗಕ್ಕಾಗಿ ನಮ್ಮನ್ನು ಎದುರು ನೋಡುತ್ತಾರೆಯೋ; **ಯಜ್ಞಕೃತಃ**=ಹಿಂದೆ ತಾವೂ ಯಜ್ಞವನ್ನು ಅನುಷ್ಠಿಸಿದರೋ /ನಮ್ಮಿಂದ ಯಜ್ಞವನ್ನು ಅನುಷ್ಠಾನ ಮಾಡಿಸಿದರೋ; **ಯಜ್ಞಕಾಮಾಃ**=ನಾವು ಯಜ್ಞವನ್ನು ಅನುಷ್ಠಿಸುತ್ತಿರಬೇಕೆಂದು ಬಯಸುವರೋ; **ಸುದೇವಾಃ**=ಚೆನ್ನಾಗಿ ಪ್ರಕಾಶಿಸುವರೋ;[ತೇಭ್ಯಃ=ಆ] **ಪಿತೃಭ್ಯಃ ನಮಃ**=ಪಿತೃದೇವತೆಗಳಿಗೆ ನಮಸ್ಕಾರವು; **ವಃ**=ನಿಮಗಾಗಿ; **ಅಕಾಮಾಃ**=ಪ್ರಮಾದ-ಆಲಸ್ಯಾದಿಯುಕ್ತರಾದ ನಾವು; **ದಕ್ಷಿಣಾಮ್ ನ ನೀನಿಮ**=ದಕ್ಷಿಣಾಯುಕ್ತವಾದ ಯಾಗಗಳನ್ನು ಮಾಡಲಿಲ್ಲ; **ನಃ**=ನಮ್ಮನ್ನು; **ತಸ್ಮಾತ್ ಏನಸಃ**=ಆ ಪಾಪದಿಂದ; **ಮಾ ಪಾಪಯಿಷ್ಟ**=ಪಾಪಿಗಳನ್ನಾಗಿ ಮಾಡದಿರಿ.

---

ಅಲ್ಪಭಾಗವನ್ನು ಯಾಗಾದಿಗಳಿಗೆ ಉಪಯೋಗಿಸುವುದು ದುರಿಷ್ಟಿ. ಇಂತಹ ದುರಿಷ್ಟಿ ಅಥವಾ ಅನಿಷ್ಟಿಯ ದೋಷವನ್ನು ಈ ಆಹುತಿಯು ಪರಿಹರಿಸಲಿ. ವಿಶ್ವಕರ್ಮಪ್ರಜಾಪತಿಯು ಈ ಯಾಗವನ್ನು ಒಳ್ಳೆಯ ಯಾಗವನ್ನಾಗಿ ಮಾಡಲಿ.

ಯಾವಂತೋ ವೈ ಸದಸ್ಯಾಸ್ತೇ ಸರ್ವೇ ದಕ್ಷಿಣ್ಯಾಸ್ತೇಭ್ಯೋ

ಯೋ ದಕ್ಷಿಣಾಂ ನ [(೩೧)]ನಯೇದೈಭ್ಯೋ ವೃಶ್ಚ್ಯೇತ

ಯದ್ವೈಶ್ವಕರ್ಮಣಾನಿ ಜುಹೋತಿ ಸದಸ್ಯಾನೇವ ತತ್ಪ್ರೀಣಾ–

---

ಯಾವಂತಃ । ವೈ । ಸದಸ್ಯಾಃ । ತೇ । ಸರ್ವೇ । ದಕ್ಷಿಣ್ಯಾಃ । ತೇಭ್ಯಃ । ಯಃ ।

ದಕ್ಷಿಣಾಮ್ । ನ ।(೩೧)। ನಯೇತ್ । ಐತಿ । ಏಭ್ಯಃ । ವೃಶ್ಚ್ಯೇತ । ಯತ್ ।

ವೈಶ್ವಕರ್ಮಣಾನೀತಿ ವೈಶ್ವ–ಕರ್ಮಣಾನಿ । ಜುಹೋತಿ । ಸದಸ್ಯಾನ್ । ಏವ ।

ತತ್ । ಪ್ರೀಣಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ವೈಶ್ವಕರ್ಮಣಹೋಮವಿಧಿ; ಅರ್ಥವಾದ

| | |
|---|---|
| ಯಾವಂತಃ ವೈ ಸದಸ್ಯಾಃ | ಯಜ್ಞಸಭೆಗೆ ಬಂದಿರುವ ಸದಸ್ಯರು ಎಷ್ಟು ಮಂದಿಯಿದ್ದಾರೆಯೋ |
| ತೇ ಸರ್ವೇ ದಕ್ಷಿಣ್ಯಾಃ | ಅವರೆಲ್ಲರೂ ದಕ್ಷಿಣೆಯನ್ನು ಪಡೆಯಲು ಅರ್ಹರೇ ಆಗಿರುತ್ತಾರೆ. |
| ತೇಭ್ಯಃ ಯಃ ದಕ್ಷಿಣಾಮ್ ನ ನಯೇತ್ ಏಭ್ಯಃ ಆ ವೃಶ್ಚ್ಯೇತ | ಯಾವ ಯಜಮಾನನು ಅವರಿಗೆ ತಕ್ಕ ದಕ್ಷಿಣೆಯನ್ನು ಕೊಡುವುದಿಲ್ಲವೋ[ಅವನು] ಈ ಸದಸ್ಯರಿಂದ ಬೇರ್ಪಟ್ಟವನಾಗುತ್ತಾನೆ./ಅವರ ಅನುಗ್ರಹವು ಲಭಿಸುವುದಿಲ್ಲ. |
| ಯತ್ ವೈಶ್ವಕರ್ಮಣಾನಿ ಜುಹೋತಿ | ವೈಶ್ವಕರ್ಮಣಹೋಮಗಳನ್ನು ಮಾಡುವುದು ಯಾವುದುಂಟೋ |
| ಸದಸ್ಯಾನ್ ಏವ ತತ್ ಪ್ರೀಣಾತಿ | ಅದು ಸದಸ್ಯರನ್ನು ಸಂತೋಷಪಡಿಸುತ್ತದೆ/ ಅದರಿಂದ ಸದಸ್ಯರನ್ನು ಸಂತೋಷಪಡಿಸಿದವನಾಗುತ್ತಾನೆ. |

ತ್ವಸ್ಮೇ ದೇವಾಸೋ ವಪುಷೇ ಚಿಕಿತ್ಸತ ಯಮಾಶಿರಾ ದಂಪತೀ ವಾಮಮಶ್ನುತಃ । ಪುಮಾನ್ಪುತ್ರೋ ಜಾಯತೇ ವಿಂದತೇ ವಸ್ವಥ ವಿಶ್ವೇ ಅರಪಾ ಏಧತೇ ಗೃಹಃ ॥

ಅಸ್ಮೇ ಇತಿ । ದೇವಾಸಃ । ವಪುಷೇ । ಚಿಕಿತ್ಸತ । ಯಮ್ । ಆಶಿರಾ । ದಂಪತೀ ಇತಿ । ವಾಮಮ್ । ಅಶ್ನುತಃ ॥ ಪುಮಾನ್ । ಪುತ್ರಃ । ಜಾಯತೇ । ವಿಂದತೇ । ವಸು । ಅಥ । ವಿಶ್ವೇ । ಅರಪಾಃ । ಏಧತೇ । ಗೃಹಃ ।

| ಮಂತ್ರ | ವಿನಿಯೋಗ |
|---|---|
| ಅಸ್ಮೇ ದೇವಾಸೋ...ಗೃಹಃ ॥ | **'ಪೂತಭೃತ್'** ಎಂಬ ಸೋಮಪಾತ್ರೆಯಲ್ಲಿ ಆಶಿರ [ಕಡೆದ ಮೊಸರು] ವನ್ನು ಪತ್ನೀಸಮೇತನಾಗಿ ಹಾಕಲು ಹೇಳುವ ನಾಲ್ಕು ಮಂತ್ರಗಳಲ್ಲಿ ಮೊದಲನೆಯದು. |

✦**ದೇವಾಸಃ**=ಓ! ದೇವತೆಗಳೇ! **ದಂಪತೀ**=ಪತ್ನೀ-ಯಜಮಾನರು; **ಯಮ್ ವಾಮಮ್** [**ವಪುಃ**]=ಯಾವ ಸುಂದರವಾದ/ಪಾಪರಹಿತವಾದ[ಶರೀರವನ್ನು]; ***ಆಶಿರಾ**=ಆಶಿರದಿಂದ [ಇಲ್ಲಿ ಹಾಕುತ್ತಿರುವ ದಧಿವಿಶೇಷದಿಂದ] **ಅಶ್ನುತಃ**=ಪಡೆಯುತ್ತಾರೆಯೋ; **ಅಸ್ಮೇ**=ನಮ್ಮ; **ವಪುಷೇ ಚಿಕಿತ್ಸತ**=ಅಂತಹ ಶರೀರಕ್ಕಾಗಿ ಚಿಕಿತ್ಸೆ ಮಾಡಿರಿ. **ಪುಮಾನ್ ಪುತ್ರಃ *ಜಾಯತೇ**=ಪುರುಷಲಕ್ಷಣಯುಕ್ತನಾದ ಮಗನು ಹುಟ್ಟಲಿ. **ವಸು ವಿಂದತೇ**=ಧನವು ಅವನನ್ನು/ನಮ್ಮನ್ನು ಹೊಂದಲಿ. **ಅಥ**=ಮತ್ತು; **ವಿಶ್ವೇ**=ನಮ್ಮ ಸಂಬಂಧಿಗಳೆಲ್ಲರೂ; **ಅರಪಾಃ**=ಪಾಪರಹಿತರಾಗಲಿ; **ಗೃಹಃ ಏಧತೇ**=ಮನೆಯಲ್ಲಿರುವ ಜನವೆಲ್ಲವೂ ಸರ್ವವಿಧವಾದ ಅಭಿವೃದ್ಧಿಯನ್ನು ಹೊಂದಲಿ.

*'**ಆಶಿರ್**' ಎಂಬುದು ರೇಫಾಂತ ಶಬ್ದ. ಆದರ ತೃತೀಯಾವಿಭಕ್ತಿಯ ರೂಪವಿದು. ಇದು ದಧಿವಿಶೇಷಕ್ಕೆ ಸಂಜ್ಞೆ. '**ಆಶಿಸ್**' ಎಂದು ಸಕಾರಾಂತವಾದರೆ ಶುಭಾಶಂಸನೆ ಎಂದು ಅರ್ಥ.

* ಜಾಯತೇ=ಜಾಯತಾಮ್ । ವಿಂದತೇ=ವಿಂದತಾಮ್ । ಏಧತೇ=ಏಧತಾಮ್-ಎಂದು ಲೋಟ್ ಲಕಾರಾಂತದ ಆಶೀರರ್ಥವನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಈ ರೀತಿ ವಿಭಕ್ತಿ-ವಚನ ಪುರುಷ-ಲಕಾರ-ವಿಪರ್ಯಯಗಳು ಛಾಂದಸಗಳೆಂದು ವೈಯಾಕರಣರ ಮತ.

ಆಶೀರ್ದಾಯಾ ದಂಪತೀ ವಾಮಮಶ್ನುತಾಮರಿಷ್ಟೋ ರಾಯಸ್ಸಚತಾಗ್ಂ ಸಮೋಕಸಾ । ಯ ಆಸಿಚತ್ಸಂದುಗ್ಧಂ ಕುಂಭ್ಯಾ ಸಹೇಷ್ಟೇನ ಯಾಮನ್ನಮತಿಂ ಜಹಾತು ಸಃ ॥

---

ಆಶೀರ್ದಾಯೇತ್ಯಾಶೀಃ-ದಾಯಾ । ದಂಪತೀ ಇತಿ । ವಾಮಮ್ । ಅಶ್ನುತಾಮ್ । ಅರಿಷ್ಟಃ । ರಾಯಃ । ಸಚತಾಮ್ । ಸಮೋಕಸೇತಿ ಸಂ-ಓಕಸಾ ॥ ಯಃ । ಆ । ಅಸಿಚತ್ । ಸಂದುಗ್ಧಮಿತಿ ಸಂ-ದುಗ್ಧಮ್ । ಕುಂಭ್ಯಾ । ಸಹ । ಇಷ್ಟೇನ । ಯಾಮನ್ । ಅಮತಿಮ್ । ಜಹಾತು । ಸಃ ॥

---

| ಮಂತ್ರ | ವಿನಿಯೋಗ |
|---|---|
| ಆಶೀರ್ದಾಯಾ...ಸಃ ॥ | ಆಶೀಃಸೇಚನಕ್ಕಾಗಿರುವ ಎರಡನೆಯ ಮಂತ್ರ. |

---

✦**ಆಶೀರ್ದಾಯಾ**=ದಧಿವಿಶೇಷವನ್ನು ಕೊಡುವ; **ಸಮೋಕಸಾ**=ಒಂದೇ ಮನೆಯಲ್ಲಿ ಪ್ರೀತಿಯಿಂದ ಬಾಳುತ್ತಿರುವ; **ದಂಪತೀ**=ಯಜಮಾನ ಮತ್ತು ಪತ್ನೀ ಇವರು; **ವಾಮಮ್**=ಮಂಗಲವನ್ನು; **ಅಶ್ನುತಾಮ್**=ಹೊಂದಲಿ;[ಸಪತ್ನೀಕನಾದ ಯಜಮಾನನು] **ಅರಿಷ್ಟಃ**=ಹಿಂಸಾರಹಿತನಾಗಿ; **ರಾಯಃ ಸಚತಾಮ್**=ವಿವಿಧ ಧನಗಳನ್ನು ಹೊಂದಲಿ; **ಯಃ**=ಯಾವ ಯಜಮಾನನು; **ಇಷ್ಟೇನ ಸಹ**=ಪ್ರೀತಿಯಿಂದ ಕೂಡಿದವನಾಗಿ; **ಕುಂಭ್ಯಾ**=ಕಲಶದಿಂದ/ಪಾತ್ರದಿಂದ; **ಸಂದುಗ್ಧಮ್**=ಆಶಿರವಾಗಿ ಪರಿಣಮಿಸಿರುವ ಹಾಲನ್ನು; **ಯಾಮನ್ ಆ ಅಸಿಚತ್**=ಆಧಾರವಾಗಿರುವ ಸೋಮನಲ್ಲಿ ಸುತ್ತಲೂ ಸಂಪೂರ್ಣವಾಗಿ ಹಾಕಿದನೋ; **ಸಃ**=ಆ ಸಪತ್ನೀಕಯಜಮಾನನು; **ಅಮತಿಮ್**=ರೋಗವನ್ನು/ದುರ್ಬುದ್ಧಿಯನ್ನು/ಅಜ್ಞಾನವನ್ನು; **ಜಹಾತು**=ದೂರ ಮಾಡಲಿ.

---

ಪಿತೃದೇವತೆಗಳು ಯಜ್ಞಪ್ರೇರಕರು. ತಮ್ಮ ಸಂತತಿಯವರು ಯಜ್ಞ ಮಾಡುತ್ತಿರಬೇಕೆಂದು ಬಯಸುತ್ತಿರುತ್ತಾರೆ. ಅವರು ಕಾಮ-ಕ್ರೋಧರಹಿತರು. ಅಂತಹ ಪಿತೃ-

**ಸರ್ಪಿರ್ಗ್ರೀವೀ[(೩೨)] ಪೀವರ್ಯಸ್ಯ ಜಾಯಾ ಪೀವಾನಃ ಪುತ್ರಾ ಅಕೃಶಾಸೋ ಅಸ್ಯ । ಸಹಜಾನಿರ್ಯಸ್ಸುಮಖಸ್ಯಮಾನ ಇಂದ್ರಾಯಾಶಿರಗ್ಂ ಸಹ ಕುಂಭ್ಯಾಽದಾತ್ ॥**

---

ಸರ್ಪಿರ್ಗ್ರೀವೀತಿ ಸರ್ಪಿಃ-ಗ್ರೀವೀ ।(೩೨)। ಪೀವರೀ । ಅಸ್ಯ । ಜಾಯಾ । ಪೀವಾನಃ । ಪುತ್ರಾಃ । ಅಕೃಶಾಸಃ । ಅಸ್ಯ ॥ ಸಹಜಾನಿರಿತಿ ಸಹ-ಜಾನಿಃ । ಯಃ । ಸುಮಖಸ್ಯಮಾನ ಇತಿ ಸು-ಮಖಸ್ಯಮಾನಃ । ಇಂದ್ರಾಯ । ಆಶಿರಮ್ । ಸಹ । ಕುಂಭ್ಯಾ । ಅದಾತ್ ॥

---

| ಮಂತ್ರ | ವಿನಿಯೋಗ |
|---|---|
| ಸರ್ಪಿರ್ಗ್ರೀವೀ...ದಾತ್ ॥ | ಆಶಿರವನ್ನು ಹಾಕಲು ಮೂರನೆಯ ಮಂತ್ರ. |

---

✦**ಯಃ**=ಯಾವ ಯಜಮಾನನು; **ಸುಮಖಸ್ಯಮಾನಃ**=ಒಳ್ಳೆಯ ಯಾಗವು ಬೇಕೆಂಬ ಮನಸ್ಸುಳ್ಳವನಾಗಿ; **ಕುಂಭ್ಯಾ ಸಹ**=ದಧಿವಿಶೇಷದಿಂದ ಕೂಡಿದ ಕುಂಭದೊಡನೆ/ಪೂರ್ಣವಾದ ಪಾತ್ರದಿಂದ; **ಸಹಜಾನಿಃ**=ಪತ್ನೀಸಮೇತನಾಗಿ; **ಇಂದ್ರಾಯ**=ಇಂದ್ರ ದೇವನಿಗಾಗಿ; **ಆಶಿರಮ್**=ದಧಿವಿಶೇಷವನ್ನು; **ಅದಾತ್**=ಕೊಟ್ಟನೋ; **ಅಸ್ಯ ಜಾಯಾ**=ಈ ಯಜಮಾನನ ಪತ್ನಿಯು; **ಸರ್ಪಿರ್ಗ್ರೀವೀ**=ಕೋಮಲಕಂಠಧ್ವನಿಯುಳ್ಳವಳಾಗಿ; **ಪೀವರೀ**=ಪುಷ್ಟವಾದ/ತುಂಬಿಕೊಂಡಿರುವ ಅಂಗವುಳ್ಳವಳಾಗಿ; [ಆಗಲಿ]; **ಅಸ್ಯ ಪುತ್ರಾಃ**=ಇವನ ಮಕ್ಕಳು; **ಪೀವಾನಃ**=ಪುಷ್ಟರಾಗಿಯೂ; **ಅಕೃಶಾಸಃ**= ರೋಗಾದಿಗಳಿಂದ ಕೃಶರಾಗದವರಾಗಿಯೂ [ಆಗಲಿ]

---

**ದೇವತೆಗಳಿಗೆ ನಮಸ್ಕಾರ. ನಾವು ಪ್ರಮಾದಾಲಸ್ಯಾದಿಗಳಿಂದ ಯಾಗವನ್ನು ಅನುಷ್ಠಿಸದೇ ಬಿಟ್ಟಿದ್ದೆವು. ಅದರಿಂದ ನಮಗೆ ಪಾಪವು ತಟ್ಟದಿರಲೆಂದು ಪಿತೃಗಳನ್ನು ಪ್ರಾರ್ಥಿಸುತ್ತೇವೆ.**

ಆಶೀರ್ಮ ಊರ್ಜಮುತ ಸುಪ್ರಜಾಸ್ತ್ವಮಿಷಂ ದಧಾತು ದ್ರವಿಣಗ್ಂ ಸವರ್ಚಸಮ್ । ಸಂಜಯನ್ಕ್ಷೇತ್ರಾಣಿ ಸಹಸಾಹ-ಮಿಂದ್ರ ಕೃಣ್ವಾನೋ ಅನ್ಯಾಗ್ಂ ಅಧರಾನ್ತ್ಸಪತ್ನಾನ್ ॥

*ಆಶೀರಿತ್ಯಾ-ಶೀಃ । ಮೇ । ಊರ್ಜಮ್ । ಉತ । ಸುಪ್ರಜಾಸ್ತ್ವಮಿತಿ ಸುಪ್ರಜಾಃ-ತ್ವಮ್ । ಇಷಮ್ । ದಧಾತು । ದ್ರವಿಣಮ್ । ಸವರ್ಚಸಮಿತಿ ಸ-ವರ್ಚಸಮ್ ॥ ಸಂಜಯನ್ನಿತಿ ಸಂ-ಜಯನ್ । ಕ್ಷೇತ್ರಾಣಿ । ಸಹಸಾ । ಅಹಮ್ । ಇಂದ್ರ । ಕೃಣ್ವಾನಃ । ಅನ್ಯಾನ್ । ಅಧರಾನ್ । ಸಪತ್ನಾನ್ ॥

| ಮಂತ್ರ | ವಿನಿಯೋಗ |
|---|---|
| ಆಶೀರ್ಮ...ಸಪತ್ನಾನ್ ॥ | ಆಶಿರವನ್ನು ಹಾಕುವುದರಲ್ಲಿ ಇದು ನಾಲ್ಕನೆಯ ಮಂತ್ರ. |

✦[ಇಂದ್ರನು]**ಮೇ**=ನನಗಾಗಿ; **ಊರ್ಜಮ್**=ಬಲವನ್ನೂ; **ಉತ**=ಮತ್ತು; **ಸುಪ್ರಜಾಸ್ತ್ವಮ್**=ಒಳ್ಳೆಯ ಪುತ್ರವಂತನಾಗುವಿಕೆಯನ್ನೂ; **ಸವರ್ಚಸಮ್**=ಕಾಂತಿ/ಬಲಸಹಿತವಾದ; **ದ್ರವಿಣಮ್**=ಧನವನ್ನೂ; **ಇಷಮ್**=ಅನ್ನವನ್ನೂ; **ದಧಾತು**=ಧರಿಸಲಿ[ಕೊಡಲಿ]; **ಇಂದ್ರ**=ಇಂದ್ರನೇ! **ಅಹಮ್**=ನಾನು; **ಸಹಸಾ**=ಬಲದಿಂದ; **ಕ್ಷೇತ್ರಾಣಿ**=ವೈರಿಗಳ ಭೂಮಿಯನ್ನು; **ಸಂಜಯನ್**=ಗೆಲ್ಲುವವನಾಗಿ; **ಅನ್ಯಾನ್ ಸಪತ್ನಾನ್**=ಬೇರೆಯ ಶತ್ರುಗಳನ್ನು; **ಅಧರಾನ್**=ಅಧೀನರನ್ನಾಗಿ/ಆಜ್ಞಾವಶವರ್ತಿಗಳನ್ನಾಗಿ; **ಕೃಣ್ವಾನಃ**=ಮಾಡುವವನಾಗಿ[ಆಗುವಂತೆ ಅನುಗ್ರಹಿಸು] [ಇದು] **ಮೇ *ಆಶೀಃ**=ನನ್ನ ಪ್ರಾರ್ಥನೆಯಾಗಿದೆ.

ಯಾಗಕ್ಕೆ ಬಂದ ಸದಸ್ಯರೆಲ್ಲರನ್ನೂ ದಕ್ಷಿಣೆ ಮೊದಲಾದವುಗಳಿಂದ ಸಂತೋಷಪಡಿಸಬೇಕು. ಪ್ರಮಾದದಿಂದ ಯಾರನ್ನಾದರೂ ಮರೆತುಬಿಟ್ಟರೆ ಆ ದೋಷವು ವೈಶ್ವಕರ್ಮಣ

ರೇಫಾಂತವಾದ '**ಆಶಿರ್**' ಶಬ್ದಕ್ಕೆ ಪದಕಾರರು ಪ್ರಗ್ರಹವನ್ನು ಹೇಳುವುದಿಲ್ಲ. ಶುಭಾಶಂಸಾರೂಪವಾದ ಷಕಾರಾಂತವಾದ '**ಆಶಿಷ್**' ಶಬ್ದಕ್ಕೆ "**ಆಶೀರಿತ್ಯಾ-ಶೀಃ**" ಎಂದು ಪ್ರಗ್ರಹವು ಇದೆ.

# ಭೂತಮಸಿ ಭೂತೇ ಮಾ ಧಾ ಮುಖಮಸಿ ಮುಖಂ ಭೂಯಾಸಂ ದ್ಯಾವಾಪೃಥಿವೀಭ್ಯಾಂ ತ್ವಾ ಪರಿಗೃಹ್ಣಾಮಿ

---

ಭೂತಮ್ । ಅಸಿ । ಭೂತೇ । ಮಾ । ಧಾಃ । ಮುಖಮ್ । ಅಸಿ । ಮುಖಮ್ । ಭೂಯಾಸಮ್ । ದ್ಯಾವಾಪೃಥಿವೀಭ್ಯಾಮಿತಿ ದ್ಯಾವಾ-ಪೃಥಿವೀಭ್ಯಾಮ್ । ತ್ವಾ । ಪರೀತಿ । ಗೃಹ್ಣಾಮಿ ।

---

| ಮಂತ್ರ | ವಿನಿಯೋಗ |
|---|---|
| ಭೂತಮಸಿ...ಭೂಯಾಸಮ್ ॥ | ಪ್ರತಿಪ್ರಸ್ಥಾತನು ಧ್ರುವಗ್ರಹವನ್ನು ನೋಡಲು. |
| ದ್ಯಾವಾಪೃಥಿವೀಭ್ಯಾಂ...ಗೃಹ್ಣಾಮಿ ॥ | ಧ್ರುವಪಾತ್ರೆಯನ್ನು ಬೊಗಸೆಯಿಂದ ಪರಿಗ್ರಹಿಸಲು |

---

✦[ಓ!ಧ್ರುವಪಾತ್ರವೇ!] [ನೀನು]**ಭೂತಮ್ ಅಸಿ**=ನಿತ್ಯಸಿದ್ಧನಾಗಿದ್ದೀಯೆ; **ಭೂತೇ ಮಾ ಧಾಃ**=ನಿತ್ಯವಾಗಿಯೂ, ದೃಢವಾಗಿಯೂ ಇರುವ ಸ್ವರ್ಗಾದಿಗಳಲ್ಲಿ ಅಥವಾ ಪರಮಾತ್ಮನಲ್ಲಿ ನನ್ನನ್ನು ಇಡು. **ಮುಖಮ್ ಅಸಿ**=ನೀನು ಸೋಮಗ್ರಹಗಳಲ್ಲಿ ಮುಖ್ಯನು. **ಮುಖಮ್ ಭೂಯಾಸಮ್**=[ನಾನು ಪ್ರಜೆಗಳಲ್ಲಿ ನಿನ್ನ ಅನುಗ್ರಹ ದಿಂದ] ಮುಖ್ಯನಾಗಿರುವಂತಾಗಲಿ; ✦[ಎಲ್ಶೈ! ಧ್ರುವಪಾತ್ರವೇ!] **ತ್ವಾ**=ನಿನ್ನನ್ನು; **ದ್ಯಾವಾಪೃಥಿವೀಭ್ಯಾಮ್**=ಭೂಮಿ-ಅಂತರಿಕ್ಷಸದೃಶವಾದ ಅಂಜಲಿಯಿಂದ; **ಪರಿ ಗೃಹ್ಣಾಮಿ**=ಪರಿಗ್ರಹಿಸುವೆನು.

---

ಹೋಮದಿಂದ ದೂರವಾಗುತ್ತದೆ. ವಿಶ್ವಕರ್ಮದೇವನು ಎಲ್ಲರನ್ನೂ ಸಂತೋಷ ಪಡುವಂತೆ ಮಾಡುತ್ತಾನೆ.

ಎಲೈ! ದೇವತೆಗಳೇ! ಪತ್ನೀ-ಯಜಮಾನರು ಈ ಆಶಿರವನ್ನು ಹಾಕುತ್ತಿರುವುದರಿಂದ ಸುಂದರವಾದ ಮತ್ತು ಪಾಪರಹಿತವಾದ ಶರೀರವನ್ನು ಪಡೆಯುತ್ತಾರೆ. ನಮಗೂ ಆ ಶರೀರವು ದೊರೆಯಲಿ. ನಾವು ಸರ್ವವಿಧದಲ್ಲಿಯೂ ಅಭಿವೃದ್ಧಿಯನ್ನು ಹೊಂದು ವಂತೆ ಅನುಗ್ರಹಿಸಿರಿ.

ವಿಶ್ವೇ ತ್ವಾ ದೇವಾ ವೈಶ್ವಾನರಾಃ [(೩೩)]

ಪ್ರಚ್ಯಾವಯಂತು ದಿವಿ ದೇವಾನ್ದೃಗ್ಂಹಾಂತರಿಕ್ಷೇ

ವಯಾಗ್ಂಸಿ ಪೃಥಿವ್ಯಾಂ ಪಾರ್ಥಿವಾ-

---

ವಿಶ್ವೇ। ತ್ವಾ। ದೇವಾಃ। ವೈಶ್ವಾನರಾಃ।(೩೩)। ಪ್ರೇತಿ। ಚ್ಯಾವಯಂತು। ದಿವಿ। ದೇವಾನ್ । ದೃಗ್ಂಹ । ಅಂತರಿಕ್ಷೇ । ವಯಾಗ್ಂಸಿ । ಪೃಥಿವ್ಯಾಮ್ । ಪಾರ್ಥಿವಾನ್।

---

| ಮಂತ್ರ | ವಿನಿಯೋಗ |
|---|---|
| ವಿಶ್ವೇ...ಪಾರ್ಥಿವಾನ್॥ | ಧ್ರುವಪಾತ್ರೆಯನ್ನು ಒಯ್ಯಲು |

✦[ಓ! ಧ್ರುವವೇ!]**ತ್ವಾ**=ನಿನ್ನನ್ನು; **ವೈಶ್ವಾನರಾಃ**=ಎಲ್ಲಾ ಮಾನವರಿಗೂ ಹಿತಕಾರಿಯಾದ; **ವಿಶ್ವೇದೇವಾಃ**=ಸರ್ವದೇವತೆಗಳೂ/ವಿಶ್ವೇದೇವರೂ; **ಪ್ರಚ್ಯಾವಯಂತು**=ಸ್ವಸ್ಥಾನದಿಂದ ಚಲಿಸುವಂತೆ ಮಾಡಲಿ; **ದಿವಿ ದೇವಾನ್ ದೃಗ್ಂಹ**=ನೀನು ಸ್ವರ್ಗದಲ್ಲಿ ದೇವತೆಗಳು ಸ್ಥಿರವಾಗಿ ಇರುವಂತೆ ಮಾಡು; **ಅಂತರಿಕ್ಷೇ ವಯಾಗ್ಂಸಿ** [ದೃಗ್ಂಹ]=ಅಂತರಿಕ್ಷದಲ್ಲಿ ಪಕ್ಷಿಗಳು ಸ್ಥಿರವಾಗಿ ಇರುವಂತೆ ಮಾಡು; **ಪೃಥಿವ್ಯಾಮ್ ಪಾರ್ಥಿವಾನ್**[ದೃಗ್ಂಹ]=ಭೂಮಿಯಲ್ಲಿ ಪರ್ವತಾದಿಗಳನ್ನು ಸ್ಥಿರಗೊಳಿಸು.

---

ದಂಪತಿಗಳು ಪರಸ್ಪರ ಪ್ರೀತಿಯುಳ್ಳವರಾಗಿ ಒಂದೇ ಮನೆಯಲ್ಲಿ ಶುಭವನ್ನು ಹೊಂದಿ ಬಾಳಲಿ. ಅವರಿಗೆ ಹಿಂಸೆಯಾಗದಿರಲಿ. ಅವರಿಗೆ ಧನಪ್ರಾಪ್ತಿಯಾಗಲಿ. ಆಶಿರವಾಗಿ ಪರಿಣಮಿಸಿರುವ ಹಾಲನ್ನು ಸೋಮನಲ್ಲಿ ಸುರಿಯುವ ಸಪತ್ನೀಕನಾದ ಯಜಮಾನನು ರೋಗರಹಿತನಾಗಿ ಸದ್ಬುದ್ಧಿಯನ್ನು ಹೊಂದಲಿ.

ಈ ಯಜಮಾನನು ಒಳ್ಳೆಯ ಯಾಗವನ್ನು ಬಯಸಿ ಪತ್ನಿಯೊಡನೆ ಇಂದ್ರನಿಗೆ

ನ್ಧ್ರುವಂ ಧ್ರುವೇಣ ಹವಿಷಾಽವ ಸೋಮಂ ನಯಾಮಸಿ ।

ಯಥಾನಸ್ಸರ್ವಮಿಜ್ಜಗದಯಕ್ಷ್ಮ್ರಗ್ಂ ಸುಮನಾ ಅಸತ್ ।

---

ಧ್ರುವಮ್ । ಧ್ರುವೇಣ । ಹವಿಷಾ । ಅವೇತಿ । ಸೋಮಮ್ । ನಯಾಮಸಿ ॥

ಯಥಾ । ನಃ । ಸರ್ವಮ್ । ಇತ್ । ಜಗತ್ । ಅಯಕ್ಷ್ಮಮ್ । ಸುಮನಾ ಇತಿ

ಸು-ಮನಾಃ । ಅಸತ್ ॥

---

| ಮಂತ್ರ | ವಿನಿಯೋಗ |
|---|---|
| ಧ್ರುವಂ...ಅಸನ್ನ್ ॥ | ಹೋತೃಚಮಸಸೋಮದಲ್ಲಿ ಧ್ರುವಸೋಮವನ್ನು ಹಾಕಲು |

---

✦ಯಥಾ=ಯಾವ ರೀತಿಯಿಂದ; [ನಮ್ಮ] **ಸರ್ವಮ್ ಇತ್ ಜಗತ್**=ಸಂಚರಿಸುವ ಗವಾದಿಸಮೂಹವೆಲ್ಲವೂ; **ಅಯಕ್ಷ್ಮಮ್**=ರೋಗರಹಿತವಾಗಿಯೂ; **ಸುಮನಾಃ** =ನಮ್ಮ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳದ್ದಾಗಿಯೂ; **ಅಸತ್**=ಆಗುವುದೋ;

---

ದಧಿವಿಶೇಷವನ್ನು ಇತ್ತಿರುವನು. ಇಂದ್ರನ ಅನುಗ್ರಹದಿಂದ ಪತ್ನೀ-ಪುತ್ರರು ಪುಷ್ಟ ರಾಗಿಯೂ ರೋಗರಹಿತರಾಗಿಯೂ ಆಗಲಿ.

ಯಜಮಾನನು ಮಾಡುವ ಈ ಪ್ರಾರ್ಥನೆಯು ರಾಜರು ಶತ್ರುರಾಜರನ್ನು ಗೆಲ್ಲುವಂತೆ ಮಾಡುವ ಪ್ರಾರ್ಥನೆಯಂತೆ ಇದೆ. ಬೇರೆಯವರ ಮಧ್ಯದಲ್ಲಿ ಶ್ರೇಷ್ಠನಾಗುವಿಕೆ, ಅಥವಾ ಕಾಮಕ್ರೋಧಾದಿಗಳೆಂಬ ವೈರಿಗಳನ್ನು ಜಯಿಸುವಂತೆ ಮಾಡಿಕೊಳ್ಳುವ ಪ್ರಾರ್ಥನೆಯನ್ನು ಎಲ್ಲರೂ ಮಾಡಬಹುದಾಗಿದೆ.

ಓ! ಧ್ರುವಪಾತ್ರೆಯೇ! ನೀನು ನಿತ್ಯಸಿದ್ಧನು. ನನ್ನನ್ನು ನಿತ್ಯವಾಗಿಯೂ ದೃಢವಾಗಿಯೂ ಇರುವ ಸ್ವರ್ಗಾದಿಗಳಲ್ಲಿಯಾದರೂ ಪರಮಾತ್ಮನಲ್ಲಿಯಾದರೂ ಇಡು. **'ಆಯುರ್ವಾ ಏತದ್ಯಜ್ಞಸ್ಯ ಯದ್ಧ್ರುವಃ'** ಎಂಬ ಶ್ರುತಿವಚನದಂತೆ ಸೋಮರಸವನ್ನು ತುಂಬಿ ಇಟ್ಟಿರುವ

ಯಥಾ ನ ಇಂದ್ರ ಇದ್ವಿಶಃ ಕೇವಲೀಸ್ಸರ್ವಾಸ್ಸಮನಸಃ ಕರತ್ । ಯಥಾನಸ್ಸರ್ವಾ ಇದ್ದಿಶೋಽಸ್ಮಾಕಂ ಕೇವಲೀ ರಸನ್ ॥೩೪–8॥

[ಏನಸಾ ವಿಶ್ವಕರ್ಮನ್ ಯೋ ದಕ್ಷಿಣಾಂ ನ ಸರ್ಪಿಗ್ರ್ರೀವೀ ವೈಶ್ವಾನರಾಶ್ಚತ್ವಾರಿಗ್ಂಶಚ್ಚ ॥]

---

ಯಥಾ । ನಃ । ಇಂದ್ರಃ । ಇತ್ । ವಿಶಃ । ಕೇವಲೀಃ । ಸರ್ವಾಃ । ಸಮನಸ ಇತಿ ಸ–ಮನಸಃ । ಕರತ್ ॥ ಯಥಾ । ನಃ । ಸರ್ವಾಃ । ಇತ್ । ದಿಶಃ । ಅಸ್ಮಾಕಮ್ । ಕೇವಲೀಃ । ಅಸನ್ ॥೩೪–೮॥

---

**ಯಥಾ**=ಯಾವ ರೀತಿಯಿಂದ; **ಇಂದ್ರಃ ಇತ್**=ಇಂದ್ರದೇವನೇ; **ನಃ ಸರ್ವಾಃ ವಿಶಃ**=ನಮಗೆ ಸಂಬಂಧಿಸಿದ ಎಲ್ಲ ಜನರನ್ನೂ; **ಕೇವಲೀಃ**=ರೋಗರಹಿತರನ್ನಾಗಿಯೂ;/ಅನನ್ಯಭಕ್ತರನ್ನಾಗಿಯೂ; **ಸಮನಸಃ**=ಅನುಕೂಲವಾದ ಮನಸ್ಸುಳ್ಳವರನ್ನಾಗಿಯೂ; **ಕರತ್**=ಮಾಡುವನೋ; **ಯಥಾ**=ಯಾವ ರೀತಿಯಿಂದ; **ನಃ**=ನಮಗೆ; **ಸರ್ವಾಃ ಇತ್ ದಿಶಃ**=ಎಲ್ಲಾ ದಿಕ್ಕುಗಳಲ್ಲಿರುವ [ಪ್ರಜೆಗಳೂ ಸ್ವಾಧೀನರಾಗಿಯೂ ಮತ್ತು] **ಕೇವಲೀಃ**=ಅಸಾಧಾರಣಪ್ರೀತಿಯುಳ್ಳವರಾಗಿಯೂ; **ಅಸ್ಮಾಕಮ್**=ನಮಗೆ (ನಮ್ಮ ವಿಷಯದಲ್ಲಿ) **ಅಸನ್**=ಆಗುತ್ತಾರೆಯೋ [ಹಾಗೆ ಆಗುವುದಕ್ಕಾಗಿ] **ಧ್ರುವೇಣ ಹಾವಿಷಾ**=ನಿತ್ಯವಾದ ಧ್ರುವಸ್ಥಿತಸೋಮದಿಂದ; **ಧ್ರುವಮ್ ಸೋಮಮ್**=ಧ್ರುವವಾದ ಹೋತೃ ಚಮಸಗತಸೋಮವನ್ನು **ಅವನಯಾಮಸಿ**=ಕೆಳಗಿರುವಂತೆ ಮಾಡುತ್ತೇನೆ/ಅದರ ಮೇಲೆ ಧ್ರುವಗತಸೋಮವನ್ನು ಹಾಕುತ್ತೇನೆ.

---

ಗ್ರಹಗಳಲ್ಲಿ ಧ್ರುವಗ್ರಹವು ಮುಖ್ಯವಾದುದು. ಅಂತಹ ನಿನ್ನನ್ನು ಭೂಮಿ–ಅಂತರಿಕ್ಷಗಳಂತಿರುವ ಅಂಜಲಿಯಿಂದ ಪರಿಗ್ರಹಿಸುವೆನು.

ಓ! ಧ್ರುವಪಾತ್ರೆಯೇ! ನಿನ್ನನ್ನು ಎಲ್ಲ ದೇವತೆಗಳೂ ಸ್ವಸ್ಥಾನದಿಂದ ಚಲಿಸುವಂತೆ ಮಾಡಲಿ. ನಿನ್ನ ಚಲನೆಯಿಂದ ದೇವ-ಪಕ್ಷಿ-ಪರ್ವತಾದಿಗಳು ಚಲಿಸದೆ ಸ್ಥಿರವಾಗಿರಲಿ ಎಂದು ಯಜಮಾನನು ಪ್ರಾರ್ಥಿಸುತ್ತಾನೆ.

ಇಂದ್ರನ ಅನುಗ್ರಹದಿಂದ ಗವಾದಿಪಶುಗಳು ನಮಗೆ ಅನುಕೂಲವಾಗಿರಲಿ. ಪ್ರಜೆಗಳೂ ರೋಗರಹಿತರಾಗಿ ಅಧೀನರಾಗಿ ಇರಲಿ. ಎಲ್ಲ ದಿಕ್ಕುಗಳ ಜನರೂ ನಮಗೆ ಅನನ್ಯಭಕ್ತರಾಗಿರಲಿ. ಇದಕ್ಕಾಗಿ ಹೋತೃಚಮಸಸೋಮದಲ್ಲಿ ಧ್ರುವದಲ್ಲಿರುವ ಸೋಮರಸವನ್ನು ಹಾಕುತ್ತೇನೆ.

---

## ವಿನಿಯೋಗಸಂಗ್ರಹ

1-7ಶ್ಯೇನಾ ತೃತೀಯಸವನೇ ಸಪ್ತಭಿಶ್ಚಮಸಾಹುತಿಃ ।
ವಷಟ್ಕೃತೇ ಮಂತ್ರಹೋಮೋ ವಡಿತ್ಯನುವಷಟ್ಕೃತೇ ॥
8ತ್ರ್ಯಂಪಂತಾಂ ಸರ್ವಚಮಸಾನ್ ಹುತ್ವಾ ಜಪತಿ ಮಧ್ಯಮೇ ।
ಸವನೇ ವೈಶ್ವಕರ್ಮಾಖ್ಯಹೋಮಾ ಮಂತ್ರೈಸ್ತು ಪಂಚಭಿಃ ॥
9ಯಜ್ಞ10ಘೋರಾ11ಅನನ್ಯಾನ್ ಯೇ12ಭಕ್ಷಯಂತೋ 13ನಮಃಪಿಭಿಃ ।
ಪೂತಭೃತ್ಯಾಶಿರಂ 14-17ತ್ವಸ್ಮೇ ಕ್ಷಿಪೇನ್ಮಂತ್ರಚತುಷ್ಟಯಾತ್ ।
18ಭೂತಂ ಧ್ರುವಮವೇಕ್ಷೇತ ಪ್ರತಿಪ್ರಸ್ಥಾತೃಕರ್ಮ ತತ್ ॥
19ದ್ವ್ಯಾವಾಂಜಲೌ ಗೃಹೀತ್ವಾ20 ವಿಶ್ವೇ ಹೋತೃಚಮಸೇ ನಯೇತ್ ।
21ಧ್ರುವಮೇಕೀಕರೋತ್ಯತ್ರ ಮಂತ್ರಾಂತೋಽಸನ್ನತೀರಿತಃ ।
ಅಷ್ಟಮೇ ತ್ವನುವಾಕೇಽಸ್ಮಿನ್ನಷ್ಟಾವಿಶಂತಿರೀರಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-೨೮

# ॥ ನವಮೋಽನುವಾಕಃ ॥

## ಯದ್ವೈ ಹೋತಾಽಧ್ವರ್ಯುಮಭ್ಯಾಹ್ವಯತೇ

ಯತ್ । ವೈ । ಹೋತಾ । ಅಧ್ವರ್ಯುಮ್ । ಅಭ್ಯಾಹ್ವಯತ ಇತ್ಯಭಿ-ಆಹ್ವಯತೇ ।

ಎಂಟನೆಯ ಅನುವಾಕದಲ್ಲಿ ಪ್ರಸ್ಥಿತ-ಯಾಜ್ಯಾದಿಮಂತ್ರಗಳನ್ನು ಹೇಳಲಾಯಿತು. ಈ ಒಂಬತ್ತನೆಯ ಅನುವಾಕದಲ್ಲಿ ಪ್ರತಿಗರಾನಂತರಭಾವಿಮಂತ್ರಗಳು ಹೇಳಲ್ಪಡುತ್ತವೆ.

### ಪ್ರಾತಃಸವನದಲ್ಲಿ *ಪ್ರತಿಗರಾನಂತರ 'ಉಕ್ಥಶಾಃ' ಎಂಬ ಮಂತ್ರದ ವಿಧಿ; ಅರ್ಥವಾದ

| | |
|---|---|
| **ಹೋತಾ ಯತ್ ವೈ ಅಧ್ವರ್ಯುಮ್ ಅಭ್ಯಾಹ್ವಯತೇ** | **ಹೋತೃವು ಅಧ್ವರ್ಯುವನ್ನು ಕುರಿತು 'ಶೋಂಸಾವೋಂ' ಎಂದು ಅಭಿಮುಖವಾಗಿ ಆಹ್ವಾನಿಸುವುದು ಯಾವುದುಂಟೋ [ಅದು]** |

*ಹೋತೃವು ಋಗ್ವೇದದ ಸ್ತೋತ್ರಮಂತ್ರಗಳನ್ನು[ಶಸ್ತ್ರ]ಹೇಳುವಾಗ ಅಧ್ವರ್ಯುವು ಅವನನ್ನು ಪ್ರಶಂಸಿಸುವುದಕ್ಕಾಗಿ **'ಓಥಾಮೋದ ಇವ'** ಮೊದಲಾದ ಮಂತ್ರಗಳನ್ನು ಹೇಳುತ್ತಾನೆ. **'ಓಥಾಽಽಮೋದ ಇವ'** ಎಂದು ಋಕ್ಕುಗಳ ಅರ್ಧದಲ್ಲಿಯೂ, **'ಓಮೋಥಾಮೋದ ಇವ'** ಎಂದು ಋಕ್‌ಗಳ ಸಮಾಪ್ತಿಯಲ್ಲಿಯೂ, **'ಓಮ್'** ಎಂದು ಶಸ್ತ್ರಸಮಾಪ್ತಿಯಲ್ಲಿಯೂ ಹೇಳಬೇಕು. ಇವು ಪ್ರತಿಗರಗಳು.

ಮೊದಲು ಹೋತೃವು **'ಶೋಂ ಸಾವೋಮ್'**=[ಅಧ್ವರ್ಯುವೇ! ನಾನು ಶಸ್ತ್ರವನ್ನು ಹೇಳುತ್ತೇನೆ. ಪ್ರತಿಗರವನ್ನು ಹೇಳಲು ನೀನು ಸಾವಧಾನನಾಗಿರು] ಎಂದು ಹೇಳುತ್ತಾನೆ. ಅಧ್ವರ್ಯುವು ಅವನನ್ನು ಪ್ರಶಂಸಿಸುವಂತೆ ಪ್ರತ್ಯಾಹ್ವಾನವನ್ನು **'ಓಥಾ ಆಮೋದ ಇವ'**=[ಎಲೈ! ಹೋತೃವೇ! ನಿನಗೆ ಪ್ರತಿಗರವನ್ನು ಹೇಳುವುದರಿಂದ ನಮಗೆ ಸಂತೋಷವಾಗಿದೆ] ಎಂದು ಅರ್ಧರ್ಚದಲ್ಲಿ ಹೇಳುತ್ತಾನೆ. ಇದು ಅರ್ಧರ್ಚದ ಪ್ರತಿಗರ. **'ಓಮ್, ಓಥಾಮೋದ ಇವ'**=[ಆಗಲಿ, ಎಲೈ! ಹೋತೃವೇ! ನಿನಗೆ ಪ್ರತಿಗರವನ್ನು ಹೇಳುವುದರಿಂದ ನಮಗೆ ಹರ್ಷವುಂಟಾಗಿದೆ] ಎಂದು ಋಗಂತದಲ್ಲಿ ಹೇಳುತ್ತಾನೆ. ಕೇವಲ ಪ್ರಣವವನ್ನು ಶಸ್ತ್ರಾಂತದಲ್ಲಿ ಹೇಳುತ್ತಾನೆ. ಇದು ಪ್ರತಿಗರದ ಸ್ವರೂಪ. —ಆಪಸ್ತಂಬ ಶ್ರೌತಸೂತ್ರ 12.27-11-14

ವಜ್ರಮೇನಮಭಿಪ್ರವರ್ತಯತ್ಯುಕ್ಥಶಾ ಇತ್ಯಾಹ ಪ್ರಾತಸ್ಸವನಂ ಪ್ರತಿಗೀರ್ಯ ತ್ರೀಣ್ಯೇತಾನ್ಯಕ್ಷರಾಣಿ ತ್ರಿಪದಾ ಗಾಯತ್ರೀ ಗಾಯತ್ರಂ ಪ್ರಾತಸ್ಸವನಂ ಗಾಯತ್ರಿಯೈವ ಪ್ರಾತಸ್ಸವನೇ ವಜ್ರಮಂತರ್ಧತ್ತೇ

---

ವಜ್ರಮ್ । ಏನಮ್ । ಅಭಿ । ಪ್ರೇತಿ । ವರ್ತಯತಿ । ಉಕ್ಥಶಾ ಇತ್ಯುಕ್ಥ–ಶಾಃ । ಇತಿ । ಆಹ । ಪ್ರಾತ ಸ್ಸವನಮಿತಿ ಪ್ರಾತಃ–ಸವನಮ್ । ಪ್ರತಿಗೀರ್ಯೇತಿ ಪ್ರತಿ–ಗೀರ್ಯ । ತ್ರೀಣಿ । ಏತಾನಿ । ಅಕ್ಷರಾಣಿ । ತ್ರಿಪದೇತಿ ತ್ರಿ–ಪದಾ । ಗಾಯತ್ರೀ । ಗಾಯತ್ರಮ್ । ಪ್ರಾತಸ್ಸವನಮಿತಿ ಪ್ರಾತಃ–ಸವನಮ್ । ಗಾಯತ್ರಿಯಾ । ಏವ । ಪ್ರಾತಸ್ಸವನ ಇತಿ ಪ್ರಾತಃ–ಸವನೇ । ವಜ್ರಮ್ । ಅಂತಃ । ಧತ್ತೇ ।

---

| | |
|---|---|
| ವಜ್ರಮ್ ಏನಮ್<br>ಅಭಿಪ್ರವರ್ತಯತಿ | ವಜ್ರಾಯುಧವಾಗಿ ಈ ಅಧ್ವರ್ಯುವನ್ನು ಎದು ರಾಗಿ ಬಂದು ಪ್ರಹರಿಸುತ್ತದೆ. |
| ಪ್ರಾತಸ್ಸವನಮ್ ಪ್ರತಿಗೀರ್ಯ<br>ಉಕ್ಥಶಾಃ ಇತಿ ಆಹ | ಪ್ರಾತಃಸವನಶಸ್ತ್ರಗಳ ಪ್ರತಿಗರಾನಂತರ 'ಉಕ್ಥಶಾಃ' [ಚೆನ್ನಾಗಿ ಶಸ್ತ್ರಗಳನ್ನು ಹೇಳಿರುತ್ತೀಯೆ] ಎಂದು ಶ್ರುತಿಯು ಹೇಳುತ್ತದೆ. |
| ಏತಾನಿ ತ್ರೀಣಿ ಅಕ್ಷರಾಣಿ<br>ತ್ರಿಪದಾ ಗಾಯತ್ರೀ<br>ಗಾಯತ್ರಮ್<br>ಪ್ರಾತಸ್ಸವನಮ್ | 'ಉಕ್ಥಶಾ' ಎಂಬಲ್ಲಿ ಮೂರು ಅಕ್ಷರಗಳು ಇವೆ. ಗಾಯತ್ರೀಛಂದಸ್ಸಿನಲ್ಲಿಯೂ ಮೂರು ಪಾದಗಳು ಇವೆ. ಪ್ರಾತಃಸವನವೂ ಗಾಯತ್ರೀ ಸಂಬಂಧವುಳ್ಳದ್ದು. |
| ಗಾಯತ್ರಿಯಾ ಏವ<br>ಪ್ರಾತಸ್ಸವನೇ ವಜ್ರಮ್<br>ಅಂತಃ ಧತ್ತೇ | ಗಾಯತ್ರಿಯಿಂದಲೇ ಪ್ರಾತಃಸವನದಲ್ಲಿ ವಜ್ರ ವನ್ನು ತಡೆದುಬಿಡುತ್ತಾನೆ. |

ಉಕ್ಥಂ ವಾಚೀತ್ಯಾಹ ಮಾಧ್ಯಂದಿನಗ್ಂ ಸವನಂ

ಪ್ರತಿಗೀರ್ಯ ಚತ್ವಾರ್ಯೇತಾನ್ಯಕ್ಷರಾಣಿ ಚತುಷ್ಪದಾ

ತ್ರಿಷ್ಟುಪ್ತ್ರೈಷ್ಟುಭಂ ಮಾಧ್ಯಂದಿನಗ್ಂ ಸವನಂ

---

ಉಕ್ಥಮ್ । ವಾಚಿ । ಇತಿ । ಆಹ । ಮಾಧ್ಯಂದಿನಮ್ । ಸವನಮ್ । ಪ್ರತಿಗೀರ್ಯೇತಿ ಪ್ರತಿ–ಗೀರ್ಯ । ಚತ್ವಾರಿ । ಏತಾನಿ । ಅಕ್ಷರಾಣಿ । ಚತುಷ್ಪದೇತಿ ಚತುಃ–ಪದಾ । ತ್ರಿಷ್ಟುಪ್ । ತ್ರೈಷ್ಟುಭಮ್ । ಮಾಧ್ಯಂದಿನಮ್ । ಸವನಮ್ ।

---

### ಮಾಧ್ಯಂದಿನಸವನದ ಮಂತ್ರವಿಧಿ; ಅರ್ಥವಾದ

| | |
|---|---|
| ಮಾಧ್ಯಂದಿನಮ್ ಸವನಮ್ ಪ್ರತಿಗೀರ್ಯ | ಮಾಧ್ಯಂದಿನಸವನಶಸ್ತ್ರಗಳ ಪ್ರತಿಗರವಾದ ಮೇಲೆ |
| ಉಕ್ಥಮ್ ವಾಚಿ ಇತಿ ಆಹ | 'ಉಕ್ಥಂ ವಾಚಿ' ['ಶಸ್ತ್ರವು ನಿನ್ನ ಮಾತಿನಲ್ಲಿ ಚೆನ್ನಾಗಿ ವ್ಯಕ್ತವಾಗಿದೆ' ಎಂದು ಮಂತ್ರವು ಹೇಳುತ್ತದೆ. [ಅಧ್ವರ್ಯುವು ಹೇಳುತ್ತಾನೆ] |
| ಚತ್ವಾರಿ ಏತಾನಿ ಅಕ್ಷರಾಣಿ | 'ಉಕ್ಥಂ ವಾಚಿ' ಈ ನಾಲ್ಕು ಅಕ್ಷರಗಳು ಈ ಮಂತ್ರದಲ್ಲಿ ಇವೆ. |
| ತ್ರಿಷ್ಟುಪ್ ಚತುಷ್ಪದಾ | ತ್ರಿಷ್ಟುಪ್ ಛಂದಸ್ಸು ನಾಲ್ಕು ಪಾದಗಳುಳ್ಳದ್ದಾಗಿದೆ. |
| ಮಾಧ್ಯಂದಿನಮ್ ಸವನಮ್ ತ್ರೈಷ್ಟುಭಮ್ | ಮಾಧ್ಯಂದಿನಸವನವು ತ್ರಿಷ್ಟುಪ್ ಛಂದಸ್ಸಿಗೆ ಸಂಬಂಧಿಸಿದೆ. |

---

ಅಧ್ವರ್ಯುವು ಪ್ರಾತಃಸವನಪ್ರತಿಗರದ ಅನಂತರ 'ಉಕ್ಥಶಾಃ' ಎಂದು ಹೇಳುತ್ತಾನೆ. ಈ ಮೂರು ಅಕ್ಷರಗಳಿಂದ ಕೂಡಿದ ಮಂತ್ರಪಾಠದಿಂದ ಹೋತೃವಿನ ಆಹ್ವಾನವೆಂಬ

ತ್ರಿಷ್ಟುಭೈವ ಮಾಧ್ಯಂದಿನೇ ಸವನೇ ವಜ್ರಮಂತರ್ಧತ್ತ

[...ಮಂತರ್ಧತ್ತೇ(೩೫)] ಉಕ್ಥಂ ವಾಚೀಂದ್ರಾಯೇತ್ಯಾಹ

ತೃತೀಯಸವನಂ ಪ್ರತಿಗೀರ್ಯ ಸಪ್ತೈತಾನ್ಯಕ್ಷರಾಣಿ

---

ತ್ರಿಷ್ಟುಭಾ । ಏವ । ಮಾಧ್ಯಂದಿನೇ । ಸವನೇ । ವಜ್ರಮ್ । ಅಂತಃ । ಧತ್ತೇ ।(೩೫)।

ಉಕ್ಥಮ್ । ವಾಚಿ । ಇಂದ್ರಾಯ । ಇತಿ । ಆಹ । ತೃತೀಯಸವನಮಿತಿ ತೃತೀಯ–

ಸವನಮ್ । ಪ್ರತಿಗೀರ್ಯೇತಿ ಪ್ರತಿ–ಗೀರ್ಯ । ಸಪ್ತ । ಏತಾನಿ । ಅಕ್ಷರಾಣಿ ।

---

| | |
|---|---|
| ತ್ರಿಷ್ಟುಭಾ ಏವ | ನಾಲ್ಕು ಪಾದಗಳ ತ್ರಿಷ್ಟುಪ್‌ನಿಂದಲೇ |
| ಮಾಧ್ಯಂದಿನೇ ಸವನೇ | ಮಾಧ್ಯಂದಿನಸವನದಲ್ಲಿ ಅಧ್ವರ್ಯುವು ಹೋತೃ |
| ವಜ್ರಮ್ ಅಂತಃ ಧತ್ತೇ | ವಿನ ಆಹ್ವಾನವೆಂಬ ವಜ್ರವನ್ನು ನಿವಾರಿಸುತ್ತಾನೆ. |

## ತೃತೀಯಸವನದ ಮಂತ್ರವಿಧಿ; ಅರ್ಥವಾದ

| | |
|---|---|
| ತೃತೀಯಸವನಮ್ | ತೃತೀಯಸವನದ ಪ್ರತಿಗರವನ್ನು ಹೇಳಿದ |
| ಪ್ರತಿಗೀರ್ಯ | ನಂತರ |
| ಉಕ್ಥಮ್ ವಾಚಿ | 'ಉಕ್ಥಂ ವಾಚಿ ಇಂದ್ರಾಯ' [ಶಸ್ತ್ರವು ಇಂದ್ರನಿ |
| ಇಂದ್ರಾಯ ಇತಿ ಆಹ | ಗಾಗಿ ನಿನ್ನ ಮಾತಿನಲ್ಲಿ ಚೆನ್ನಾಗಿ ವ್ಯಕ್ತವಾಗಿದೆ] ಎಂದು ಮಂತ್ರವು ಹೇಳುತ್ತದೆ/ಅಧ್ವರ್ಯುವು ಹೇಳುತ್ತಾನೆ. |
| *ಸಪ್ತ ಏತಾನಿ ಅಕ್ಷರಾಣಿ | 'ಉಕ್ಥಂ ವಾಚಿ ಇಂದ್ರಾಯ' ಎಂಬ ಮಂತ್ರದಲ್ಲಿ * ಏಳು ಅಕ್ಷರಗಳಿವೆ. |

---

ವಜ್ರದ ಪ್ರಹಾರವು ಶಾಂತವಾಗುತ್ತದೆ. ಇಲ್ಲಿ ತ್ರಿತ್ವಸಂಖ್ಯೆಯ ಪ್ರಶಂಸೆಯು ಇದೆ.

---

*'ವಾಚೀಂದ್ರಾಯ' ಎಂದು ಸವರ್ಣದೀರ್ಘಸಂಧಿಯನ್ನು ಮಾಡದೆ ಉಕ್ಥಂ ವಾಚಿ+ಇಂದ್ರಾಯ ಎಂದು ಬಿಡಿಸಿ ಹೇಳಿದರೆ ಏಳು ಅಕ್ಷರಗಳಾಗುತ್ತವೆ.

ಸಪ್ತಪದಾ ಶಕ್ವರೀ ಶಾಕ್ವರೋ ವಜ್ರೋ ವಜ್ರೇಣೈವ

ತೃತೀಯಸವನೇ ವಜ್ರಮಂತರ್ಧತ್ತೇ

---

ಸಪ್ತಪದೇತಿ ಸಪ್ತ-ಪದಾ । ಶಕ್ವರೀ । ಶಾಕ್ವರಃ । ವಜ್ರಃ । ವಜ್ರೇಣ । ಏವ ।

ತೃತೀಯಸವನ ಇತಿ ತೃತೀಯ-ಸವನೇ । ವಜ್ರಮ್ । ಅಂತಃ । ಧತ್ತೇ ।

---

| | |
|---|---|
| ಸಪ್ತಪದಾ ಶಕ್ವರೀ | ಶಕ್ವರೀಛಂದಸ್ಸು ಏಳು ಪಾದಗಳಿಂದ ಕೂಡಿದೆ. |
| ಶಾಕ್ವರಃ ವಜ್ರಃ | ಶಕ್ವರಿಯು ವಜ್ರಸ್ವರೂಪವಾಗಿದೆ. |
| ವಜ್ರೇಣ ಏವ | ಶಕ್ವರೀರೂಪವಜ್ರದಿಂದಲೇ |
| ತೃತೀಯಸವನೇ | ತೃತೀಯಸವನದಲ್ಲಿ [ಹೋತೃವಿನ ಆಹ್ವಾನರೂಪ |
| ವಜ್ರಮ್ ಅಂತಃ ಧತ್ತೇ | ವಾದ] ವಜ್ರವನ್ನು ಅಧ್ವರ್ಯುವು ಅಡಗಿಸುತ್ತಾನೆ. |

---

ಮಾಧ್ಯಂದಿನಸವನದ ಪ್ರತಿಗರದ ಅನಂತರ 'ಉಕ್ಥಂ ವಾಚಿ' ಎಂದು ಅಧ್ವರ್ಯುವು ಹೇಳುತ್ತಾನೆ. ನಾಲ್ಕು ಸಂಖ್ಯೆಯ ಅಕ್ಷರಗಳ ಮಂತ್ರಪಾಠದಿಂದ ಹೋತೃವಿನ ಆಹ್ವಾನ ವೆಂಬ ವಜ್ರಪ್ರಹಾರವು ಶಾಂತವಾಗುತ್ತದೆ. ಇಲ್ಲಿ ಚತುಃಸಂಖ್ಯೆಯ ಪ್ರಶಂಸೆಯಿದೆ.

ತೃತೀಯಸವನದ ಪ್ರತಿಗರದ ಅನಂತರ ಅಧ್ವರ್ಯುವು 'ಉಕ್ಥಂ ವಾಚೀಂದ್ರಾಯ' ಎಂದು ಹೇಳುತ್ತಾನೆ. ಉಕ್ಥಂ ವಾಚಿ-ಇಂದ್ರಾಯ ಎಂದು ಬಿಡಿಸಿದಾಗ ಇಲ್ಲಿ ಏಳು ಅಕ್ಷರಗಳಾಗುತ್ತವೆ. ಏಳು ಪಾದವುಳ್ಳದ್ದು ಶಕ್ವರೀಛಂದಸ್ಸು. ಅದು ವಜ್ರರೂಪ ವಾಗಿದೆಯೆಂದು 'ಶಕ್ವರೀ ಯಾಜ್ಯಾ ವಜ್ರೋ ವೈ ಶಕ್ವರೀ' ಎಂದು ಶ್ರುತಿಯು ಬೇರೆಡೆಯಲ್ಲಿ ಹೇಳಿದೆ. ಈ ಶಕ್ವರೀರೂಪವಾದ ವಜ್ರದಿಂದ ಹೋತೃವಿನ ಆಹ್ವಾನವೆಂಬ ವಜ್ರಪ್ರಹಾರವು ಶಾಂತವಾಗುತ್ತದೆ. ಇಲ್ಲಿ ಏಳು ಸಂಖ್ಯೆಯ ಪ್ರಶಂಸೆಯಿದೆ.

ಇಲ್ಲಿ ಪ್ರಕಾರಾಂತರದಿಂದ ಮೂರು ಮಂತ್ರಗಳನ್ನು ಪ್ರಶಂಸಿಸಲು ಉಪೋದ್ಘಾತ ರೂಪವಾಗಿ ಬ್ರಹ್ಮವಾದಿಗಳ ವಾದವನ್ನು ಹೇಳಲಾಗಿದೆ. ಅವರು ಈ ಮಂತ್ರಗಳು

ಬ್ರಹ್ಮವಾದಿನೋ ವದಂತಿ ಸ ತ್ವಾ ಅಧ್ವರ್ಯುಃ ಸ್ಯಾದ್ಯೋ ಯಥಾಸವನಂ ಪ್ರತಿಗರೇ ಛಂದಾಗ್‌ಂಸಿ ಸಂಪಾದಯೇತ್ತೇಜಃ ಪ್ರಾತಸ್ಸವನ ಆತ್ಮನ್ದಧೀತೇಂದ್ರಿಯಂ ಮಾಧ್ಯಂದಿನೇ ಸವನೇ

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಸಃ । ತು । ವೈ । ಅಧ್ವರ್ಯುಃ । ಸ್ಯಾತ್ । ಯಃ । ಯಥಾಸವನಮಿತಿ ಯಥಾ-ಸವನಮ್ । ಪ್ರತಿಗರ ಇತಿ ಪ್ರತಿ-ಗರೇ । ಛಂದಾಗ್‌ಂಸಿ । ಸಂಪಾದಯೇದಿತಿ ಸಂ-ಪಾದಯೇತ್ । ತೇಜಃ । ಪ್ರಾತಸ್ಸವನ ಇತಿ ಪ್ರಾತಃ-ಸವನೇ । ಆತ್ಮನ್ । ದಧೀತ । ಇಂದ್ರಿಯಮ್ । ಮಾಧ್ಯಂದಿನೇ । ಸವನೇ ।

---

ಪ್ರಕಾರಾಂತರದಿಂದ ಈ ಮೂರು ಮಂತ್ರಗಳ ಪ್ರಶಂಸೆ; ಅರ್ಥವಾದ

| | |
|---|---|
| ಬ್ರಹ್ಮವಾದಿನಃ | ವೇದಜ್ಞರು |
| ಯಃ ಯಥಾಸವನಮ್ | ಯಾವನು ಸವನಗಳಿಗೆ ಅನುಗುಣವಾಗಿ |
| ಪ್ರತಿಗರೇ [ಅಭಿಹಿತೇ ಸತಿ] | ಪ್ರತಿಗರವು ಹೇಳಲ್ಪಟ್ಟ ಅನಂತರ |
| ಛಂದಾಗ್‌ಂಸಿ | ಗಾಯತ್ರೀ, ತ್ರಿಷ್ಟುಪ್, ಜಗತೀಛಂದಸ್ಸುಗಳನ್ನು |
| ಸಂಪಾದಯೇತ್ | ಹೊಂದಿಸಿಕೊಳ್ಳಬಲ್ಲನೋ |
| ಸಃ ತು ವೈ ಅಧ್ವರ್ಯುಃ ಸ್ಯಾತ್ | ಅವನೇ ಮುಖ್ಯನಾದ/ಶ್ರೇಷ್ಠನಾದ ಅಧ್ವರ್ಯು ವಾಗುತ್ತಾನೆ. |
| ಪ್ರಾತಸ್ಸವನೇ ತೇಜಃ ಆತ್ಮನ್ ದಧೀತ | ಅವನು ಪ್ರಾತಃಸವನದಲ್ಲಿ ತೇಜಸ್ಸನ್ನು ತನ್ನಲ್ಲಿ ಧರಿಸುತ್ತಾನೆ. |
| ಮಾಧ್ಯಂದಿನೇ ಸವನೇ ಇಂದ್ರಿಯಮ್ [ಆತ್ಮನ್ ದಧೀತ] | ಮಾಧ್ಯಂದಿನಸವನದಲ್ಲಿ ಇಂದ್ರಿಯಶಕ್ತಿಯನ್ನು ಪಡೆಯುವನು. |

ಪಶೂಗ್ಂಸ್ತೃತೀಯಸವನ ಇತ್ಯುಕ್ಥಶಾ ಇತ್ಯಾಹ

ಪ್ರಾತಸ್ಸವನಂ ಪ್ರತಿಗೀರ್ಯ ತ್ರೀಣ್ಯೇತಾನ್ಯಕ್ಷರಾಣಿ

[(೩೬)]ತ್ರಿಪದಾ ಗಾಯತ್ರೀ

---

ಪಶೂನ್ । ತೃತೀಯಸವನ ಇತಿ ತೃತೀಯ-ಸವನೇ । ಇತಿ । ಉಕ್ಥಶಾ ಇತ್ಯುಕ್ಥ-ಶಾಃ । ಇತಿ । ಆಹ । ಪ್ರಾತಸ್ಸವನಮಿತಿ ಪ್ರಾತಃ-ಸವನಮ್ । ಪ್ರತಿಗೀರ್ಯೇತಿ ಪ್ರತಿ-ಗೀರ್ಯ । ತ್ರೀಣಿ । ಏತಾನಿ । ಅಕ್ಷರಾಣಿ । ತ್ರಿಪದೇತಿ ತ್ರಿ-ಪದಾ । ಗಾಯತ್ರೀ ।

---

| | |
|---|---|
| ತೃತೀಯಸವನೇ ಪಶೂನ್ [ಆತ್ಮನ್ ದಧೀತ] ಇತಿ ವದಂತಿ | ತೃತೀಯಸವನದಲ್ಲಿ ಪಶುಗಳನ್ನು ತನ್ನಲ್ಲಿ ನೆಲೆಗೊಳಿಸುವನು. ಎಂದು ಹೇಳುತ್ತಾರೆ. |

‘ಉಕ್ಥಶಾಃ’ ಎಂಬ ಮಂತ್ರದ ಪ್ರಶಂಸೆ

| | |
|---|---|
| ಪ್ರಾತಃಸವನಮ್ ಪ್ರತಿಗೀರ್ಯ ಉಕ್ಥಶಾಃ ಇತಿ ಆಹ | ಪ್ರಾತಃಸವನದ ಪ್ರತಿಗರವನ್ನು ಹೇಳಿದ ಬಳಿಕ ಅಧ್ವರ್ಯುವು ‘ಉಕ್ಥಶಾಃ’ [ನೀನು ಚೆನ್ನಾಗಿ ಶಸ್ತ್ರವನ್ನು ಹೇಳಿದವನಾಗಿದ್ದೀಯೆ] ಎಂದು ಪ್ರಶಂಸಾಮಂತ್ರವನ್ನು ಹೇಳುತ್ತಾನೆ. |
| ತ್ರೀಣಿ ಏತಾನಿ ಅಕ್ಷರಾಣಿ ತ್ರಿಪದಾ ಗಾಯತ್ರೀ | ‘ಉಕ್ಥಶಾಃ’ ಈ ಅಕ್ಷರಗಳು ಮೂರಾಗಿವೆ. ಗಾಯತ್ರೀಛಂದಸ್ಸೂ ಮೂರು ಪಾದಗಳಿಂದ ಕೂಡಿದೆ. |

---

ತೇಜಸ್ಸು, ಇಂದ್ರಿಯ ಮತ್ತು ಪಶುಗಳು ಇವುಗಳ ಪ್ರಾಪ್ತಿಗೆ ಕಾರಣವೆಂದು ಹೇಳುತ್ತಾರೆ.

ಇದು ‘ಉಕ್ಥಶಾಃ’ ಎಂಬ ಮಂತ್ರದ ಪ್ರಶಂಸೆ. ಈ ಮಂತ್ರವನ್ನು ಪಾಠ ಮಾಡುವುದರಿಂದ

ಗಾಯತ್ರಂ ಪ್ರಾತಸ್ಸವನಂ ಪ್ರಾತಸ್ಸವನ ಏವ ಪ್ರತಿಗರೇ ಛಂದಾಗ್ಂಸಿ ಸಂಪಾದಯತ್ಯಥೋ ತೇಜೋ ವೈ ಗಾಯತ್ರೀ ತೇಜಃ ಪ್ರಾತಸ್ಸವನಂ ತೇಜ ಏವ ಪ್ರಾತಸ್ಸವನ ಆತ್ಮನ್ಧತ್ತೆ

---

ಗಾಯತ್ರಮ್ । ಪ್ರಾತಸ್ಸವನಮಿತಿ ಪ್ರಾತಃ-ಸವನಮ್ । ಪ್ರಾತಸ್ಸವನ ಇತಿ ಪ್ರಾತಃ-ಸವನೇ । ಏವ । ಪ್ರತಿಗರ ಇತಿ ಪ್ರತಿ-ಗರೇ । ಛಂದಾಗ್ಂಸಿ । ಸಮಿತಿ । ಪಾದಯತಿ । ಅಥೋ ಇತಿ । ತೇಜಃ । ವೈ । ಗಾಯತ್ರೀ । ತೇಜಃ ।ಪ್ರಾತಸ್ಸವನಮಿತಿ ಪ್ರಾತಃ-ಸವನಮ್ । ತೇಜಃ । ಏವ । ಪ್ರಾತಸ್ಸವನ ಇತಿ ಪ್ರಾತಃ-ಸವನೇ । ಆತ್ಮನ್ । ಧತ್ತೇ ।

---

| | |
|---|---|
| ಪ್ರಾತಸ್ಸವನಮ್ ಗಾಯತ್ರಮ್ | *ಪ್ರಾತಃಸವನವು ಗಾಯತ್ರವಾಗಿದೆ. |
| ಪ್ರಾತಸ್ಸವನೇ ಏವ ಪ್ರತಿಗರೇ | ಪ್ರಾತಃಸವನದಲ್ಲಿಯೇ ಪ್ರತಿಗರವು ಮುಗಿಯುತ್ತಿರಲಾಗಿ |
| *ಛಂದಾಗ್ಂಸಿ ಸಂಪಾದಯತಿ | ಛಂದಸ್ಸನ್ನು ಸಂಪಾದಿಸಿದವನಾಗುತ್ತಾನೆ. |
| ಅಥೋ ಗಾಯತ್ರೀ ತೇಜಃ ವೈ | ಗಾಯತ್ರಿಯು ಬ್ರಹ್ಮತೇಜಸ್ಸಿಗೆ ಕಾರಣವಾಗಿರುವುದರಿಂದ ತೇಜಃಸ್ವರೂಪವಾಗಿದೆ. |
| ಪ್ರಾತಃಸವನಮ್ ಗಾಯತ್ರಮ್ | ಪ್ರಾತಃಸವನವೂ ತೇಜೋರೂಪವಾದ ಗಾಯತ್ರೀಛಂದಸ್ಸಿನಿಂದ ಯುಕ್ತವಾಗಿದೆ. |
| ಪ್ರಾತಸ್ಸವನೇ [ಸಮಾಪ್ತೇ ಸತಿ] ಆತ್ಮನ್ ಏವ ತೇಜಃ ಧತ್ತೇ | ಪ್ರಾತಃಸವನವು ಮುಗಿಯಲಾಗಿ ಅಧ್ವರ್ಯುವು /ಯಜಮಾನನು ತನ್ನಲ್ಲಿ ತೇಜಸ್ಸನ್ನು ಧರಿಸುತ್ತಾನೆ. |

---

*ಪ್ರಾತಃಸವನದಲ್ಲಿ ಹೇಳುವ ಬಹಿಷ್ಪವಮಾನಸ್ತೋತ್ರದ 'ಉಪಾಸ್ಮೈ ಗಾಯತಾ ನರಃ' ಎಂಬ ಋಕ್ಕೂ ಆಜ್ಯಸ್ತೋತ್ರದ 'ಅಗ್ನ ಆಯಾಹಿ' ಎಂಬ ಋಕ್ಕೂ ಇವುಗಳ ಶಸ್ತ್ರಗಳೂ ಗಾಯತ್ರೀಛಂದಸ್ಸಿನಲ್ಲಿ ಇವೆ.

*ಮೂರು ಸವನಗಳ ಛಂದಸ್ಸನ್ನು ಹೇಳುವ ದೃಷ್ಟಿಯಿಂದ ಬಹುವಚನವಿದೆ.

ಉಕ್ಥಂ ವಾಚೀತ್ಯಾಹ ಮಾಧ್ಯಂದಿನಗ್ಂ ಸವನಂ

ಪ್ರತಿಗೀರ್ಯ ಚತ್ವಾರ್ಯೇತಾನ್ಯಕ್ಷರಾಣಿ ಚತುಷ್ಪದಾ

ತ್ರಿಷ್ಟುಪ್ತ್ರೈಷ್ಟುಭಂ ಮಾಧ್ಯಂದಿನಗ್ಂ ಸವನಂ

---

ಉಕ್ಥಮ್ । ವಾಚಿ । ಇತಿ । ಆಹ । ಮಾಧ್ಯಂದಿನಮ್ । ಸವನಮ್ । ಪ್ರತಿಗೀರ್ಯೇತಿ

ಪ್ರತಿ–ಗೀರ್ಯ । ಚತ್ವಾರಿ । ಏತಾನಿ । ಅಕ್ಷರಾಣಿ । ಚತುಷ್ಪದೇತಿ ಚತುಃ–ಪದಾ ।

ತ್ರಿಷ್ಟುಪ್ । ತ್ರೈಷ್ಟುಭಮ್ । ಮಾಧ್ಯಂದಿನಮ್ । ಸವನಮ್ ।

---

'ಉಕ್ಥಂ ವಾಚಿ' ಎಂಬ ಮಂತ್ರದ ಪ್ರಶಂಸೆ; ಅರ್ಥವಾದ

| | |
|---|---|
| ಮಾಧ್ಯಂದಿನಮ್ ಸವನಮ್ ಪ್ರತಿಗೀರ್ಯ | ಅಧ್ವರ್ಯುವು ಮಾಧ್ಯಂದಿನಸವನದ ಪ್ರತಿಗರವನ್ನು ಹೇಳಿದ ನಂತರ |
| 'ಉಕ್ಥಮ್ ವಾಚಿ' ಇತಿ ಆಹ | 'ಉಕ್ಥಂ ವಾಚಿ' [ಸ್ತೋತ್ರವು/ಶಸ್ತ್ರವು ಹೋತೃವಾದ ನಿನ್ನ ಮಾತಿನಲ್ಲಿ ಚೆನ್ನಾಗಿ ಮೂಡಿಬಂದಿದೆ] ಎಂದು ಪ್ರಶಂಸಿಸುತ್ತಾನೆ. |
| ಏತಾನಿ ಅಕ್ಷರಾಣಿ ಚತ್ವಾರಿ | 'ಉಕ್ಥಂ ವಾಚಿ' ಎಂಬಲ್ಲಿ ನಾಲ್ಕು ಅಕ್ಷರಗಳಿವೆ. |
| ಚತುಷ್ಪದಾ ತ್ರಿಷ್ಟುಪ್ | ತ್ರಿಷ್ಟುಪ್ಛಂದಸ್ಸೂ ನಾಲ್ಕು ಪಾದಗಳನ್ನು ಹೊಂದಿದೆ. |
| ಮಾಧ್ಯಂದಿನಮ್ ಸವನಮ್ ತ್ರೈಷ್ಟುಭಮ್ | ಮಾಧ್ಯಂದಿನಸವನವು *ತ್ರೈಷ್ಟುಭವಾಗಿದೆ. |

---

ಅಧ್ವರ್ಯುವು/ಯಜಮಾನನು ತನ್ನಲ್ಲಿ ತೇಜಸ್ಸನ್ನು ಧರಿಸುವನು.

---

*ಮಾಧ್ಯಂದಿನಸವನದ ಸ್ತೋತ್ರದಲ್ಲಿ 'ಪ್ರ ತು ದ್ರವಾ' ಎಂಬ ತ್ರಿಷ್ಟುಪ್ಛಂದಸ್ಸಿನ ಸ್ತೋತ್ರವಿರುವುದರಿಂದ ಮಾಧ್ಯಂದಿನಸವನವು ತ್ರೈಷ್ಟುಭವಾಗಿದೆ.

ಮಾಧ್ಯಂದಿನ ಏವ ಸವನೇ ಪ್ರತಿಗರೇ ಛಂದಾಗ್ಂಸಿ
ಸಂಪಾದಯತ್ಯಥೋ ಇಂದ್ರಿಯಂ ವೈ ತ್ರಿಷ್ಟುಗಿಂದ್ರಿಯಂ
ಮಾಧ್ಯಂದಿನಗ್ಂ ಸವನ[ಸವನಮ್(೩೭)ಇಂದ್ರಿಯ]
ಮಿಂದ್ರಿಯಮೇವ ಮಾಧ್ಯಂದಿನೇ ಸವನ ಆತ್ಮನ್ಧತ್ತೆ

---

ಮಾಧ್ಯಂದಿನೇ। ಏವ। ಸವನೇ। ಪ್ರತಿಗರ ಇತಿ ಪ್ರತಿ-ಗರೇ। ಛಂದಾಗ್ಂಸಿ। ಸಮಿತಿ। ಪಾದಯತಿ। ಅಥೋ ಇತಿ। ಇಂದ್ರಿಯಮ್। ವೈ। ತ್ರಿಷ್ಟುಕ್। ಇಂದ್ರಿಯಮ್। ಮಾಧ್ಯಂದಿನಮ್। ಸವನಮ್।(೩೭)। ಇಂದ್ರಿಯಮ್। ಏವ। ಮಾಧ್ಯಂದಿನೇ। ಸವನೇ। ಆತ್ಮನ್। ಧತ್ತೇ।

---

| | |
|---|---|
| ಮಾಧ್ಯಂದಿನೇ ಏವ ಸವನೇ ಪ್ರತಿಗರೇ[ಸಮಾಪ್ತೇ ಸತಿ] | ಮಾಧ್ಯಂದಿನಸವನದಲ್ಲಿಯೇ ಪ್ರತಿಗರವು ಮುಗಿಯಲಾಗಿ |
| ಛಂದಾಗ್ಂಸಿ ಸಂಪಾದಯತಿ | ಅಧ್ವರ್ಯುವು ಛಂದಸ್ಸನ್ನು ಹೊಂದಿದವನಾಗುತ್ತಾನೆ. |
| ಅಥೋ ಇಂದ್ರಿಯಮ್ ವೈ ತ್ರಿಷ್ಟುಕ್ | *ಇಂದ್ರನ ಜೊತೆಯಲ್ಲಿ ಹುಟ್ಟಿದ ತ್ರಿಷ್ಟುಪ್ ಛಂದಸ್ಸು ಇಂದ್ರಿಯಸಾಧಕವಾಗಿದೆ. |
| ಇಂದ್ರಿಯಮ್ ಮಾಧ್ಯಂದಿನಮ್ ಸವನಮ್ | ತ್ರಿಷ್ಟುಪ್‌ಯುಕ್ತವಾದ ಮಾಧ್ಯಂದಿನಸವನವು ಇಂದ್ರಿಯಪ್ರಾಪ್ತಿಸಾಧಕವಾಗಿದೆ. |
| ಮಾಧ್ಯಂದಿನೇ ಸವನೇ ಇಂದ್ರಿಯಮ್ ಆತ್ಮನ್ ಏವ ಧತ್ತೇ | ಅಧ್ವರ್ಯುವು **'ಉಕ್ಥಂ ವಾಚಿ'** ಎಂಬ ಮಂತ್ರದಿಂದ ಇಂದ್ರಿಯಸಾಮರ್ಥ್ಯವನ್ನು ತನ್ನಲ್ಲಿ ಧರಿಸಿದವನಾಗುತ್ತಾನೆ. |

---

*ತೈ.ಸಂ.7.1.1

ಉಕ್ಥಂ ವಾಚೀಂದ್ರಾಯೇತ್ಯಾಹ ತೃತೀಯಸವನಂ

ಪ್ರತಿಗೀರ್ಯ ಸಪ್ತೈತಾನ್ಯಕ್ಷರಾಣಿ ಸಪ್ತಪದಾ ಶಕ್ವರೀ

ಶಾಕ್ವರಾಃ ಪಶವೋ

---

ಉಕ್ಥಮ್ । ವಾಚಿ । ಇಂದ್ರಾಯ । ಇತಿ । ಆಹ । ತೃತೀಯಸವನಮಿತಿ ತೃತೀಯ-ಸವನಮ್ । ಪ್ರತಿಗೀರ್ಯೇತಿ ಪ್ರತಿ-ಗೀರ್ಯ । ಸಪ್ತ । ಏತಾನಿ । ಅಕ್ಷರಾಣಿ । ಸಪ್ತಪದೇತಿ ಸಪ್ತ-ಪದಾ । ಶಕ್ವರೀ । ಶಾಕ್ವರಾಃ । ಪಶವಃ ।

---

**'ಉಕ್ಥಂ ವಾಚಿ ಇಂದ್ರಾಯ' ಎಂಬ ಮಂತ್ರದ ಪ್ರಶಂಸೆ;ಅರ್ಥವಾದ**

| | |
|---|---|
| ತೃತೀಯಸವನಮ್ ಪ್ರತಿಗೀರ್ಯ | ತೃತೀಯಸವನದ ಪ್ರತಿಗರವನ್ನು ಹೇಳಿದ ನಂತರ |
| ಉಕ್ಥಂ ವಾಚಿ ಇಂದ್ರಾಯ ಇತಿ ಆಹ | ಆಧ್ವರ್ಯುವು 'ಉಕ್ಥಂ ವಾಚಿ ಇಂದ್ರಾಯ' [ಹೋತೃವೇ! ನೀನು ಇಂದ್ರನಿಗಾಗಿ ಶಸ್ತ್ರವನ್ನು ನಿನ್ನ ಮಾತಿನಲ್ಲಿ ಚೆನ್ನಾಗಿ ಹೇಳಿದೆ] ಎಂದು ಹೇಳುತ್ತಾನೆ. |
| ಏತಾನಿ ಅಕ್ಷರಾಣಿ ಸಪ್ತ | 'ಉಕ್ಥಂ ವಾಚಿ ಇಂದ್ರಾಯ' ಈ ಅಕ್ಷರಗಳು ಏಳು. |
| ಸಪ್ತಪದಾ ಶಕ್ವರೀ | ಶಕ್ವರೀಛಂದಸ್ಸು ಏಳು ಪಾದಗಳುಳ್ಳದ್ದು. |
| ಪಶವಃ ಶಾಕ್ವರಾಃ | ಶಕ್ವರೀಛಂದಸ್ಸು ಪಶುಸಾಧನವಾಗಿದೆ. |

---

ಇಲ್ಲಿ ಚತುಃಸಂಖ್ಯೆಯನ್ನೂ ತ್ರಿಷ್ಟುಪ್‌ಛಂದಸ್ಸನ್ನೂ ಪ್ರಶಂಸಿಸುವುದರ ಮೂಲಕ **'ಉಕ್ಥಂ ವಾಚಿ'** ಎಂಬ ಮಂತ್ರವನ್ನು ಪ್ರಶಂಸಿಸಲಾಗಿದೆ.

ಇಲ್ಲಿ ಸಪ್ತಸಂಖ್ಯೆಯನ್ನೂ ಶಕ್ವರೀ-ಜಗತೀಛಂದಸ್ಸುಗಳನ್ನು ಪ್ರಶಂಸಿಸುವುದರ ಮೂಲಕ **'ಉಕ್ಥಂ ವಾಚಿ ಇಂದ್ರಾಯ'** ಎಂಬ ಮಂತ್ರವನ್ನು ಪ್ರಶಂಸಿಸಲಾಗಿದೆ.

ಜಾಗತಂ ತೃತೀಯಸವನಂ ತೃತೀಯಸವನ ಏವ ಪ್ರತಿಗರೇ

ಛಂದಾಗ್ಂಸಿ ಸಂಪಾದಯತ್ಯಥೋ ಪಶವೋ ವೈ ಜಗತೀ ಪಶವ

ಸ್ತೃತೀಯಸವನಂ ಪಶೂನೇವ ತೃತೀಯಸವನ ಆತ್ಮನ್ಧತ್ತೇ

---

ಜಾಗತಮ್ । ತೃತೀಯಸವನಮಿತಿ ತೃತೀಯ-ಸವನಮ್ । ತೃತೀಯಸವನ ಇತಿ ತೃತೀಯ

-ಸವನೇ । ಏವ । ಪ್ರತಿಗರ ಇತಿ ಪ್ರತಿ-ಗರೇ । ಛಂದಾಗ್ಂಸಿ । ಸಮಿತಿ । ಪಾದಯತಿ ।

ಅಥೋ ಇತಿ । ಪಶವಃ । ವೈ । ಜಗತೀ । ಪಶವಃ । ತೃತೀಯಸವನಮಿತಿ ತೃತೀಯ-

ಸವನಮ್ । ಪಶೂನ್ । ಏವ । ತೃತೀಯಸವನ ಇತಿ ತೃತೀಯ-ಸವನೇ । ಆತ್ಮನ್ । ಧತ್ತೇ ।

---

| | |
|---|---|
| ತೃತೀಯಸವನಮ್ ಜಾಗತಮ್ | ತೃತೀಯಸವನವು ಜಾಗತವಾಗಿದೆ.* |
| ತೃತೀಯಸವನೇ ಏವ ಪ್ರತಿಗರೇ ಛಂದಾಗ್ಂಸಿ ಸಂಪಾದಯತಿ | ತೃತೀಯಸವನದಲ್ಲಿ ಪ್ರತಿಗರವು ಹೇಳಲ್ಪಟ್ಟಾಗ ಅಧ್ವರ್ಯುವು ಛಂದಸ್ಸನ್ನು ಹೊಂದಿದವನಾಗುತ್ತಾನೆ. |
| ಅಥೋ ಜಗತೀ ಪಶವಃ ವೈ | ಮತ್ತು ಜಗತೀಛಂದಸ್ಸು *ಪಶುಸಾಧನವಾಗಿದೆ. |
| ಪಶವಃ ತೃತೀಯಸವನಮ್ | ಜಗತೀಛಂದಸ್ಸುಳ್ಳ ತೃತೀಯಸವನವೂ ಪಶುಸಾಧನವೇ ಆಗಿದೆ. |
| ತೃತೀಯಸವನೇ ಪಶೂನ್ ಏವ ಆತ್ಮನ್ ಧತ್ತೇ | ತೃತೀಯಸವನವು ಚೆನ್ನಾಗಿ ಮುಗಿದ ಮೇಲೆ ಅಧ್ವರ್ಯುವು ಪಶುಗಳನ್ನೇ ತನ್ನಲ್ಲಿ ನೆಲೆಗೊಳಿಸುತ್ತಾನೆ. |

---

*ತೃತೀಯಸವನದ ಸ್ತೋತ್ರದಲ್ಲಿ 'ಆ ನೋ ಭದ್ರಾಃ' ಮೊದಲಾದ ಜಗತೀಛಂದಸ್ಸಿನ ಸ್ತೋತ್ರ/ಶಸ್ತ್ರಗಳು ಇರುವುದರಿಂದ ತೃತೀಯಸವನವು ಜಾಗತವಾಗಿದೆ. ಏಳು ಪಾದಗಳುಳ್ಳ ಶಕ್ವರೀ ಛಂದಸ್ಸನ್ನು ಹೇಳುವಾಗ ನಾಲ್ಕು ಪಾದಗಳುಳ್ಳ ಜಗತೀಛಂದಸ್ಸನ್ನು ಹೇಳಿದಂತೆಯೇ ಆಯಿತು. ಶಕ್ವರೀ-ಜಗತೀಗಳು ಪಶುಸಾಧನಗಳಾದುದರಿಂದ ತೃತೀಯಸವನವನ್ನು ಜಾಗತವೆಂದು ಹೇಳಿದೆ. ಶ್ರುತಿಯು 'ಶಾಕ್ವರಂ' ಎಂದು ಹೇಳಿಲ್ಲ. *'ಜಗತೀ ಛಂದಸಾಂ ಪಶವ್ಯತಮಾ' ಎಂದು ಶ್ರುತಿ.

ಯದ್ವೈ ಹೋತಾಽಧ್ವರ್ಯುಮಭ್ಯಾಹ್ವಯತ

ಆವ್ಯಮಸ್ಮಿನ್ದಧಾತಿ ತದ್ಯನ್ನಾ[ತದ್ಯನ್ನ (೩೮)ಅಪಹನೀತ]

ಪಹನೀತ ಪುರಾಽಸ್ಯ ಸಂವತ್ಸರಾದ್ಗೃಹ ಆವೇವೀರ

---

ಯತ್ । ವೈ । ಹೋತಾ । ಅಧ್ವರ್ಯುಮ್ । ಅಭ್ಯಾಹ್ವಯತ ಇತ್ಯಭಿ-ಆಹ್ವಯತೇ । ಆವ್ಯಮ್ । ಅಸ್ಮಿನ್ । ದಧಾತಿ । ತತ್ । ಯತ್ । ನ ।(೩೮)। ಅಪಹನೀತೇತ್ಯಪ-ಹನೀತ । ಪುರಾ । ಅಸ್ಯ । ಸಂವತ್ಸರಾದಿತಿ ಸಂ-ವತ್ಸರಾತ್ । ಗೃಹೇ । ಏತಿ । ವೇವೀರನ್।

---

**ಪ್ರತ್ಯಾಹ್ವಾನವಿಧಾನ; ಅದರ ಪ್ರಶಂಸೆಯ ಅರ್ಥವಾದ.**

| | |
|---|---|
| ಯತ್ ವೈ ಹೋತಾ ಅಧ್ವರ್ಯುಮ್ ಅಭ್ಯಾಹ್ವಯತೇ | ಹೋತೃವು ಅಧ್ವರ್ಯುವನ್ನು ಕುರಿತು *ಅಭ್ಯಾಹ್ವಾನ ಮಾಡುವುದೆಂಬುದು ಯಾವುದುಂಟೋ [ಅದು] |
| ಅಸ್ಮಿನ್ ಆವ್ಯಮ್ ದಧಾತಿ | ಈ ಅಧ್ವರ್ಯುವಿನಲ್ಲಿ ಎಲ್ಲ ಕಡೆಗಳಲ್ಲಿಯೂ ಪೀಡಿಸುವ ರೋಗವಿಶೇಷವನ್ನುಂಟುಮಾಡುತ್ತದೆ. |
| ತತ್ ಯತ್ ನ ಅಪಹನೀತ | ಈ ದೋಷವನ್ನು ಪರಿಹರಿಸದಿದ್ದರೆ |
| ಸಂವತ್ಸರಾತ್ ಪುರಾ ಅಸ್ಯ ಗೃಹೇ ಆ ವೇವೀರನ್ | ಒಂದು ವರ್ಷಕ್ಕಿಂತಲೂ ಮೊದಲೇ ಇವನ ಮನೆಯಲ್ಲಿರುವ ಜನರು ರೋಗಪೀಡಿತರಾಗುತ್ತಾರೆ. |

---

*'ಶೋಂಸಾವೋಮ್'=ಅಧ್ವರ್ಯುವೇ! ನಾನು ಶಸ್ತ್ರವನ್ನು ಹೇಳುವೆನು. ನೀನು ಪ್ರತಿಗರವನ್ನು ಹೇಳಲು ಸಿದ್ಧನಾಗಿರು.:–ಇದು ಅಭ್ಯಾಹ್ವಾನ

ಇಶ್ಯೋಗ್ಂಸಾ ಮೋದ ಇವೇತಿ ಪ್ರತ್ಯಾಹ್ವಯತೇ

ತೇನೈವ ತದಪಹತೇ ಯಥಾ ವಾ ಆಯತಾಂ

ಪ್ರತೀಕ್ಷತ ಏವಮಧ್ವರ್ಯುಃ ಪ್ರತಿಗರಂ ಪ್ರತೀಕ್ಷತೇ

---

ಶೋಗ್ಂಸಾ । ಮೋದಃ । ಇವ । ಇತಿ । ಪ್ರತ್ಯಾಹ್ವಯತ ಇತಿ ಪ್ರತಿ-ಆಹ್ವಯತೇ ।

ತೇನ । ಏವ । ತತ್ । ಅಪೇತಿ । ಹತೇ । ಯಥಾ । ವೈ । ಆಯತಾಮಿತ್ಯಾ-ಯತಾಮ್ ।

ಪ್ರತೀಕ್ಷತ ಇತಿ ಪ್ರತಿ-ಈಕ್ಷತೇ । ಏವಮ್ । ಅಧ್ವರ್ಯುಃ । ಪ್ರತಿಗರಮಿತಿ ಪ್ರತಿ-

ಗರಮ್ । ಪ್ರತೀತಿ । ಈಕ್ಷತೇ ।

---

| | |
|---|---|
| ಶೋಗ್ಂಸಾ ಮೋದಃ ಇವ ಇತಿ | ಶೋಗ್ಂಸಾಮೋದ ಇವ ಎಂಬುದಾಗಿ |
| ಪ್ರತ್ಯಾಹ್ವಯತೇ | *ಪ್ರತ್ಯಾಹ್ವಾನವನ್ನು ಹೇಳಬೇಕು. [ವಿಧಿ] |
| ತೇನ ಏವ ತತ್ ಅಪಹತೇ | ಅದರಿಂದಲೇ ಆ ರೋಗವಿಶೇಷವನ್ನು ಪರಿಹರಿಸಿದವನಾಗುತ್ತಾನೆ. |

ಪ್ರತ್ಯಾಹ್ವಾನಕ್ಕೆ ಸಂಬಂಧಿಸಿದ ವಿಶೇಷವಿಧಿಗಳು; ಅರ್ಥವಾದ.

| | |
|---|---|
| ಯಥಾ ವೈ ಆಯತಾಮ್ ಪ್ರತೀಕ್ಷತೇ | ಹೇಗೆ ಪ್ರತಿವಾದಿಯು ವಾದಿಯಿಂದ ಬರುವ ಮಾತನ್ನು ಸಾವಧಾನವಾಗಿ ಎದುರು ನೋಡುತ್ತಾನೆಯೋ |
| ಏವಮ್ ಅಧ್ವರ್ಯುಃ ಪ್ರತಿಗರಮ್ ಪ್ರತೀಕ್ಷತೇ | ಹೀಗೆಯೇ ಅಧ್ವರ್ಯುವು ಪ್ರತಿಗರವನ್ನು ಹೇಳುವ ಸಮಯವನ್ನು ನಿರೀಕ್ಷಿಸುತ್ತಿರುತ್ತಾನೆ/ ನಿರೀಕ್ಷಿಸಬೇಕು. [ವಿಧಿ] |

---

ಹೋತೃವಿನ ಆಭ್ಯಾಹ್ವಾನಕ್ಕೆ ಅಧ್ವರ್ಯುವು ಪ್ರತ್ಯಾಹ್ವಾನ ಮಾಡಬೇಕೆಂಬ ವಿಧಿ. ಈ

---

*'ಶೋಗ್ಂಸಾ ಮೋದ ಇವ'=ಹೋತೃವೇ! ನೀನು ಶಸ್ತ್ರವನ್ನು ಹೇಳು. ಇದರಿಂದ ನಾವು ಹರ್ಷಿಸುವೆವು. ಇದು ಪ್ರತ್ಯಾಹ್ವಾನ.

ಯದಭಿಪ್ರತಿಗೃಣೀಯಾದ್ಯಥಾಽಽಯತಯಾ ಸಮೃಚ್ಛತೇ

ತಾದೃಗೇವ ತದ್ಯದರ್ಧರ್ಚಾಲ್ಲುಪ್ಯೇತ ಯಥಾ

ಧಾವದ್ಭ್ಯೋ ಹೀಯತೇ ತಾದೃಗೇವ

---

ಯತ್ । ಅಭಿಪ್ರತಿಗೃಣೀಯಾದಿತ್ಯಭಿ-ಪ್ರತಿಗೃಣೀಯಾತ್ । ಯಥಾ ।

ಆಯತಯೇತ್ಯಾ-ಯತಯಾ । ಸಮೃಚ್ಛತ ಇತಿ ಸಂ-ಋಚ್ಛತೇ । ತಾದೃಕ್ ।

ಏವ । ತತ್ । ಯತ್ । ಅರ್ಧರ್ಚಾದಿತ್ಯರ್ಧ-ಋಚಾತ್ । ಲುಪ್ಯೇತ । ಯಥಾ ।

ಧಾವದ್ಭ್ಯ ಇತಿ ಧಾವತ್-ಭ್ಯಃ । ಹೀಯತೇ । ತಾದೃಕ್ । ಏವ ।

---

| | |
|---|---|
| ಯತ್ ಅಭಿಪ್ರತಿಗೃಣೀಯಾತ್ | ಕಾಲಕ್ಕೆ ಮೊದಲೇ ಅಥವಾ ಕಾಲವು ಮೀರಿದ ಮೇಲೆ ಪ್ರತಿಗರವನ್ನು ಹೇಳಿದರೆ |
| ಯಥಾ ಆಯತಯಾ ಸಮೃಚ್ಛತೇ | ಹೇಗೆ ಆಕಾಲದಲ್ಲಿ ಹೇಳಿದವನು ಕರ್ತವ್ಯ ಭ್ರಷ್ಟನಾಗುವನೋ/ಹೇಳಬೇಕಾದ ಮಾತಿನಿಂದ ಹೀನನಾಗುವನೋ |
| ತತ್ ತಾದೃಕ್ ಏವ | ಅಕಾಲದಲ್ಲಿ ಪ್ರತಿಗರವನ್ನು ಹೇಳುವುದೂ ಹಾಗೆಯೇ ಆಗುತ್ತದೆ. |
| ಯತ್ ಅರ್ಧರ್ಚಾತ್ ಲುಪ್ಯೇತ | ಅರ್ಧರ್ಚವು ಮುಗಿದಾಗ ಹೇಳಬೇಕಾದ ಪ್ರತಿಗರವನ್ನು ಮರೆತರೆ |
| ಯಥಾ ಧಾವದ್ಭ್ಯಃ ಹೀಯತೇ | ಹೇಗೆ ಓಡುವವರ ಮಧ್ಯದಲ್ಲಿ ಹಿಂದುಳಿದವನು ಹೀನನಾಗುವನೋ |
| ತಾದೃಕ್ ಏವ ತತ್ | [ಆ ಪ್ರತಿಗರವನ್ನು ಮರೆತವನೂ/ಮರೆಯುವಿಕೆಯೂ] ಹಾಗೆಯೇ ಆಗುತ್ತದೆ. |

---

ವಿಧಿಯನ್ನು ಪ್ರಶಂಸಿಸುವ ಅರ್ಥವಾದ.

ತತ್ಪ್ರಬಾಹುಗ್ವಾ ಋತ್ವಿಜಾಮುದ್ಗೀಥಾ ಉದ್ಗೀಥ

ಏವೋದ್ಗಾತೃಣಾ[..ತೃಣಾಮ್(೩೯)ಋಚಃ]ಮೃಚಃ

ಪ್ರಣವ ಉಕ್ಥಶಗ್‌ಂಸಿನಾಂ ಪ್ರತಿಗರೋಽಧ್ವರ್ಯೂಣಾಂ

---

ತತ್ । ಪ್ರಬಾಹುಗಿತಿ ಪ್ರ-ಬಾಹುಕ್ । ವೈ । ಋತ್ವಿಜಾಮ್ । ಉದ್ಗೀಥಾ ಇತ್ಯುತ್-ಗೀಥಾಃ । ಉದ್ಗೀಥ ಇತ್ಯುತ್-ಗೀಥಃ । ಏವ । ಉದ್ಗಾತೃಣಾಮಿತ್ಯುತ್-ಗಾತೃಣಾಮ್ ।(೩೯)। ಋಚಃ । ಪ್ರಣವ ಇತಿ ಪ್ರ-ನವಃ । ಉಕ್ಥಶಗ್‌ಂಸಿನಾಮಿತ್ಯುಕ್ಥ-ಶಗ್‌ಂಸಿನಾಮ್ । ಪ್ರತಿಗರ ಇತಿ ಪ್ರತಿ-ಗರಃ । ಅಧ್ವರ್ಯೂಣಾಮ್ ।

---

## ಪ್ರತಿಗರವು ಗಾನವಿಶೇಷಸಮಾನವೆಂಬ ಪ್ರಶಂಸೆ

| | |
|---|---|
| ಋತ್ವಿಜಾಮ್ | ಉದ್ಗಾತೃ-ಹೋತೃ-ಅಧ್ವರ್ಯುಗಳೆಂಬ ಋತ್ವಿಜರಿಗೆ |
| ಉದ್ಗೀಥಾಃ ಪ್ರಬಾಹುಕ್ ವೈ | ಉತ್ಕೃಷ್ಟಗಾನವಿಶೇಷವು ಸಮಾನವಾಗಿಯೇ ಇರುವುದಷ್ಟೆ. |
| ಉದ್ಗಾತೃಣಾಮ್ ಉದ್ಗೀಥಃ ಏವ | ಸಾಮಗಾನ ಮಾಡುವ ಉದ್ಗಾತೃಗಳಿಗೆ ಪಾಂಚಭಕ್ತಿಕವಾದ ಸಾಮದ ಉದ್ಗೀಥಭಕ್ತಿಯ ಸಾಮವೇ |
| ಉದ್ಗೀಥಃ | ಪ್ರಕೃಷ್ಟಗಾನವಾಗಿದೆ. |
| ಉಕ್ಥಶಗ್‌ಂಸಿನಾಮ್ | ಋಗ್ವೇದದ ಶಸ್ತ್ರವನ್ನು ಹೇಳುವ ಹೋತೃಗಳಿಗೆ |
| ಋಚಃ ಪ್ರಣವಃ | ಋಕ್‌ಗಳ ಕೊನೆಯಲ್ಲಿ ಹೇಳುವ 'ಓಮ್' ಎಂಬ ಪ್ರಣವವೇ [ಉತ್ಕೃಷ್ಟಗಾನವಾಗಿದೆ] |
| ಅಧ್ವರ್ಯೂಣಾಮ್ ಪ್ರತಿಗರಃ | ಅಧ್ವರ್ಯುಗಳಿಗೆ ಪ್ರತಿಗರವೇ [ಶ್ರೇಷ್ಠಗಾನ ವಾಗುತ್ತದೆ] |

ಯ ಏವಂ ವಿದ್ವಾನ್ಪ್ರತಿಗೃಣಾತ್ಯನ್ನಾದ ಏವ
ಭವತ್ಯಾಽಸ್ಯ ಪ್ರಜಾಯಾಂ ವಾಜೀ ಜಾಯತ ಇಯಂ
ವೈ ಹೋತಾಽಸಾವಧ್ವರ್ಯುರ್ಯದಾಸೀನಶ್ಶಗ್ಂಸ-

---

ಯಃ । ಏವಮ್ । ವಿದ್ವಾನ್ । ಪ್ರತಿಗೃಣಾತೀತಿ ಪ್ರತಿ-ಗೃಣಾತಿ । ಅನ್ನಾದ ಇತ್ಯನ್ನ-ಅದಃ । ಏವ । ಭವತಿ । ಆತಿ । ಅಸ್ಯ । ಪ್ರಜಾಯಾಮಿತಿ ಪ್ರ-ಜಾಯಾಮ್ । ವಾಜೀ । ಜಾಯತೇ । ಇಯಮ್ । ವೈ ।.ಹೋತಾ । ಅಸೌ । ಅಧ್ವರ್ಯುಃ । ಯತ್ । ಆಸೀನಃ । ಶಗ್ಂಸತಿ ।

---

| | |
|---|---|
| ಯಃ ಏವಮ್ ವಿದ್ವಾನ್ ಪ್ರತಿಗೃಣಾತಿ | ಹೀಗೆ ತಿಳಿದ ಯಾವ ಅಧ್ವರ್ಯುವು ಪ್ರತಿಗರವನ್ನು ಹೇಳುತ್ತಾನೆಯೋ |
| ಅನ್ನಾದಃ ಏವ ಭವತಿ | ಆವನು ಅನ್ನಸಮೃದ್ಧಿಯನ್ನು ಹೊಂದಿ ಭೋಜನ ಶಕ್ತಿಯನ್ನೂ ಪಡೆಯುತ್ತಾನೆ. |
| ಅಸ್ಯ ಪ್ರಜಾಯಾಮ್ ವಾಜೀ ಆ ಜಾಯತೇ | ಇವನ ಮಕ್ಕಳಲ್ಲಿಯೂ ಅನ್ನಸಂಪತ್ತಿಯುಳ್ಳವನೇ ಜನಿಸುತ್ತಾನೆ. |

## ಹೋತೃ-ಅಧ್ವರ್ಯುಗಳ ಕುಳಿತುಕೊಳ್ಳುವಿಕೆ-ನಿಂತು ಹೇಳುವಿಕೆ ಇವುಗಳ ವಿಧಿ-ಅರ್ಥವಾದ

| | |
|---|---|
| ಇಯಮ್ ವೈ ಹೋತಾ | ಕುಳಿತುಕೊಂಡು ಶಸ್ತ್ರವನ್ನು ಹೇಳುವ ಹೋತೃವು ಭೂಮಿಯೇ ಆಗಿರುತ್ತಾನೆ. |
| ಅಸೌ ಅಧ್ವರ್ಯುಃ | ನಿಂತು ಪ್ರತಿಗರವನ್ನು ಹೇಳುವ ಅಧ್ವರ್ಯುವು ದ್ಯುಲೋಕವೇ ಆಗಿರುತ್ತಾನೆ. |
| ಯತ್ ಆಸೀನಃ ಶಗ್ಂಸತಿ | ಹೋತೃವು ಕುಳಿತುಕೊಂಡು ಶಸ್ತ್ರವನ್ನು ಹೇಳುವುದು ಯಾವುದಿದೆಯೋ |

ತ್ಯಸ್ಯಾ ಏವ ತದ್ಧೋತಾ ನೈತ್ಯಾಸ್ತ ಇವ ಹೀಯಮಥೋ

ಇಮಾಮೇವ ತೇನ ಯಜಮಾನೋ ದುಹೇ ಯತ್ತಿಷ್ಠನ್ಪ್ರತಿ

ಗೃಣಾತ್ಯಮುಷ್ಯಾ ಏವ ತದಧ್ವರ್ಯುರ್ನೈತಿ

---

ಅಸ್ಯಾಃ । ಏವ । ತತ್ । ಹೋತಾ । ನ । ಏತಿ । ಆಸ್ತೇ । ಇವ । ಹಿ । ಇಯಮ್ ।

ಅಥೋ ಇತಿ । ಇಮಾಮ್ । ಏವ । ತೇನ । ಯಜಮಾನಃ । ದುಹೇ । ಯತ್ ।

ತಿಷ್ಠನ್ । ಪ್ರತಿಗೃಣಾತೀತಿ ಪ್ರತಿ-ಗೃಣಾತಿ । ಅಮುಷ್ಯಾಃ । ಏವ । ತತ್ ।

ಅಧ್ವರ್ಯುಃ । ನ । ಏತಿ ।(೪೦)।

---

| | |
|---|---|
| [ತತ್] ಅಸ್ಯಾಃ ಹೋತಾ ನ ಏವ ಏತಿ | ಆದರಿಂದ ಹೋತೃವು ಈ ಭೂಲೋಕದಿಂದ ಭ್ರಷ್ಟನಾಗುವುದಿಲ್ಲ/ಇಲ್ಲಿಯೇ ಇರುತ್ತಾನೆ. |
| ಇಯಮ್ ಆಸ್ತೇ ಇವ ಹಿ | ಈ ಭೂಮಿಯು ಕುಳಿತುಕೊಂಡಿರುವಂತೆ ಇದೆಯಷ್ಟೆ. |
| ಅಥೋ ತೇನ ಇಮಾಮ್ ಯಜಮಾನಃ ದುಹೇ ಏವ | ಮತ್ತು ಅದರಿಂದ [ಕುಳಿತಿರುವುದರಿಂದ] ಭೂಮಿಯ ಸಾರವನ್ನು ಯಜಮಾನನು ಪಡೆದುಕೊಳ್ಳುತ್ತಾನೆ. |
| ಯತ್ ತಿಷ್ಠನ್ ಪ್ರತಿಗೃಣಾತಿ | ಅಧ್ವರ್ಯುವು ನಿಂತುಕೊಂಡು ಪ್ರತಿಗರವನ್ನು ಹೇಳುವುದೆಂಬುದು |
| ಏತತ್ ಅಮುಷ್ಯಾಃ ಅಧ್ವರ್ಯುಃ ನ ಏತಿ ಏವ | ಆದರಿಂದ ಅಧ್ವರ್ಯುವು ದ್ಯುಲೋಕದಿಂದ ಚ್ಯುತನಾಗುವುದಿಲ್ಲ. |

---

ಅಧ್ವರ್ಯುವು ಹೋತೃವಿನ ಶಸ್ತ್ರದ ಕಡೆಗೆ ಗಮನವಿಟ್ಟು ಆಯಾ ಕಾಲಗಳಲ್ಲಿ ಹೇಳ ಬೇಕಾದ 'ಓಥಾಮೋದ ಇವ' 'ಓಮೋಥಾಮೋದ ಇವ' 'ಓಮ್' ಎಂದು ಪ್ರತಿ ಗರಗಳನ್ನು ತಪ್ಪದೆ ಆಯಾ ಕಾಲಗಳಲ್ಲಿ ಹೇಳಬೇಕು. ಇಲ್ಲವಾದರೆ ದೋಷವು ಸಂಭವಿಸುತ್ತದೆ ಎಂದು ಅಭಿಪ್ರಾಯ.

[ನೈತಿ(೪೦)]ತಿಷ್ಠತೀವ ಹ್ಯಸಾವಥೋ ಅಮೂಮೇವ

ತೇನ ಯಜಮಾನೋ ದುಹೇ ಯದಾಸೀನಶ್ಶಗ್ಂಸತಿ

ತಸ್ಮಾದಿತಃಪ್ರದಾನಂ ದೇವಾ ಉಪಜೀವಂತಿ

---

ತಿಷ್ಠತಿ । ಇವ । ಹಿ । ಅಸೌ । ಅಥೋ ಇತಿ । ಅಮೂಮ್ । ಏವ । ತೇನ । ಯಜಮಾನಃ । ದುಹೇ । ಯತ್ । ಆಸೀನಃ । ಶಗ್ಂಸತಿ । ತಸ್ಮಾತ್ । ಇತಃಪ್ರದಾನಮಿತೀತಃ-ಪ್ರದಾನಮ್ । ದೇವಾಃ । ಉಪೇತಿ । ಜೀವಂತಿ ।

---

| | |
|---|---|
| ಅಸೌ ತಿಷ್ಠತಿ ಇವ ಹಿ | ದ್ಯುಲೋಕವು ನಿಂತುಕೊಂಡಂತಿರುವುದಷ್ಟೆ. |
| ಅಥೋ ತೇನ ಯಜಮಾನಃ ಅಮೂಮ್ ಏವ ದುಹೇ | ನಿಲ್ಲುವಿಕೆಯಿಂದ ಯಜಮಾನನು ವೃಷ್ಟ್ಯಾದಿ ಸಾರಗಳನ್ನು ಪಡೆಯುವನು. |

**ಇನ್ನೊಂದು ಬಗೆಯ ಪ್ರಶಂಸೆ**

| | |
|---|---|
| ಯತ್ ಆಸೀನಃ ಶಗ್ಂಸತಿ | ಹೋತೃವು ಕುಳಿತುಕೊಂಡು ಶಸ್ತ್ರವನ್ನು ಹೇಳುವಿಕೆ ಎಂಬುದು ಯಾವುದೋ |
| ತಸ್ಮಾತ್ ಇತಃಪ್ರದಾನಮ್ | ಆದರಿಂದ ಭೂಲೋಕದಿಂದ ಕೊಡಲ್ಪಟ್ಟ ಹವಿರ್ಭಾಗಾದಿಗಳನ್ನು |
| ದೇವಾಃ ಉಪಜೀವಂತಿ | ದೇವತೆಗಳು ಉಪಭೋಗಿಸುತ್ತಿರುತ್ತಾರೆ. |

---

ಪ್ರತಿಗರವನ್ನು ಇನ್ನೊಂದು ರೀತಿಯಲ್ಲಿ ಪ್ರಶಂಸಿಸಲಾಗಿದೆ. ಪ್ರತಿಗರವು ಅಧ್ವರ್ಯು ವಿಗೆ ಉದ್ಗೀಥವಿದ್ದಂತೆ. **'ಓಮಿತಿ ಸಾಮಾನಿ ಗಾಯಂತಿ' 'ಓಗ್ಂಶೋಮಿತಿ ಶಸ್ತ್ರಾಣಿ ಶಗ್ಂಸಂತಿ' 'ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ'** ಎಂದು ಪ್ರಣವದ ಪ್ರಶಂಸೆಯಲ್ಲಿಯೂ ಹೇಳಿದೆ. ಈ ಅರ್ಥವಾದದಿಂದ ಪ್ರತಿಗರವು ಪ್ರಶಸ್ತವಾದುದೆಂದು ತಿಳಿಸಲಾಗಿದೆ.

ಯತ್ತಿಷ್ಠನ್ಪ್ರತಿಗೃಣಾತಿ ತಸ್ಮಾದಮುತಃಪ್ರದಾನಂ

ಮನುಷ್ಯಾ ಉಪಜೀವಂತಿ ಯತ್ಪ್ರಾಙಾಸೀನಶ್ಶಗ್ಂಸತಿ

---

ಯತ್ । ತಿಷ್ಠನ್ನ್ । ಪ್ರತಿಗೃಣಾತೀತಿ ಪ್ರತಿ-ಗೃಣಾತಿ । ತಸ್ಮಾತ್ । ಅಮುತಃಪ್ರದಾನಮಿತ್ಯಮುತಃ-ಪ್ರದಾನಮ್ । ಮನುಷ್ಯಾಃ । ಉಪೇತಿ । ಜೀವಂತಿ । ಯತ್ । ಪ್ರಾಙ್ । ಆಸೀನಃ । ಶಗ್ಂಸತಿ ।

---

| | |
|---|---|
| ಯತ್ ತಿಷ್ಠನ್ ಪ್ರತಿಗೃಣಾತಿ | ಅಧ್ವರ್ಯುವು ನಿಂತುಕೊಂಡು ಪ್ರತಿಗರವನ್ನು ಹೇಳುವುದೆಂಬುದು ಯಾವುದುಂಟೋ |
| ತಸ್ಮಾತ್ ಅಮುತಃಪ್ರದಾನಮ್ | ಆದರಿಂದ ದೇವಲೋಕದಿಂದ ಪ್ರಾಪ್ತವಾದ ವೃಷ್ಟ್ಯಾದಿಗಳನ್ನು |
| ಮನುಷ್ಯಾಃ ಉಪಜೀವಂತಿ | ಮನುಷ್ಯರು ಉಪಯೋಗಿಸಿಕೊಂಡು ಬಾಳುತ್ತಾರೆ. |

**ಹೋತೃವಿನ ಪ್ರಾಙ್ಮುಖತ್ವ (ಪೂರ್ವಮುಖವಾಗಿರುವಿಕೆ) ಹಾಗೂ ಅಧ್ವರ್ಯುವಿನ ಪ್ರತ್ಯಙ್ಮುಖತ್ವ (ಪಶ್ಚಿಮಾಭಿಮುಖವಾಗಿರುವಿಕೆ)ದ ವಿಧಿ;ಅರ್ಥವಾದ**

| | |
|---|---|
| ಯತ್ ಪ್ರಾಙ್ ಆಸೀನಃ ಶಗ್ಂಸತಿ | ಹೋತೃವು ಪೂರ್ವಾಭಿಮುಖನಾಗಿ ಕುಳಿತುಕೊಂಡು ಶಸ್ತ್ರಗಳನ್ನು ಹೇಳುವನೆಂಬುದು ಯಾವುದುಂಟೋ |

---

ಹೋತೃವು ಕುಳಿತುಕೊಂಡು ಶಸ್ತ್ರವನ್ನು ಹೇಳುವುದರಿಂದ ಭೂಮಿಯ ಸಾರವನ್ನು ಪಡೆಯುವನೆಂಬ ಪ್ರಶಂಸೆಯಿಂದ, ಅಧ್ವರ್ಯುವು ನಿಂತುಕೊಂಡು ಪ್ರತಿಗರವನ್ನು ಹೇಳುವುದರಿಂದ ವೃಷ್ಟ್ಯಾದಿಸಾರಗಳನ್ನು ಪಡೆಯುವನೆಂಬ ಪ್ರಶಂಸೆಯಿಂದ ನಿಲ್ಲುವಿಕೆ ಮತ್ತು ಕುಳಿತುಕೊಳ್ಳುವಿಕೆಗಳ ವಿಧಿಯ ಪ್ರಾಶಸ್ತ್ಯವು ಹೇಳಲ್ಪಟ್ಟಿದೆ.

ಹೋತೃವು ಕುಳಿತುಕೊಂಡು ಶಸ್ತ್ರವನ್ನು ಹೇಳುವುದರಿಂದ ಭೂಲೋಕದಿಂದ ಕೊಡಲ್ಪಟ್ಟ ಹವಿರ್ಭಾಗಾದಿಗಳನ್ನು ದೇವತೆಗಳು ಅನುಭವಿಸಿ ಜೀವಿಸುತ್ತಾರೆ.

ಪ್ರತ್ಯಙ್ತ್ತಿಷ್ಠನ್ಪ್ರತಿಗೃಣಾತಿ ತಸ್ಮಾತ್ಪ್ರಾಚೀನಗ್ಂ ರೇತೋ ಧೀಯತೇ ಪ್ರತೀಚೀಃ ಪ್ರಜಾ ಜಾಯಂತೇ ಯದ್ವೈ ಹೋತಾಽಧ್ವರ್ಯುಮಭ್ಯಾಹ್ವಯತೇ

---

ಪ್ರತ್ಯಙ್ । ತಿಷ್ಠನ್ । ಪ್ರತಿಗೃಣಾತೀತಿ ಪ್ರತಿ-ಗೃಣಾತಿ । ತಸ್ಮಾತ್ । ಪ್ರಾಚೀನಮ್ । ರೇತಃ । ಧೀಯತೇ । ಪ್ರತೀಚೀಃ । ಪ್ರಜಾ ಇತಿ ಪ್ರ-ಜಾಃ । ಜಾಯಂತೇ । ಯತ್ । ವೈ । ಹೋತಾ । ಅಧ್ವರ್ಯುಮ್ । ಅಭ್ಯಾಹ್ವಯತ ಇತ್ಯಭಿ-ಆಹ್ವಯತೇ ।

---

| | |
|---|---|
| ತಸ್ಮಾತ್ ಪ್ರಾಚೀನಮ್ ರೇತಃ ಧೀಯತೇ | ಅದುದರಿಂದ ಪ್ರಾಙ್ಮುಖವಾಗಿ/ಎದುರಾಗಿ/ಪತ್ನೀ ಕ್ಷೇತ್ರಾಭಿಮುಖವಾಗಿ ರೇತಸ್ಸು ಇಡಲ್ಪಡುತ್ತದೆ. |
| ಯತ್ ಪ್ರತ್ಯಙ್ ತಿಷ್ಠನ್ ಪ್ರತಿಗೃಣಾತಿ | ಅಧ್ವರ್ಯುವು ಪಶ್ಚಿಮಕ್ಕೆ ಅಭಿಮುಖನಾಗಿ ನಿಂತು ಕೊಂಡು ಪ್ರತಿಗರಗಳನ್ನು ಹೇಳುತ್ತಾನೆಂಬುದು ಯಾವುದುಂಟೋ |
| ತಸ್ಮಾತ್ ಪ್ರಜಾಃ ಪ್ರತೀಚೀಃ ಜಾಯಂತೇ | ಆದರಿಂದ ಮಕ್ಕಳು/ಪ್ರಜೆಗಳು ಪ್ರತ್ಯಙ್ಮುಖರಾಗಿ/ ಪತ್ನೀಕ್ಷೇತ್ರಕ್ಕೆ ಅಭಿಮುಖರಾಗದೆ ಹುಟ್ಟುತ್ತಾರೆ. |

## ಅಧ್ವರ್ಯುವಿನ ಪರಾಙಾವರ್ತನವಿಧಾನ; ಪ್ರಶಂಸೆ

| | |
|---|---|
| ಯತ್ ವೈ ಹೋತಾ ಅಧ್ವರ್ಯುಮ್ ಅಭ್ಯಾಹ್ವಯತೇ | ಯಾವಾಗ ಹೋತೃವು ಪ್ರತಿಗರವನ್ನು ಹೇಳುವು ದಕ್ಕಾಗಿ ಅಭಿಮುಖನಾಗಿ ಕುಳಿತು ಅಧ್ವರ್ಯು ವನ್ನು ಆಹ್ವಾನಿಸುತ್ತಾನೆಯೋ |

---

ಅಧ್ವರ್ಯುವು ನಿಂತುಕೊಂಡು ಪ್ರತಿಗರವನ್ನು ಹೇಳುವುದರಿಂದ ದೇವಲೋಕದ ವೃಷ್ಟ್ಯಾದಿಗಳನ್ನು ಮನುಷ್ಯರು ಬಳಸಿಕೊಂಡು ಬಾಳುತ್ತಾರೆ.

ವಜ್ರಮೇನಮಭಿ ಪ್ರವರ್ತಯತಿ ಪರಾಙಾವರ್ತತೇ

ವಜ್ರಮೇವ ತನ್ನಿಕರೋತಿ ॥೪೧-9॥

[ಸವನೇ ವಜ್ರಮಂತರ್ಧತ್ತೇ ತ್ರೀಣ್ಯೇತಾನ್ಯಕ್ಷರಾಣೀಂದ್ರಿಯಂ ಮಾಧ್ಯಂದಿನಗ್ಂ ಸವನಂ ನೋದ್ಗಾತೃಣಾಮಧ್ವರ್ಯುರ್ನೈತಿ ವರ್ತಯತ್ಯಷ್ಟೌ ಚ ॥]

---

ವಜ್ರಮ್ । ಏನಮ್ । ಅಭಿ । ಪ್ರೇತಿ । ವರ್ತಯತಿ । ಪರಾಙ್ । ಏತಿ । ವರ್ತತೇ ।

ವಜ್ರಮ್ । ಏವ । ತತ್ । ನೀತಿ । ಕರೋತಿ ॥೪೧-೯॥

---

| | |
|---|---|
| ವಜ್ರಮ್ ಏನಮ್ ಅಭಿ ಪ್ರವರ್ತಯತಿ | [ಆಗ] ಅಧ್ವರ್ಯುವಿನ ಮೇಲೆ ವಜ್ರಾಯುಧವನ್ನು ಪ್ರಹರಿಸಿದವನಾಗುತ್ತಾನೆ. |
| ಪರಾಙ್ ಆವರ್ತತೇ | ಅಧ್ವರ್ಯುವು ಆಗ ಪಶ್ಚಿಮಾಭಿಮುಖನಾಗಿ ತಿರುಗುತ್ತಾನೆ. |
| ತತ್ ವಜ್ರಮ್ ಏವ ನಿ ಕರೋತಿ | ಅದು ವಜ್ರಾಯುಧವನ್ನು ನಿರಾಕರಿಸುತ್ತದೆ/ ಅದರಿಂದ ಹಿಂಸೆಯಾಗದಂತೆ ಮಾಡುತ್ತದೆ. |

---

ಈ ಪ್ರಶಂಸೆಯೂ ಕುಳಿತುಕೊಳ್ಳುವಿಕೆ ಮತ್ತು ನಿಲ್ಲುವಿಕೆಯ ವಿಧಿಯ ಪ್ರಾಶಸ್ತ್ಯವನ್ನು ಹೇಳುತ್ತದೆ.

ಹೋತೃವು ಪೂರ್ವಾಭಿಮುಖನಾಗಿ ಶಸ್ತ್ರಗಳನ್ನು ಹೇಳಬೇಕೆಂಬ ವಿಧಿಯನ್ನೂ, ಅಧ್ವರ್ಯುವು ಪಶ್ಚಿಮಕ್ಕೆ ಅಭಿಮುಖನಾಗಿ ಅಂದರೆ ಹೋತೃವಿನ ಮುಖಕ್ಕೆ ಎದುರಾಗಿ ಪ್ರತಿಗರವನ್ನು ಹೇಳಬೇಕೆಂಬ ವಿಧಿಯನ್ನೂ ಪ್ರಶಂಸಿಸುವ ಸಲುವಾಗಿ ವಿಧಿಯೂ ಅದರ ಅರ್ಥವಾದವೂ ಇಲ್ಲಿದೆ.

ಹೋತೃವು ಪ್ರತಿಗರವನ್ನು ಹೇಳುವುದಕ್ಕಾಗಿ ಅಧ್ವರ್ಯುವನ್ನು ಆಹ್ವಾನಿಸುವುದೆಂದರೆ ಅದು ವಜ್ರಾಯುಧವನ್ನು ಪ್ರಹಾರ ಮಾಡಿದಂತೆ. ಆಗ ಅಧ್ವರ್ಯುವು ಪಶ್ಚಿಮಕ್ಕೆ ತಿರುಗುವುದರಿಂದ ಆ ವಜ್ರಾಯುಧವನ್ನು ನಿರಾಕರಿಸಿದಂತಾಗಿ ಅದರಿಂದ ಹಿಂಸೆಯಾಗದು.

ಇಲ್ಲಿ ಹೋತೃವಿನ ಆಹ್ವಾನವನ್ನು ಮೂರು ಬಾರಿ ಅನುವಾದ ಮಾಡಲಾಗಿದೆ. ಶಸ್ತ್ರವನ್ನು ಹೇಳಿದ ಬಳಿಕ **'ಉಕ್ಥಶಾಃ'** ಎಂದು ಅಧ್ವರ್ಯುವು ಹೇಳುವುದಕ್ಕಾಗಿ ಪ್ರಥಮಾಹ್ವಾನ. **'ಶೋಂಸಾಮೋದ ಇವ'** ಎಂದು ಪ್ರತ್ಯಾಹ್ವಾನವನ್ನು ಹೇಳುವುದಕ್ಕಾಗಿ ಎರಡನೆಯ ಅನುವಾದ. ಅಧ್ವರ್ಯುವು ಪ್ರತ್ಯಙ್ಮುಖನಾಗಿ ತಿರುಗುವುದಕ್ಕಾಗಿ ಮೂರನೆಯ ಅನುವಾದವಿದೆ.

ಈ ಅನುವಾಕದಲ್ಲಿ ಸಮಂತ್ರಕವಾದ ಸಾಂಗವಾದ ಪ್ರತಿಗರವು ಹೇಳಲ್ಪಟ್ಟಿದೆ.

---

## ವಿನಿಯೋಗಸಂಗ್ರಹ

**ಪ್ರತ್ಯಾಹ್ವಯೇತ [1]ಶೋಂಸಾವೋಂ ಸವನೇಷು ತ್ರಿಷೂಚ್ಚರೇತ್ ।**
**[2-4]ಉಕ್ಥಾದಿಮಂತ್ರಾಂಸ್ತ್ರೀನತ್ರ ಮಂತ್ರಾಶ್ಚತ್ವಾರ ಈರಿತಾಃ ॥**

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-4

## ॥ ದಶಮೋಽನುವಾಕಃ ॥

ಉಪಯಾಮಗೃಹೀತೋಽಸಿ ವಾಕ್ಷಸದಸಿ ವಾಕ್ಪಾಭ್ಯಾನ್ತ್ವಾ

ಕ್ರತುಪಾಭ್ಯಾಮಸ್ಯ ಯಜ್ಞಸ್ಯ ಧ್ರುವಸ್ಯಾಧ್ಯಕ್ಷಾಭ್ಯಾಂ ಗೃಹ್ಣಾ-

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ವಾಕ್ಷಸದಿತಿ ವಾಕ್ಷ-ಸತ್ ।

ಅಸಿ । ವಾಕ್ಪಾಭ್ಯಾಮಿತಿ ವಾಕ್-ಪಾಭ್ಯಾಮ್ । ತ್ವಾ । ಕ್ರತುಪಾಭ್ಯಾಮಿತಿ ಕ್ರತು-ಪಾಭ್ಯಾಮ್ ।

ಅಸ್ಯ । ಯಜ್ಞಸ್ಯ । ಧ್ರುವಸ್ಯ । ಅಧ್ಯಕ್ಷಾಭ್ಯಾಮಿತ್ಯಧಿ-ಅಕ್ಷಾಭ್ಯಾಮ್ । ಗೃಹ್ಣಾಮಿ ।

---

ಹಿಂದಿನ ಅನುವಾಕದಲ್ಲಿ ಪ್ರತಿಗರಮಂತ್ರಗಳು ಸಾಂಗವಾಗಿ ಹೇಳಲ್ಪಟ್ಟಿವೆ. ಈ ಅನುವಾಕದಲ್ಲಿ ಪ್ರತಿನಿಗ್ರಾ್ರಹ್ಯಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಉಪಯಾಮ...ಗೃಹ್ಣಾಮಿ ॥ | ಪ್ರತಿಪ್ರಸ್ಥಾತನು ದ್ರೋಣಕಲಶದಲ್ಲಿರುವ ಐಂದ್ರವಾಯವಪ್ರತಿನಿಗ್ರಾ್ರಹ್ಯವನ್ನು ಆದಿತ್ಯ ಪಾತ್ರದಿಂದ ತೆಗೆಯಲು* |

---

✦[ಎಲೈ ! ಐಂದ್ರವಾಯವಪ್ರತಿನಿಗ್ರಾ್ರಹ್ಯವೇ! ನೀನು] **ಉಪಯಾಮಗೃಹೀತಃ ಅಸಿ**=ಮಣ್ಣಿನ ಪಾತ್ರೆಯಿಂದ ಗ್ರಹಿಸಲ್ಪಟ್ಟಿರುವೆ. **ವಾಕ್ಷಸತ್ ಅಸಿ**=ವಾಗಿಂದ್ರಿಯದಲ್ಲಿರುವೆ; **ತ್ವಾ**=ನಿನ್ನನ್ನು; **ವಾಕ್ಪಾಭ್ಯಾಮ್**=ವಾಗಿಂದ್ರಿಯಪಾಲಕರಾದ; **ಕ್ರತುಪಾಭ್ಯಾಮ್**=ಯಾಗರಕ್ಷಕರಾದ; **ಅಸ್ಯ ಧ್ರುವಸ್ಯ ಯಜ್ಞಸ್ಯ**=ಅವಿನಾಶಿಯಾದ ಫಲವುಳ್ಳ ಈ ಯಜ್ಞದ; **ಅಧ್ಯಕ್ಷಾಭ್ಯಾಮ್ ಗೃಹ್ಣಾಮಿ**=ಸ್ವಾಮಿಗಳಾದ ಇಂದ್ರ-ವಾಯುಗಳಿಗಾಗಿ ತೆಗೆದುಕೊಳ್ಳುತ್ತೇನೆ.

---

*ಇದಕ್ಕೆ ಸಾದನವು ಇಲ್ಲ.

ಮ್ಯುಪಯಾಮಗೃಹೀತೋಽಸ್ಯೃತಸದಸಿ ಚಕ್ಷುಷ್ಪಾಭ್ಯಾಂ ತ್ವಾ

ಕ್ರತುಪಾಭ್ಯಾಮಸ್ಯ ಯಜ್ಞಸ್ಯ ಧ್ರುವಸ್ಯಾಧ್ಯಕ್ಷಾಭ್ಯಾಂ ಗೃಹ್ಣಾ-

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಋತಸದಿತ್ಯೃತ-ಸತ್ ।

ಅಸಿ । ಚಕ್ಷುಷ್ಪಾಭ್ಯಾಮಿತಿ ಚಕ್ಷುಃ-ಪಾಭ್ಯಾಮ್ । ತ್ವಾ । ಕ್ರತುಪಾಭ್ಯಾಮಿತಿ ಕ್ರತು-

ಪಾಭ್ಯಾಮ್ । ಅಸ್ಯ । ಯಜ್ಞಸ್ಯ । ಧ್ರುವಸ್ಯ । ಅಧ್ಯಕ್ಷಾಭ್ಯಾಮಿತ್ಯಧಿ-ಅಕ್ಷಾಭ್ಯಾಮ್ ।

ಗೃಹ್ಣಾಮಿ ।

---

| ಮಂತ್ರ | ವಿನಿಯೋಗ |
|---|---|
| ಉಪಯಾಮ..ಋತಸತ್...ಗೃಹ್ಣಾಮಿ ॥ | ಮೈತ್ರಾವರುಣಪ್ರತಿನಿಗ್ರಾಹ್ಯವನ್ನು ತೆಗೆಯಲು. |

---

✦[ಎಲೈ! ಮೈತ್ರಾವರುಣನಿಗ್ರಾಹ್ಯವೇ! ನೀನು]**ಉಪಯಾಮಗೃಹೀತಃ ಅಸಿ**= ಮೃನ್ಮಯಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; **ಋತಸತ್ ಅಸಿ**=*ಚಕ್ಷುರಿಂದ್ರಿಯದಲ್ಲಿ ಇರುವೆ; **ಚಕ್ಷುಷ್ಪಾಭ್ಯಾಮ್**=*ಚಕ್ಷುರಿಂದ್ರಿಯಪಾಲಕರಾದ; **ಕ್ರತುಪಾಭ್ಯಾಮ್**= ಯಾಗರಕ್ಷಕರಾದ; **ಅಸ್ಯ ಧ್ರುವಸ್ಯ ಯಜ್ಞಸ್ಯ**=ಶಾಶ್ವತವಾದ ಫಲಪ್ರದವಾದ ಈ ಯಜ್ಞದ; **ಅಧ್ಯಕ್ಷಾಭ್ಯಾಮ್**=ಸ್ವಾಮಿಗಳಾದ ಮಿತ್ರಾವರುಣರಿಗಾಗಿ; **ತ್ವಾ**=ನಿನ್ನನ್ನು; **ಗೃಹ್ಣಾಮಿ**=[ಈ ಪಾತ್ರದಲ್ಲಿ] ಹಿಡಿದಿಡುತ್ತೇನೆ.

---

ಐಂದ್ರವಾಯವನಿಗ್ರಾಹ್ಯವೇ! ನೀನು ಮಣ್ಣಿನ ಪಾತ್ರೆಯಿಂದ ಹಿಡಿಯಲ್ಪಟ್ಟಿರುವೆ. ನಿನ್ನನ್ನು ಇಂದ್ರ-ವಾಯುಗಳಿಗಾಗಿ ತೆಗೆದುಕೊಳ್ಳುತ್ತೇನೆ. *ಇಂದ್ರವಾಯುಗಳು

---

*ಋತಮ್=ಸತ್ಯಮ್-ಚಕ್ಷುರಿಂದ್ರಿಯ. ಚಕ್ಷುರ್ವೈ ಸತ್ಯಮ್ । ತೈ.ಬ್ರಾ 1.1.4

*ಚಕ್ಷುರ್ಮೈತ್ರಾವರುಣಃ । ತೈ.ಸಂ.6.4.9

*ವಾಗ್ವಾ ಏಷಾ ಯದೈಂದ್ರವಾಯವಃ । ತೈ.ಸಂ.6.4.7

ಮ್ಯುಪಯಾಮಗೃಹೀತೋಽಸಿ ಶ್ರುತಸದಸಿ

ಶ್ರೋತ್ರಪಾಭ್ಯಾಂ ತ್ವಾ ಕ್ರತುಪಾಭ್ಯಾಮಸ್ಯ ಯಜ್ಞಸ್ಯ

ಧ್ರುವಸ್ಯಾಧ್ಯಕ್ಷಾಭ್ಯಾಂ ಗೃಹ್ಣಾಮಿ

---

ಉಪಯಾಮಗೃಹೀತ ಇತ್ಯುಪಯಾಮ–ಗೃಹೀತಃ । ಅಸಿ । ಶ್ರುತಸದಿತಿ ಶ್ರುತ–ಸತ್ । ಅಸಿ । ಶ್ರೋತ್ರಪಾಭ್ಯಾಮಿತಿ ಶ್ರೋತ್ರ–ಪಾಭ್ಯಾಮ್ । ತ್ವಾ । ಕ್ರತುಪಾಭ್ಯಾಮಿತಿ ಕ್ರತು–ಪಾಭ್ಯಾಮ್ । ಅಸ್ಯ । ಯಜ್ಞಸ್ಯ । ಧ್ರುವಸ್ಯ । ಅಧ್ಯಕ್ಷಾಭ್ಯಾಮಿತ್ಯಧಿ–ಅಕ್ಷಾಭ್ಯಾಮ್ । ಗೃಹ್ಣಾಮಿ ।

---

| ಮಂತ್ರ | ವಿನಿಯೋಗ |
| --- | --- |
| ಉಪಯಾಮ..ಶ್ರುತಸತ್...ಗೃಹ್ಣಾಮಿ ॥ | ಆಶ್ವಿನಪ್ರತಿನಿಗ್ರಾಹ್ಯವನ್ನು ತೆಗೆಯಲು |

---

✦[ಎಲೈ! ಆಶ್ವಿನಪ್ರತಿನಿಗ್ರಾಹ್ಯವೇ! ನೀನು] **ಉಪಯಾಮಗೃಹೀತಃ ಅಸಿ**= ಮೃನ್ಮಯಪಾತ್ರೆಯಿಂದ ಗ್ರಹಿಸಲ್ಪಟ್ಟಿರುವೆ; **ಶ್ರುತಸತ್ ಅಸಿ**=*ಶ್ರೋತ್ರೇಂದ್ರಿಯದಲ್ಲಿ ಇರುವೆ; **ತ್ವಾ**=ನಿನ್ನನ್ನು; **ಶ್ರೋತ್ರಪಾಭ್ಯಾಮ್**=ಕರ್ಣೇಂದ್ರಿಯಪಾಲಕರಾದ; **ಕ್ರತುಪಾಭ್ಯಾಮ್**=ಯಜ್ಞರಕ್ಷಕರಾದ; **ಅಸ್ಯ ಧ್ರುವಸ್ಯ ಯಜ್ಞಸ್ಯ**=ನಿತ್ಯಫಲಪ್ರದವಾಗಿರುವ ಈ ಯಜ್ಞದ; **ಅಧ್ಯಕ್ಷಾಭ್ಯಾಮ್**=ಒಡೆಯರಾಗಿರುವ ಅಶ್ವಿನೀದೇವತೆಗಳಿಗಾಗಿ; **ಗೃಹ್ಣಾಮಿ**=ತೆಗೆದುಕೊಳ್ಳುತ್ತೇನೆ.

---

ವಾಗಿಂದ್ರಿಯದಲ್ಲಿ ಇರತಕ್ಕವರು. ಅವರು ವಾಕ್ಕಿನ ಪಾಲಕರು. ಯಜ್ಞರಕ್ಷಕರು. ವಿನಾಶಿಯಲ್ಲದೆ ಧ್ರುವವಾಗಿರುವ ಫಲವುಳ್ಳ ಈ ಯಜ್ಞಕ್ಕೆ ಒಡೆಯರು. ಅವರಿಗಾಗಿ ಈ ಪ್ರತಿನಿಗ್ರಾಹ್ಯವನ್ನು ತೆಗೆದುಕೊಳ್ಳುತ್ತೇನೆ.

ಎಲೈ! ಮೈತ್ರಾವರುಣನಿಗ್ರಾಹ್ಯವೇ! ನೀನು ಮೃತ್ಪಾತ್ರೆಯಲ್ಲಿ ಹಿಡಿದಿಡಲ್ಪಟ್ಟಿರುವೆ.

---

*ಶ್ರೋತ್ರಮಾಶ್ವಿನಃ । ತೈ.ಸಂ.6.4.9

# ದೇವೇಭ್ಯಸ್ತ್ವಾ ವಿಶ್ವದೇವೇಭ್ಯಸ್ತ್ವಾ ವಿಶ್ವೇಭ್ಯಸ್ತ್ವಾ ದೇವೇಭ್ಯೋ

ದೇವೇಭ್ಯಃ। ತ್ವಾ। ವಿಶ್ವದೇವೇಭ್ಯ ಇತಿ ವಿಶ್ವ–ದೇವೇಭ್ಯಃ। ತ್ವಾ। ವಿಶ್ವೇಭ್ಯಃ। ತ್ವಾ। ದೇವೇಭ್ಯಃ।

| ಮಂತ್ರ | ವಿನಿಯೋಗ |
|---|---|
| ದೇವೇಭ್ಯಸ್ತ್ವಾ॥ | ಪ್ರತಿಪ್ರಸ್ಥಾತನು ಆದಿತ್ಯಸ್ಥಾಲಿಗೆ ಆದಿತ್ಯಪಾತ್ರದಿಂದ ಐಂದ್ರವಾಯವನಿರ್ಗ್ರಾಹ್ಯವನ್ನು/ಸಂಪಾತವನ್ನು ಹಾಕಲು. |
| ವಿಶ್ವದೇವೇಭ್ಯಸ್ತ್ವಾ॥ | ಮೈತ್ರಾವರುಣನಿರ್ಗ್ರಾಹ್ಯವನ್ನು ಹಾಕಲು |
| ವಿಶ್ವೇಭ್ಯಸ್ತ್ವಾ ದೇವೇಭ್ಯಃ॥ | ಆಶ್ವಿನಪ್ರತಿನಿರ್ಗ್ರಾಹ್ಯವನ್ನು ಹಾಕಲು |

✦[ಎಲೈ! ಐಂದ್ರವಾಯವನಿರ್ಗ್ರಾಹ್ಯವೇ!] **ತ್ವಾ**=ನಿನ್ನನ್ನು; **ದೇವೇಭ್ಯಃ**= ದೇವತೆಗಳಿಗಾಗಿ; [ಕೆಳಗೆ(ಆದಿತ್ಯಸ್ಥಾಲಿಯಲ್ಲಿ)ಹಾಕುತ್ತಿದ್ದೇನೆ.]

✦[ಎಲೈ! ಮೈತ್ರಾವರುಣನಿರ್ಗ್ರಾಹ್ಯವೇ!]**ತ್ವಾ**=ನಿನ್ನನ್ನು; **ವಿಶ್ವದೇವೇಭ್ಯಃ**=ಸರ್ವ ದೇವಗಣಗಳಿಗಾಗಿ; [ಆದಿತ್ಯಗ್ರಹದಲ್ಲಿ ಹಾಕುತ್ತಿದ್ದೇನೆ]

✦[ಎಲೈ! ಆಶ್ವಿನಪ್ರತಿನಿರ್ಗ್ರಾಹ್ಯವೇ! **ತ್ವಾ**=ನಿನ್ನನ್ನು; **ವಿಶ್ವೇಭ್ಯಃ ದೇವೇಭ್ಯಃ**= ಪ್ರತ್ಯೇಕವಾಗಿ ಎಲ್ಲಾ ದೇವತೆಗಳಿಗಾಗಿ; [ಆದಿತ್ಯಗ್ರಹದಲ್ಲಿ ಹಾಕುತ್ತೇನೆ]

ಚಕ್ಷುರಿಂದ್ರಿಯಪಾಲಕರಾದ ಮಿತ್ರಾವರುಣರಿಗಾಗಿ ಚಕ್ಷುರಿಂದ್ರಿಯದಲ್ಲಿರುವ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಆಶ್ವಿನನಿರ್ಗ್ರಾಹ್ಯವೇ! ಶ್ರೋತ್ರೇಂದ್ರಿಯದಲ್ಲಿರುವ ನಿನ್ನನ್ನು ಅಶ್ವಿನೀದೇವತೆಗಳಿಗಾಗಿ ಗ್ರಹಿಸುವೆನು. ಅವರೂ ಶ್ರೋತ್ರೇಂದ್ರಿಯಪಾಲಕರು. ಯಜ್ಞದ ಒಡೆಯರು.

**ಐಂದ್ರವಾಯವ–ಮೈತ್ರಾವರುಣ–ಆಶ್ವಿನ–**ಈ ದ್ವಿದೇವತ್ಯಸೋಮರಸದ ಶೇಷವನ್ನು ಆದಿತ್ಯಗ್ರಹದಲ್ಲಿ ಅವನಯನಕ್ಕಾಗಿ ಈ ಮಂತ್ರಗಳು.

# ವಿಷ್ಣವುರುಕ್ರಮೈಷ ತೇ ಸೋಮಸ್ತಗ್ಂ ರಕ್ಷಸ್ವ

# [ರಕ್ಷಸ್ವ(೪೨)] ತಂ ತೇ ದುಶ್ಚಕ್ಷಾ ಮಾಽವಖ್ಯನ್ಮಯಿ ವಸುಃ

# ಪುರೋವಸುರ್ವಾಕ್ಪಾ ವಾಚಂ ಮೇ ಪಾಹಿ

---

ವಿಷ್ಣೋ । ಉರುಕ್ರಮೇತ್ಯುರು-ಕ್ರಮ । ಏಷಃ । ತೇ । ಸೋಮಃ । ತಮ್ । ರಕ್ಷಸ್ವ । (೪೨) ತಮ್ । ತೇ । ದುಶ್ಚಕ್ಷಾ ಇತಿ ದುಃ-ಚಕ್ಷಾಃ । ಮಾ । ಅವೇತಿ । ಖ್ಯತ್ । ಮಯಿ । ವಸುಃ । ಪುರೋವಸುರಿತಿ ಪುರಃ-ವಸುಃ । ವಾಕ್ಪಾ ಇತಿ ವಾಕ್-ಪಾಃ । ವಾಚಮ್ । ಮೇ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| **ವಿಷ್ಣವುರು...ಮಾವಖ್ಯತ್ ॥** | ಆದಿತ್ಯಸ್ಥಾಲಿಯನ್ನು ಮುಚ್ಚಲು |
| **ಮಯಿ ವಸುಃ...ಪಾಹಿ ॥** | ಅಧ್ವರ್ಯುವು ಗ್ರಹಗಳನ್ನು ಹೋತೃವಿಗೆ ಕೊಡಲು |

---

✦**ಉರುಕ್ರಮ**=ದೊಡ್ಡ ಹೆಜ್ಜೆಯುಳ್ಳ/ತ್ರಿವಿಕ್ರಮನಾದ; **ವಿಷ್ಣೋ**=ವಿಷ್ಣುವೇ! **ಏಷಃ ತೇ ಸೋಮಃ**=ಈ ಸೋಮನು ನಿನಗೆ ಸಂಬಂಧಿಸಿದವನು; **ತಮ್ ರಕ್ಷಸ್ವ**=[ನೀನು] ಅವನನ್ನು ರಕ್ಷಿಸು. **ತೇ**=ನಿನಗೆ ಸಂಬಂಧಿಸಿದ; **ತಮ್**=ಆ ಸೋಮನನ್ನು; **ದುಶ್ಚಕ್ಷಾಃ**= ಪಾಪದೃಷ್ಟಿಯುಳ್ಳವನು; **ಮಾ ಅವಖ್ಯತ್**=ನೋಡದಿರಲಿ;✦**ಪುರೋವಸುಃ**=ಎಲ್ಲ ಧನಗಳಿಗಿಂತಲೂ ಮುಂದಿರುವ/ಮುಖ್ಯವಾದ; **ವಸುಃ ಮಯಿ**[ವರ್ತತೇ]= ಸೋಮರೂಪಧನವು ನನ್ನಲ್ಲಿ ಇದೆ; **ವಾಕ್ಪಾಃ**=[ಐಂದ್ರವಾಯವರೂಪಗ್ರಹವೇ!] [ನೀನು]ವಾಕ್ಕನ್ನು ರಕ್ಷಿಸುವವನಾಗಿದ್ದೀಯೆ. **ಮೇ ವಾಚಮ್ ಪಾಹಿ**=ನನ್ನ ವಾಗಿಂದ್ರಿಯವನ್ನು ರಕ್ಷಿಸು.

---

ತ್ರಿವಿಕ್ರಮನಾದ ವಿಷ್ಣುವೇ! ಈ ಸೋಮನು ನಿನ್ನವನು. ನೀನು ಅವನನ್ನು ರಕ್ಷಿಸು. ಅವನನ್ನು ಯಾರೂ ಪಾಪದೃಷ್ಟಿಯಿಂದ ನೋಡದಿರಲಿ.

# ಮಯಿ ವಸುರ್ವಿದದ್ವಸುಶ್ಚಕ್ಷುಷ್ಪಾಶ್ಚಕ್ಷುರ್ಮೇ ಪಾಹಿ

# ಮಯಿ ವಸುಸ್ಸಂಯದ್ವಸುಶ್ರೋತ್ರಪಾಶ್ರೋತ್ರಂ ಮೇ ಪಾಹಿ

---

ಮಯಿ । ವಸುಃ । ವಿದದ್ವಸುರಿತಿ ವಿದತ್-ವಸುಃ । ಚಕ್ಷುಷ್ಪಾ ಇತಿ ಚಕ್ಷುಃ-ಪಾಃ ।

ಚಕ್ಷುಃ । ಮೇ । ಪಾಹಿ । ಮಯಿ । ವಸುಃ । ಸಂಯದ್ವಸುರಿತಿ ಸಂಯತ್-ವಸುಃ ।

ಶ್ರೋತ್ರಪಾ ಇತಿ ಶ್ರೋತ್ರ-ಪಾಃ । ಶ್ರೋತ್ರಮ್ । ಮೇ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| ಮಯಿ..ವಿದದ್ವಸುಃ...ಪಾಹಿ ॥ | ಅಧ್ವರ್ಯುವು ಗ್ರಹಗಳನ್ನು ಹೋತೃವಿಗೆ ಕೊಡಲು |
| ಮಯಿ..ಸಂಯದ್ವಸುಃ...ಪಾಹಿ ॥ | ಅಧ್ವರ್ಯುವು ಹೋತೃವಿಗೆ ಆಶ್ವಿನಗ್ರಹ ವನ್ನು ಕೊಡಲು. |

---

✦**ವಿದದ್ವಸುಃ ವಸುಃ**=ಹೊಂದಿದ ಎಲ್ಲ ಧನಗಳುಳ್ಳ/ಎಲ್ಲ ಧನಗಳನ್ನು ಹೊಂದಿಸಿ ಕೊಡುವ; [ಸೋಮರೂಪವಾದ] ಧನವು; **ಮಯಿ**[ವರ್ತತೇ]=ನನ್ನ ಬಳಿ ಇದೆ. [ಓ! ಮೈತ್ರಾವರುಣಗ್ರಹವೇ!] ನೀನು; **ಚಕ್ಷುಷ್ಪಾಃ ಅಸಿ**=ಕಣ್ಣನ್ನು ರಕ್ಷಿಸತಕ್ಕವನು; **ಮೇ ಚಕ್ಷುಃ ಪಾಹಿ**=ನನ್ನ ನೇತ್ರಗಳನ್ನು ಕಾಪಾಡು; ✦**ಸಂಯದ್ವಸುಃ**=ಚೆನ್ನಾಗಿ ಪ್ರಾಪ್ತ ವಾದ ಸಮಸ್ತಧನಗಳುಳ್ಳ/ಸಮಸ್ತಧನಪ್ರಾಪಕವಾದ; **ವಸುಃ ಮಯಿ** [ವರ್ತತೇ] =ಸೋಮರೂಪಧನವು ನನ್ನಲ್ಲಿ ಇದೆ; [ಆಶ್ವಿನಗ್ರಹದಲ್ಲಿರುವ ಸೋಮವೇ! ನೀನು] **ಶ್ರೋತ್ರಪಾಃ ಅಸಿ**=ಶ್ರವಣೇಂದ್ರಿಯವನ್ನು ಪಾಲಿಸತಕ್ಕವನು; **ಮೇ ಶ್ರೋತ್ರಮ್ ಪಾಹಿ**=ನನ್ನ ಕಿವಿಗಳನ್ನು ರಕ್ಷಿಸು.

---

[ಅಧ್ವರ್ಯುವು ಮೂರು ಮಂತ್ರಗಳಿಂದ ಐಂದ್ರವಾಯವ,ಮೈತ್ರಾವರುಣ ಮತ್ತು ಆಶ್ವಿನಗ್ರಹಗಳನ್ನು ಹೋತೃವಿಗೆ ನೀಡುವನು]

ಓ! ಐಂದ್ರವಾಯವಗ್ರಹವೇ! ನನ್ನಲ್ಲಿ ಪ್ರಶಸ್ತವಾದ ಸೋಮರೂಪವಾದ ಧನವು ಇದೆ. ನೀನು ವಾಗಿಂದ್ರಿಯವನ್ನು ರಕ್ಷಿಸುವವನು. ನನ್ನ ವಾಗಿಂದ್ರಿಯವನ್ನು ಕಾಪಾಡು.

ಓ! ಮೈತ್ರಾವರುಣಗ್ರಹವೇ! ನೀನು ನನ್ನ ನೇತ್ರಗಳನ್ನು ಕಾಪಾಡು.

# ಭೂರಸಿ ಶ್ರೇಷ್ಠೋ ರಶ್ಮೀನಾಂ ಪ್ರಾಣಪಾಃ ಪ್ರಾಣಂ ಮೇ ಪಾಹಿ ಧೂರಸಿ ಶ್ರೇಷ್ಠೋ ರಶ್ಮೀನಾಮಪಾನಪಾ ಅಪಾನಂ ಮೇ ಪಾಹಿ

---

ಭೂಃ । ಅಸಿ । ಶ್ರೇಷ್ಠಃ । ರಶ್ಮೀನಾಮ್ । ಪ್ರಾಣಪಾ ಇತಿ ಪ್ರಾಣ-ಪಾಃ । ಪ್ರಾಣಮಿತಿ ಪ್ರ-ಅನಮ್ । ಮೇ । ಪಾಹಿ । ಧೂಃ । ಅಸಿ । ಶ್ರೇಷ್ಠಃ । ರಶ್ಮೀನಾಮ್ । ಅಪಾನಪಾ ಇತ್ಯಪಾನ-ಪಾಃ । ಅಪಾನಮಿತ್ಯಪ-ಅನಮ್ । ಮೇ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| **ಭೂರಸಿ...ಪ್ರಾಣಂ ಮೇ ಪಾಹಿ ॥** | ಗ್ರಹಹೋಮಾನಂತರ ಆದಿತ್ಯಗ್ರಹೋಪಸ್ಥಾನವನ್ನು ಮಾಡಲು |
| **ಧೂರಸಿ...ಅಪಾನಂ ಮೇ ಪಾಹಿ ॥** | ಆದಿತ್ಯಗ್ರಹೋಪಸ್ಥಾನವನ್ನು ಮಾಡಲು |

---

✦[ಐಂದ್ರವಾಯವಗ್ರಹವೇ!]**ಭೂಃ ಅಸಿ**=ನೀನು ಎಲ್ಲ ಸುಖಗಳನ್ನು ಉಂಟುಮಾಡಬಲ್ಲವನು; **ರಶ್ಮೀನಾಮ್**=ಸುಖಪ್ರಕಾಶಕವಸ್ತುಗಳಲ್ಲಿ; **ಶ್ರೇಷ್ಠಃ**=ಉತ್ತಮನು. **ಪ್ರಾಣಪಾಃ**=ಪ್ರಾಣಗಳನ್ನು ಕಾಪಾಡಬಲ್ಲವನೂ ಆಗಿರುವೆ; **ಮೇ ಪ್ರಾಣಮ್ ಪಾಹಿ** =ನನ್ನ ಪ್ರಾಣವನ್ನು ಕಾಪಾಡು;✦[ಎಲೈ! ಮೈತ್ರಾವರುಣಗ್ರಹವೇ!] [ನೀನು] **ಧೂಃ ಅಸಿ** =ಸುಖಗಳಿಗೆ ಅಹಿಂಸಕನಾಗಿರುವೆ. **ರಶ್ಮೀನಾಮ್**=ಸುಖಪ್ರಕಾಶಕವಸ್ತುಗಳಲ್ಲಿ; **ಶ್ರೇಷ್ಠಃ** =ಶ್ರೇಷ್ಠನಾಗಿರುವೆ; **ಅಪಾನಪಾಃ**=ಪಂಚಪ್ರಾಣಗಳಲ್ಲಿ ಒಂದಾದ ಅಪಾನವನ್ನು ರಕ್ಷಿಸತಕ್ಕವನು; **ಮೇ ಅಪಾನಮ್ ಪಾಹಿ**=ನನ್ನ ಅಪಾನವನ್ನು ನೀನು ಕಾಪಾಡು.

---

ಆಶ್ವಿನಗ್ರಹದಲ್ಲಿರುವ ಸೋಮವೇ! ನೀನು ನನ್ನ ಶ್ರವಣೇಂದ್ರಿಯವನ್ನು ಪೊರೆ.

ಸೋಮಯಾಗವು ಸರ್ವಕಾಮಪ್ರದವೆಂದು ಪ್ರಸಿದ್ಧವಾಗಿದೆ. ಗ್ರಹಗಳಿಗೂ ಇಂದ್ರಿಯಗಳಿಗೂ ಸಂಬಂಧವನ್ನು ತಿಳಿಸುವ **'ವಾಗ್ವಾ ಐಂದ್ರವಾಯವಃ' 'ಚಕ್ಷುರ್ಮೈತ್ರಾವರುಣಃ' ಶ್ರೋತ್ರಮಾಶ್ವಿನಃ'** ಎಂಬ ವಾಕ್ಯಗಳು ಶ್ರುತಿಯಲ್ಲಿವೆ.

**ಯೋ ನ ಇಂದ್ರವಾಯೂ ಮಿತ್ರಾವರುಣಾವಶ್ವಿನಾ**

**ವಭಿದಾಸತಿ ಭ್ರಾತೃವ್ಯ ಉತ್ಪಿಪೀತೇ ಶುಭಸ್ಪತೀ**

**ಇದಮಹಂ ತಮಧರಂ ಪಾದಯಾಮಿ ಯಥೇಂದ್ರಾಹ-**

**ಮುತ್ತಮಶ್ಚೇತಯಾನಿ ||೪೩-10||**

[ರಕ್ಷಸ್ವ ಭ್ರಾತೃವ್ಯಸ್ತ್ರಯೋದಶ ಚ ||]

---

ಯಃ । ನಃ । ಇಂದ್ರವಾಯೂ ಇತೀಂದ್ರ-ವಾಯೂ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಅಶ್ವಿನೌ । ಅಭಿದಾಸತೀತ್ಯಭಿ-ದಾಸತಿ । ಭ್ರಾತೃವ್ಯಃ । ಉತ್ಪಿಪೀತ ಇತ್ಯುತ್-ಪಿಪೀತೇ । ಶುಭಃ । ಪತೀ ಇತಿ । ಇದಮ್ । ಅಹಮ್ । ತಮ್ । ಅಧರಮ್ । ಪಾದಯಾಮಿ । ಯಥಾ । ಇಂದ್ರ । ಅಹಮ್ । ಉತ್ತಮ ಇತ್ಯುತ್-ತಮಃ । ಚೇತಯಾನಿ ||೪೩||

---

| ಮಂತ್ರ | ವಿನಿಯೋಗ |
| --- | --- |
| ಯೋ ನಃ...ಚೇತಯಾನಿ || | ಹೆಬ್ಬೆರಳಿನಿಂದ ತೋರುಬೆರಳನ್ನು ಪೀಡಿಸಿ ಶತ್ರುವು ಹಿಂಸೆಯನ್ನು ಪಡೆಯುವಂತೆ ಮಾಡಲು. |

---

✦ಇಂದ್ರವಾಯೂ=ಇಂದ್ರವಾಯುದೇವತೆಗಳೇ! ಯಃ ನಃ ಭ್ರಾತೃವ್ಯಃ=ಯಾವ ನಮ್ಮ ಶತ್ರುವು; ಅಭಿದಾಸತಿ=ಹಿಂಸಿಸುತ್ತಾನೆಯೋ; ಉತ್ಪಿಪೀತೇ=ನಮ್ಮನ್ನು ಮೀರಿ ಸೋಮಪಾನವನ್ನು ಮಾಡುತ್ತಾನೆಯೋ; ಶುಭಸ್ಪತೀ=ಶುಭಕಾರ್ಯಗಳಿಗೆ ಒಡೆಯರೇ! ಇದಮ್ ಅಹಮ್=ಈ ತರ್ಜನೀಪೀಡನದಿಂದ ನಾನು; ತಮ್ ಅಧರಮ್

**ಪಾದಯಾಮಿ**=ಅವನನ್ನು ಕೀಳು ಮಾಡುತ್ತೇನೆ; **ಇಂದ್ರ**=ಹೇ! ಇಂದ್ರನೇ! **ಯಥಾ ಅಹಮ್ ಉತ್ತಮಃ**=ಯಾವ ರೀತಿಯಿಂದ ನಾನು[ನನ್ನ ಶತ್ರುವಿಗಿಂತಲೂ] [ಚೆನ್ನಾಗಿ] **ಚೇತಯಾನಿ**=ತಿಳಿದವನಾಗುತ್ತೇನೆಯೋ; ತಥಾ ಕುರು=ಹಾಗೆ ಮಾಡು. ✦**ಮಿತ್ರಾವರುಣೌ**=ಮಿತ್ರಾವರುಣದೇವತೆಗಳೇ! ಯಃ ನಃ ಭ್ರಾತೃವ್ಯಃ=ಯಾವ ನಮ್ಮ ಶತ್ರುವು; ಅಭಿದಾಸತಿ=ಹಿಂಸಿಸುತ್ತಾನೆಯೋ; ಉತ್ಪಿಪೀತೇ=ನಮ್ಮನ್ನು ಮೀರಿ ಸೋಮಪಾನವನ್ನು ಮಾಡುತ್ತಾನೆಯೋ; ಶುಭಸ್ಪತೀ=ಶುಭಕಾರ್ಯಗಳಿಗೆ ಒಡೆಯರೇ! ಇದಮ್ ಅಹಮ್=ಈ ತರ್ಜನೀಪೀಡನದಿಂದ] ನಾನು; ತಮ್ ಅಧರಮ್ ಪಾದಯಾಮಿ=ಅವನನ್ನು ಕೀಳು ಮಾಡುತ್ತೇನೆ; ಇಂದ್ರ=ಹೇ! ಇಂದ್ರನೇ! ಯಥಾ ಅಹಮ್ ಉತ್ತಮಃ ಚೇತಯಾನಿ=ಯಾವ ರೀತಿಯಿಂದ ನಾನು ನನ್ನ ಶತ್ರುವಿಗಿಂತಲೂ ಚೆನ್ನಾಗಿ ತಿಳಿದವನಾಗುತ್ತೇನೆಯೋ; ತಥಾ ಕುರು=ಹಾಗೆ ಮಾಡು; ✦**ಅಶ್ವಿನೌ**=ಅಶ್ವಿನೀದೇವತೆಗಳೇ!; ಯಃ ನಃ ಭ್ರಾತೃವ್ಯಃ=ಯಾವ ನಮ್ಮ ಶತ್ರುವು; ಅಭಿದಾಸತಿ=ಹಿಂಸಿಸುತ್ತಾನೆಯೋ; ಉತ್ಪಿಪೀತೇ=ನಮ್ಮನ್ನು ಮೀರಿ ಸೋಮಪಾನ ವನ್ನು ಮಾಡುತ್ತಾನೆಯೋ; ಶುಭಸ್ಪತೀ=ಶುಭಕಾರ್ಯಗಳಿಗೆ ಒಡೆಯರೇ! ಇದಮ್ ಅಹಮ್=ಈ ತರ್ಜನೀಪೀಡನದಿಂದ ನಾನು; ತಮ್ ಅಧರಮ್ ಪಾದಯಾಮಿ=ಅವನನ್ನು ಕೀಳು ಮಾಡುತ್ತೇನೆ; ಇಂದ್ರ=ಹೇ! ಇಂದ್ರನೇ! ಯಥಾ ಅಹಮ್ ಉತ್ತಮಃ ಚೇತಯಾನಿ=ಯಾವ ರೀತಿಯಿಂದ ನಾನು ನನ್ನ ಶತ್ರುವಿಗಿಂತಲೂ ಚೆನ್ನಾಗಿ ತಿಳಿದವನಾಗುತ್ತೇನೆಯೋ; ತಥಾ ಕುರು=ಹಾಗೆ ಮಾಡು.

---

ಎಲೈ! ಐಂದ್ರವಾಯವವೇ! ನೀನು ಪ್ರಾಣಸ್ವರೂಪನು. ಸುಖಗಳನ್ನು ಉಂಟುಮಾಡು ವವನು. ನೀನು ಪ್ರಾಣಗಳನ್ನು ರಕ್ಷಿಸತಕ್ಕವನು. ನನ್ನ ಪ್ರಾಣವನ್ನು ಕಾಪಾಡು. ಓ! ಮೈತ್ರಾವರುಣಗ್ರಹವೇ! ನೀನು ದುಃಖಗಳನ್ನು ದೂರ ಮಾಡುವವನು. ಅಪಾನ ರಕ್ಷಕನು. ನೀನು ನನ್ನ ಅಪಾನವಾಯುವನ್ನು ರಕ್ಷಿಸು.[ಅಶ್ವಿನಗ್ರಹಹೋಮದ ಅನಂತರ ಹೇಳಬೇಕಾದ ಉಪಸ್ಥಾನಮಂತ್ರವು ಶಾಖಾಂತರದಲ್ಲಿದೆ]

[ಇಲ್ಲಿ **'ಯೋ ನ ಇಂದ್ರವಾಯೂ' 'ಯೋ ನೋ ಮಿತ್ರಾವರುಣಾ' 'ಯೋ ನೋಽಶ್ವಿನೌ'** ಎಂದು ಅನುಷಂಗಸಹಿತವಾಗಿ ಮೂರು ಮಂತ್ರಗಳಿವೆ. ಇವು ಭ್ರಾತೃವ್ಯ ಹಿಂಸೆಯಲ್ಲಿ ವಿನಿಯುಕ್ತವಾಗಿವೆ]

ಹೇ! ಇಂದ್ರವಾಯು, ಮಿತ್ರಾವರುಣ, ಅಶ್ವಿನೀದೇವತೆಗಳೇ! ನಾನು ನನ್ನ ಶತ್ರುವನ್ನು ಈ ತರ್ಜನೀಪೀಡನದಿಂದ ಕೀಳು ಮಾಡುತ್ತೇನೆ.

ಎಲೈ! ಇಂದ್ರನೇ! ನಾನು ನನ್ನ ಶತ್ರುವಿಗಿಂತಲೂ ಚೆನ್ನಾಗಿ ಬಲ್ಲವನಾಗುವಂತೆ ಅನುಗ್ರಹಿಸು.

## ವಿನಿಯೋಗಸಂಗ್ರಹ

1-3ಉಪೇತಿ ಪ್ರತಿನಿಗ್ರಾಹ್ಯಾ ಗ್ರಹೀತವ್ಯಾಸ್ತ್ರಿಭಿಃ ಕ್ರಮಾತ್ ।
4-6ದೇವೇಭ್ಯೋ ನಿನಯೇಚ್ಛೇಷಾಂಸ್ತ್ರಿಭಿರಾದಿತ್ಯಪಾತ್ರಕೇ ॥
7ವಿಷ್ಣೋ ತತ್ಪಾತ್ರಮಾಚ್ಛಾದ್ಯ ದ್ವಿದೇವತ್ಯಗ್ರಹಾನ್ಮಯಿ8-10 ।
ಹೋತ್ರೇ ದದ್ಯಾತ್ತ್ರಿಭಿಃ ಸೂರ್ಯಮುಪತಿಷ್ಠೇತ ಭೂರ್ದ್ವಯಾತ್11-12 ॥
13-15ಯೋ ನಸ್ತ್ರಿಭಿಸ್ತರ್ಜನೀಂ ತಾಮಂಗುಷ್ಠೇನೋಪಪೀಡಯೇತ್ ।
ಇಂದ್ರಮಿತ್ರಾಶ್ವಿಭಿರ್ಭಿನ್ನಾ ಮಂತ್ರಾಃ ಪಂಚದಶಾತ್ರ ತೇ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–15

## ॥ ಏಕಾದಶೋಽನುವಾಕಃ ॥

ಪ್ರ ಸೋ ಅಗ್ನೇ ತವೋತಿಭಿಃ ಸುವೀರಾಭಿಸ್ತರತಿ

ವಾಜಕರ್ಮಭಿಃ । ಯಸ್ಯ ತ್ವಗ್ಂ ಸಖ್ಯಮಾವಿಥ ॥

---

ಪ್ರೇತಿ । ಸಃ । ಅಗ್ನೇ । ತವ । ಊತಿಭಿರಿತ್ಯೂತಿ-ಭಿಃ । ಸುವೀರಾಭಿರಿತಿ ಸು-ವೀರಾಭಿಃ ।

ತರತಿ । ವಾಜಕರ್ಮಭಿರಿತಿ ವಾಜಕರ್ಮ-ಭಿಃ ॥ ಯಸ್ಯ । ತ್ವಮ್ । ಸಖ್ಯಮ್ । ಆವಿಥ॥

---

ಈ ಹನ್ನೊಂದನೆಯ ಅನುವಾಕದಲ್ಲಿ ತ್ರೈಧಾತವೀಯೇಷ್ಟಿಯ ಮಂತ್ರಗಳು ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಪ್ರ ಸೋ ಅಗ್ನೇ..ಆವಿಥ ॥ | ತ್ರೈಧಾತವೀಯೇಷ್ಟಿಯ ಸಾಮಿಧೇನಿಗಳಲ್ಲಿನ ಮೊದಲನೆಯ ಋಕ್ |

---

✦ಅಗ್ನೇ=ಅಗ್ನಿದೇವನೇ! ಯಸ್ಯ=ಯಾವ ಯಜಮಾನನ; **ಸಖ್ಯಮ್**=ಸ್ನೇಹವನ್ನು/ ಮಿತ್ರನಂತೆ ನಡೆದುಕೊಳ್ಳುವಿಕೆಯನ್ನು; **ತ್ವಮ್**=ನೀನು; **ಆವಿಥ**=ಪಾಲಿಸುತ್ತಿದ್ದೀಯೋ; **ಸಃ**=ಆ ಯಜಮಾನನು; **ತವ**=ನಿನ್ನ; **ಸುವೀರಾಭಿಃ**=ಒಳ್ಳೆಯ ಪುತ್ರಾದಿಗಳನ್ನು ಕೊಡುವ; **ವಾಜಕರ್ಮಭಿಃ**=ಅನ್ನವನ್ನು ಸಂಪಾದಿಸುವ ಉದ್ಯಮಗಳಿಂದ ಕೂಡಿದ; **ಊತಿಭಿಃ**=ರಕ್ಷಣೆಗಳಿಂದ; **ಪ್ರ ತರತಿ**=ಸಂಸಾರಕ್ಲೇಶಗಳನ್ನು ದಾಟುತ್ತಾನೆ/ ಸದ್ಗತಿಯನ್ನು ಪಡೆಯುತ್ತಾನೆ.[ನೀನು ಅವನ ಯಾಗಕ್ಕಾಗಿ ಪ್ರಜ್ವಲಿಸು]

**ಪ್ರ ಹೋತ್ರೇ ಪೂರ್ವ್ಯಂ ವಚೋಽಗ್ನಯೇ ಭರತಾ ಬೃಹತ್ ।**

**ವಿಪಾಂ ಜ್ಯೋತೀಗ್ಂಷಿ ಬಿಭ್ರತೇ ನ ವೇಧಸೇ ॥**

---

ಪ್ರೇತಿ । ಹೋತ್ರೇ । ಪೂರ್ವ್ಯಮ್ । ವಚಃ । ಅಗ್ನಯೇ । ಭರತ । ಬೃಹತ್ ॥

ವಿಪಾಮಿತಿ ವಿ-ಪಾಮ್ । ಜ್ಯೋತೀಗ್ಂಷಿ । ಬಿಭ್ರತೇ । ನ । ವೇಧಸೇ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಹೋತ್ರೇ...ವೇಧಸೇ ॥ | ಇದು ಎರಡನೆಯ ಸಾಮಿಧೇನಿಯ ಋಕ್ |

---

✦[ಋತ್ವಿಜರೇ!]**ಹೋತ್ರೇ**=ಹೋಮನಿಷ್ಪಾದಕನಾದ; **ವೇಧಸೇ**=ನಮ್ಮ ಹಿತವನ್ನು ಸಾಧಿಸಿಕೊಡುವ/ವಿಶ್ವಕ್ಕೆ ವಿಧಾತನಾದ; **ಜ್ಯೋತೀಗ್ಂಷಿ**=ಕಿರಣರೂಪವಾದ ಜ್ಯೋತಿಸ್ಸುಗಳನ್ನು; **ಬಿಭ್ರತೇ ನ**=ಹೊಂದಿರುವ ಸೂರ್ಯನಂತೆ/ಸೂರ್ಯನಿಗೆ ಹೇಗೋ ಹಾಗೆ; **ಅಗ್ನಯೇ**=ಅಗ್ನಿಗಾಗಿ; **ಬೃಹತ್**=ಮಹತ್ತಾದ; **ವಿಪಾಮ್**= ವಿಶೇಷವಾಗಿ ರಕ್ಷಿಸುವ; **ಪೂರ್ವ್ಯಮ್ ವಚಃ**=ಹಿಂದಿನ ಋಷಿಗಳಿಂದ ಮಾಡಲ್ಪಟ್ಟ ವಾಗ್ರೂಪವಾದ ಸ್ತುತಿಗಳನ್ನು; **ಪ್ರ ಭರತ**=ವಿಶೇಷವಾಗಿ ಮಾಡಿರಿ.

---

ಅಗ್ನಿಯೇ! ನೀನು ಯಜಮಾನನಿಗೆ ಗೆಳೆಯನಂತೆ ರಕ್ಷಣೆಯನ್ನು ಕೊಡುತ್ತಿರುವೆ. ಆ ಯಜಮಾನನು ನಿನ್ನ ಅನುಗ್ರಹದಿಂದ ಒಳ್ಳೆಯ ಪುತ್ರಾದಿಗಳನ್ನು ಪಡೆಯಲಿ. ಅನ್ನ ಪ್ರಾಪಕವಾದ ಅವನ ಕಾರ್ಯಗಳು ಸಫಲವಾಗಲಿ. ಆತನು ಸಂಸಾರಸಾಗರದ ಕ್ಲೇಶಗಳನ್ನು ದಾಟಲಿ. ಅವನು ಮಾಡುವ ಯಜ್ಞಕ್ಕಾಗಿ ನೀನು ಪ್ರಜ್ವಲಿಸು.

ಋತ್ವಿಜರೇ! **'ಅಗ್ನಿರ್ವೈ ದೇವಾನಾಮ್ ಹೋತಾ'** ಎಂಬಂತೆ ಅಗ್ನಿಯು ದೇವಹೋತೃವಾಗಿದ್ದಾನೆ. ಅವನು ಕಿರಣಗಳನ್ನು ಹೊಂದಿರುವ ಸೂರ್ಯನಂತೆ ಜ್ವಾಲೆಗಳ ತೇಜಸ್ಸಿನಿಂದ ಕೂಡಿರುತ್ತಾನೆ/**ವಿಶೇಷವಾಗಿ ರಕ್ಷಿಸುವ ಸೂರ್ಯಾದಿ ಜ್ಯೋತಿಗಳನ್ನು ಹೊಂದಿರುವಂತೆ ಮಹಾತೇಜಸ್ವಿಯಾಗಿದ್ದಾನೆ.** ಅವನು ವಿಶ್ವ ವಿಧಾತನೂ ನಮ್ಮ ಹಿತಸಾಧಕನೂ ಆಗಿರುತ್ತಾನೆ.

**ಅಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥಾ ತಿಸ್ರಸ್ತೇ ಜಿಹ್ವಾ**

**ಋತಜಾತ ಪೂರ್ವೀಃ । ತಿಸ್ರ ಉ ತೇ ತನುವೋ**

**ದೇವವಾತಾಸ್ತಾಭಿರ್ನಃ ಪಾಹಿ ಗಿರೋ ಅಪ್ರಯುಚ್ಛನ್ ॥**

---

ಅಗ್ನೇ । ತ್ರೀ । ತೇ । ವಾಜಿನಾ । ತ್ರೀ । ಸಧಸ್ಥೇತಿ ಸಧ-ಸ್ಥಾ । ತಿಸ್ರಃ । ತೇ । ಜಿಹ್ವಾಃ ।

ಋತಜಾತೇತ್ಯೃತ-ಜಾತ । ಪೂರ್ವೀಃ ॥ ತಿಸ್ರಃ । ಉ । ತೇ । ತನುವಃ । ದೇವವಾತಾ

ಇತಿ ದೇವ-ವಾತಾಃ । ತಾಭಿಃ । ನಃ । ಪಾಹಿ । ಗಿರಃ । ಅಪ್ರಯುಚ್ಛನ್ನಿತ್ಯಪ್ರ-ಯುಚ್ಛನ್ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ತ್ರೀ...ಅಪ್ರಯುಚ್ಛನ್ ॥ | ಸಾಮಿಧೇನಿಗಳಲ್ಲಿ ಕೊನೆಯ ಋಕ್. |

---

✦**ಅಗ್ನೇ**=ಅಗ್ನಿದೇವನೇ! **ತೇ ವಾಜಿನಾ ತ್ರೀ**=ನಿನ್ನ ಪುರೋಡಾಶಗಳೆಂಬ ಅನ್ನಗಳು ಸೋಮ-ಸಾನ್ನಾಯ್ಯ-ಆಜ್ಯರೂಪವಾಗಿ/ಸೋಮ-ಓಷಧಿ-ಸಾನ್ನಾಯ್ಯರೂಪವಾಗಿ ಮೂರಾಗಿವೆ. **ಸಧಸ್ಥಾ ತ್ರೀ**=ಪರಸ್ಪರಯುಕ್ತವಾದ ತ್ರಿಲೋಕರೂಪವಾದ/ ಆಹವನೀಯ-ದಕ್ಷಿಣಾಗ್ನಿ-ಗಾರ್ಹಪತ್ಯರೂಪವಾದ ಸ್ಥಾನಗಳು ಮೂರು. **ಋತಜಾತ** =ಯಜ್ಞಕ್ಕಾಗಿ ಜನಿಸಿದವನೇ! ಪರಮಾತ್ಮನಿಂದ ಉತ್ಪನ್ನನಾದವನೇ! **ತೇ ಜಿಹ್ವಾಃ ತಿಸ್ರಃ**=ಸಾತ್ವಿಕ-ರಾಜಸ-ತಾಮಸರೂಪವಾದ-ಇಷ್ಟಪ್ರಾಪ್ತಿ, ಅನಿಷ್ಟಪರಿಹಾರ-ಅಭಿಚಾರಗಳಿಗೆ ಸಾಧಕವಾದ ನಿನ್ನ ನಾಲಿಗೆಗಳು ಮೂರು; **ಉ**=ಮತ್ತು; **ದೇವವಾತಾಃ**=ದೇವತೆಗಳಿಂದ ಹೊಂದಲ್ಪಟ್ಟ/ಸರ್ವದೇವಾತ್ಮಕವಾದ; **ತಿಸ್ರಃ ತನುವಃ**= ಅಗ್ನಿ [ಬಡಬಾಗ್ನಿ] ಮಿಂಚು [ವಿದ್ಯುತ್ತಿಗೆ ಸಂಬಂಧಿಸಿದ] ಆದಿತ್ಯರೂಪವಾದ ಮೂರು ಶರೀರಗಳು; **ತೇ**=ನಿನಗೆ [ಇವೆ;] **ತಾಭಿಃ**=ಅವುಗಳಿಂದ; **ಪೂರ್ವೀಃ ಗಿರಃ**=ನಮ್ಮ ಮಂತ್ರರೂಪವಾದ ಮಾತುಗಳನ್ನು; **ಅಪ್ರಯುಚ್ಛನ್**=ಪ್ರಮಾದರಹಿತಗಳನ್ನಾಗಿ ಮಾಡುತ್ತಾ; **ನಃ ಪಾಹಿ**= ನಮ್ಮನ್ನು ರಕ್ಷಿಸು/ಯಾಗಕ್ಕಾಗಿ ಪ್ರಜ್ವಲಿಸು.

**ಸಂ ವಾಂ ಕರ್ಮಣಾ ಸಮಿಷಾ[(ಳಳ)ಹಿನೋಮೀ]ಹಿನೋ ಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ । ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈರ್ನಃ ಪಥಿಭಿಃ ಪಾರಯಂತಾ ॥**

---

ಸಮಿತಿ । ವಾಮ್ । ಕರ್ಮಣಾ । ಸಮಿತಿ । ಇಷಾ ।(ಳಳ)। ಹಿನೋಮಿ । ಇಂದ್ರಾವಿಷ್ಣೂ ಇತೀಂದ್ರಾ-ವಿಷ್ಣೂ । ಅಪಸಃ । ಪಾರೇ । ಅಸ್ಯ ॥ ಜುಷೇಥಾಮ್ । ಯಜ್ಞಮ್ । ದ್ರವಿಣಮ್। ಚ। ಧತ್ತಮ್ । ಅರಿಷ್ಟೈಃ । ನಃ । ಪಥಿಭಿರಿತಿ ಪಥಿ-ಭಿಃ । ಪಾರಯಂತಾ ॥

---

| ಮಂತ್ರ | ವಿನಿಯೋಗ |
|---|---|
| ಸಂ ವಾಂ...ಪಾರಯಂತಾ ॥ | ಈ ತ್ರೈಧಾತವೀಯೇಷ್ಟಿಯ ಪುರೋನುವಾಕ್ಯೆ. |

---

✦ಇಂದ್ರಾವಿಷ್ಣೂ=ಇಂದ್ರಾವಿಷ್ಣುದೇವತೆಗಳೇ! **ವಾಮ್**=ನಿಮ್ಮನ್ನು; **ಕರ್ಮಣಾ**=ಈ ಯಾಗರೂಪವಾದ ಕರ್ಮದಿಂದ; **ಅಸ್ಯ ಅಪಸಃ ಪಾರೇ**=ಈ ಯಜ್ಞದ ಸಮಾಪ್ತಿನಿಮಿತ್ತವಾಗಿ; **ಸಮ್ ಹಿನೋಮಿ**=ಚೆನ್ನಾಗಿ ತೃಪ್ತಿಪಡಿಸುತ್ತೇನೆ; **ಇಷಾ ಸಮ್** ಹಿನೋಮಿ=ಹವೀರೂಪವಾದ ಅನ್ನದಿಂದಲೂ ತೃಪ್ತಿಪಡಿಸುತ್ತೇನೆ. **ಯಜ್ಞಮ್ ಜುಷೇಥಾಮ್**=ಈ ಯಾಗಹವಿಸ್ಸುಗಳನ್ನು ಸೇವಿಸಿರಿ; **ದ್ರವಿಣಮ್ ಚ ಧತ್ತಮ್**=ನಮಗೆ ಧನವನ್ನೂ ಅನುಗ್ರಹಿಸಿರಿ; **ನಃ**=ನಮ್ಮನ್ನು; **ಅರಿಷ್ಟೈಃ**=ನಾಶ ರಹಿತವಾದ/ಕ್ಷೇಮವಾದ; **ಪಥಿಭಿಃ**=ಅನುಷ್ಠಾನಮಾರ್ಗಗಳಿಂದ; **ಪಾರಯಂತಾ**=ಯಾಗಸಮಾಪ್ತಿಯನ್ನು ಹೊಂದಿಸುವವರಾಗಿ[ಆಗಿರಿ]

---

ಇಂತಹ ಗುಣಸಂಪನ್ನನಾದ ಅಗ್ನಿಯನ್ನು ಪ್ರಾಚೀನಮುನಿಪ್ರೋಕ್ತವಾದ/ರಕ್ಷಕವಾದ ಮಂತ್ರರೂಪವಾದ ವಾಕ್ಕುಗಳಿಂದ ಸ್ತುತಿಸಿರಿ. ಆ ಅಗ್ನಿಯು ಯಜ್ಞಾರ್ಥವಾಗಿ ಜ್ವಲಿಸಲಿ.*

---

*ಭ.ಭಾ. ಮತವನ್ನೂ ಅನುಸರಿಸಿದೆ.

ಉಭಾ ಜಿಗ್ಯಥುರ್ನ ಪರಾ ಜಯೇಥೇ ನ ಪರಾ ಜಿಗ್ಯೇ
ಕತರಶ್ಚನೈನೋಃ । ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ
ತ್ರೇಧಾ ಸಹಸ್ರಂ ವಿ ತದೈರಯೇಥಾಮ್ ॥

---

ಉಭಾ । ಜಿಗ್ಯಥುಃ । ನ । ಪರೇತಿ । ಜಯೇಥೇ ಇತಿ । ನ । ಪರೇತಿ । ಜಿಗ್ಯೇ ॥ ಕತರಃ ।
ಚನ । ಏನೋಃ ॥ ಇಂದ್ರಃ । ಚ । ವಿಷ್ಣೋ ಇತಿ । ಯತ್ । ಅಪಸ್ಪೃಧೇಥಾಮ್ ।
ತ್ರೇಧಾ । ಸಹಸ್ರಮ್ । ವೀತಿ । ತತ್ । ಐರಯೇಥಾಮ್ ॥

---

| ಮಂತ್ರ | ವಿನಿಯೋಗ |
|---|---|
| ಉಭಾ...ಐರಯೇಥಾಮ್ ॥ | ಈ ತ್ರೈಧಾತವೀಯೇಷ್ಟಿಯ ಯಾಜ್ಯೆ. |

---

✦**ವಿಷ್ಣೋ**=ವಿಷ್ಣುವೇ! **ಇಂದ್ರಃ ಚ**=ಇಂದ್ರನು ಮತ್ತು ನೀನೂ; **ಉಭಾ**=ಇಬ್ಬರೂ; **ಜಿಗ್ಯಥುಃ**=ಯಾವಾಗಲೂ ಜಯಿಸುತ್ತೀರಿ; **ನ ಪರಾ ಜಯೇಥೇ**=ಯಾವಾಗಲೂ ಸೋಲುವುದಿಲ್ಲ; **ಏನೋಃ ಕತರಃ ಚನ**=ಈ ನಿಮ್ಮಿಬ್ಬರಲ್ಲಿ ಯಾವನೂ; **ನ ಪರಾ ಜಿಗ್ಯೇ**=ಸೋಲುವುದಿಲ್ಲ; **ಯತ್ ಅಪಸ್ಪೃಧೇಥಾಮ್**=ಯಾವಾಗ ಪರಸ್ಪರ ಸ್ಪರ್ಧಿಸುತ್ತೀರೋ; **ತತ್**=ಆಗ; **ಸಹಸ್ರಮ್**=ಸಹಸ್ರಸಂಖ್ಯೆಯ ಗೋವುಗಳನ್ನು/ ಸುವರ್ಣನಿಷ್ಕಗಳನ್ನು **ತ್ರೇಧಾ**=ಮೂರು ಭಾಗವಾಗಿ **ವಿ** [ಭಜ್ಯ]=ವಿಭಾಗಿಸಿಕೊಂಡು; **ಐರಯೇಥಾಮ್**=[ಅದನ್ನು]ಹೊಂದಿದಿರಿ.

---

ಹೇ! ಅಗ್ನಿದೇವನೇ! ನಿನ್ನ ಅನ್ನಗಳು ಮೂರು. ಸ್ಥಾನಗಳು ಮೂರು. ನಾಲಿಗೆಗಳು ಮೂರು. ಶರೀರಗಳು ಮೂರು. ಇವುಗಳಿಂದ ನಮ್ಮನ್ನು ಕಾಪಾಡು.

[ಒಗಟಿನಂತೆ ಇರುವ ಇಂತಹ ಮಂತ್ರಗಳಲ್ಲಿ ಸಮಂಜಸವಾಗಿ ತೋರುವ ಹಲವು ಅರ್ಥಗಳನ್ನು ಉಭಯಭಾಷ್ಯಕಾರರೂ ನೀಡಿರುತ್ತಾರೆ. ಅವುಗಳನ್ನು ಅನುಸರಿಸಿ ಪದಶಃ ಅರ್ಥದಲ್ಲಿ ವಿವರಿಸಲಾಗಿದೆ]

**ತ್ರೀಣ್ಯಾಯೂಗ್ಂಷಿ ತವ ಜಾತವೇದಸ್ತಿಸ್ರ ಆಜಾನೀರುಷಸ ಸ್ತೇ ಅಗ್ನೇ । ತಾಭಿರ್ದೇವಾನಾಮವೋ ಯಕ್ಷಿ ವಿದ್ವಾನಥಾ [..ನಥ(೪೫)ಭವ]ಭವ ಯಜಮಾನಾಯ ಶಂ ಯೋಃ ॥**

---

ತ್ರೀಣಿ । ಆಯೂಗ್ಂಷಿ । ತವ । ಜಾತವೇದ ಇತಿ ಜಾತ-ವೇದಃ । ತಿಸ್ರಃ । ಆಜಾನೀರಿತ್ಯಾ-ಜಾನೀಃ । ಉಷಸಃ । ತೇ । ಅಗ್ನೇ ॥ ತಾಭಿಃ । ದೇವಾನಾಮ್ । ಅವಃ । ಯಕ್ಷಿ । ವಿದ್ವಾನ್ । ಅಥ ।(೪೫)। ಭವ । ಯಜಮಾನಾಯ । ಶಂ । ಯೋಃ ॥

---

| ಮಂತ್ರ | ವಿನಿಯೋಗ |
|---|---|
| **ತ್ರೀಣ್ಯಾಯೂಗ್ಂಷಿ...ಶಂ ಯೋಃ ॥** | ಸ್ವಿಷ್ಟಕೃದ್ಯಾಗದ ಪುರೋನುವಾಕ್ಯಾರೂಪವಾದ ಸಂಯಾಜ್ಯೆ-ಸಾ.ಭಾಷ್ಯ.<br>ಇದೂ ಮುಂದಿನ ಎರಡು ಮಂತ್ರಗಳೂ ವೈಕಲ್ಪಿಕ ಯಾಜ್ಯಾನುವಾಕ್ಯೆ-*ಭ.ಭಾ.ಭಾ. |

---

✦**ಜಾತವೇದಃ ಅಗ್ನೇ**=ಓ! ಸರ್ವಜ್ಞನಾದ ಅಗ್ನಿದೇವನೇ! **ತವ ಆಯೂಗ್ಂಷಿ ತ್ರೀಣಿ**=ನಿನಗೆ ಆಯುರ್ವರ್ಧಕಗಳಾದ ಸೋಮ-ಸಾನ್ನಾಯ್ಯ-ಪುರೋಡಾಶರೂಪವಾದ ಹವಿಸ್ಸುಗಳು ಮೂರು ಇವೆ. **ತೇ ಉಷಸಃ ಆಜಾನೀಃ ತಿಸ್ರಃ**=ನಿನಗೆ ಉಷಃಕಾಲದಂತೆ ಪ್ರಕಾಶಿಸುವ ಜ್ವಾಲಾಯುಕ್ತವಾದ ಗಾರ್ಹಪತ್ಯ-ಆಹವನೀಯ-ದಕ್ಷಿಣಾಗ್ನಿರೂಪವಾದ ಆವಿರ್ಭಾವಗಳು ಮೂರು. **ವಿದ್ವಾನ್**=ಎಲ್ಲವನ್ನೂ ತಿಳಿದಿರುವ ನೀನು; **ತಾಭಿಃ**=ಆ ತ್ರೇತಾಗ್ನಿಗಳಿಂದ; **ದೇವಾನಾಮ್**=ದೇವತೆಗಳಿಗೆ ಸಂಬಂಧಿಸಿದ; **ಅವಃ**=ರಕ್ಷಕರೂಪವಾದ ಹವಿಸ್ಸುಗಳನ್ನು; **ಯಕ್ಷಿ**=ಸೇವಿಸು; **ಅಥ**=ಬಳಿಕ; **ಯಜಮಾನಾಯ**=ಯಜಮಾನನಿಗೆ; **ಶಮ್** ಭವ=ಸುಖಕರನಾಗು; **ಯೋಃ** ಭವ=ದುಃಖಪರಿಹಾರಕನಾಗಿ ಆಗು.

---

*ಈ ಮುಂದಿನ ಯಾಜ್ಯಾ-ಪುರೋನುವಾಕ್ಯೆಗಳಲ್ಲಿ ಯಜಮಾನನ ಕಾಮನೆಗಳಿಗೆ ಸಂಬಂಧಿಸಿದಂತೆ ಯಾಜ್ಯಾ-ಪುರೋನುವಾಕ್ಯೆಗಳನ್ನು ಆರಿಸಿಕೊಳ್ಳಬಹುದು. ಅಥವಾ ತಕ್ಕ ಅಧ್ಯಾಹಾರದಿಂದ ಅರ್ಥವನ್ನು ಪೂರ್ಣಗೊಳಿಸಿಕೊಳ್ಳಬಹುದು.

**ಅಗ್ನಿಸ್ತ್ರೀಣಿ ತ್ರಿಧಾತೂನ್ಯಾಕ್ಷೇತಿ ವಿದಥಾ ಕವಿಃ । ಸ ತ್ರೀಗ್‌ಂರೇಕಾದಶಾಗ್‌ಂ ಇಹ ॥**

ಅಗ್ನಿಃ । ತ್ರೀಣಿ। ತ್ರಿಧಾತೂನೀತಿ ತ್ರಿ-ಧಾತೂನಿ । ಏತಿ । ಕ್ಷೇತಿ । ವಿದಥಾ । ಕವಿಃ ॥

ಸಃ । ತ್ರೀನ್ । ಏಕಾದಶಾನ್ । ಇಹ ॥

| ಮಂತ್ರ | ವಿನಿಯೋಗ |
|---|---|
| ಅಗ್ನಿಸ್ತ್ರೀಣಿ...ಇಹ ॥ | ತ್ರೈಧಾತವೀಯೇಷ್ಟಿಯ ಸ್ವಿಷ್ಟಕೃದ್ಯಾಗದ ಸಂಯಾಜ್ಯಾಸಂಜ್ಞಕವಾದ ಯಾಜ್ಯಾನುವಾಕ್ಯೆ-ಸಾ.ಭಾ.<br>ತ್ರೈಧಾತವೀಯೇಷ್ಟಿಯ ವಿಕಲ್ಪಿತ ಯಾಜ್ಯಾನುವಾಕ್ಯೆ-ಭ.ಭಾ.ಭಾ |

✦**ಕವಿಃ**=ವಿದ್ವಾಂಸನಾದ; **ಅಗ್ನಿಃ**=ಅಗ್ನಿದೇವನು; **ವಿದಥಾ**=ಈ ಯಾಗದಲ್ಲಿ; **ತ್ರೀಣಿ ತ್ರಿಧಾತೂನಿ**=ಮೂರು ವಿಧವಾದ ಮೂರು ಪುರೋಡಾಶಗಳನ್ನು/ಮೂರು ಲೋಕಗಳ ಪ್ರಾಪ್ತಿಗೆ ಕಾರಣವಾದ ಮೂರು ಹವಿಸ್ಸುಗಳನ್ನು; **ಆ ಕ್ಷೇತಿ**=ಸರ್ವ ಪ್ರಕಾರಗಳಿಂದ ಹೊಂದುತ್ತಾನೆ; **ಸಃ**=ಆತನು; **ಇಹ**=ಈ ಯಾಗದಲ್ಲಿ; **ತ್ರೀನ್ ಏಕಾದಶಾನ್**= ಹನ್ನೊಂದನೆಯವರಾದ ಮೂವರನ್ನು* [ಹನ್ನೊಂದು ಸಂಖ್ಯೆಯ ಮೂರು ಗಣಗಳನ್ನು]/ದ್ಯುಲೋಕ-ಅಂತರಿಕ್ಷಲೋಕ-ಭೂಲೋಕಗಳಲ್ಲಿರುವ ಮೂರು ಗಣಗಳನ್ನು [ಸಂತೋಷಪಡಿಸಲಿ]

**ಇಂದ್ರಾವಿಷ್ಣುಗಳೇ! ನಿಮ್ಮನ್ನು ಯಾಗದಿಂದಲೂ, ಹವಿಸ್ಸಿನಿಂದಲೂ ತೃಪ್ತಿಪಡಿಸುತ್ತೇನೆ. ನೀವು ತೃಪ್ತರಾಗಿ ನಿರ್ವಿಘ್ನವಾಗಿ ಯಜ್ಞವು ಮುಗಿಯುವಂತೆ ಮಾಡಿರಿ. ನಮಗೆ ಧನವನ್ನು ಅನುಗ್ರಹಿಸಿರಿ.**

*ಹನ್ನೊಂದು ಸಂಖ್ಯೆಯನ್ನು ಪೂರ್ತಿಗೊಳಿಸುವ ಮೂವರನ್ನು ಎಂದರೆ ಹತ್ತು ದೇವತೆಗಳ ಮೂರು ಗಣಗಳನ್ನು ಹೊಂದಿರುವ ಮೂವರು ಎಂದು ಅರ್ಥ. ಮೂರು ಏಕಾದಶರನ್ನು ಎಂದರೆ [10+1,10+1,10+1] ಹೀಗೆ ಮೂವತ್ತಮೂರು ದೇವತೆಗಳು ಎಂದರ್ಥ. **'ತ್ರಿಗ್‌ಂಶತ್ತ್ರಯಶ್ಚ ಗಣಿನಃ'** ಎಂದು ಶ್ರುತಿಯಲ್ಲಿ-ಮೂವತ್ತು ಎಂದು ಪರಿಗಣಿಸಿ, ಬಳಿಕ ಅದನ್ನೇ ಹತ್ತರ ಮೂರು ಗಣಗಳನ್ನಾಗಿ ಮಾಡಿ, ಅವುಗಳನ್ನು ಹೊಂದಿರುವ ಮೂವರು **'ಗಣಿ'**ಗಳು. [**'ಗಣಾಃ ಯೇಷಾಂ ಸಂತಿ ತೇ ಗಣಿನಃ'**] ಎಂದು-ಹೇಳಿದೆ.

# ಯಕ್ಷಚ್ಚ ಪಿಪ್ರಯಚ್ಚ ನೋ ವಿಪ್ರೋ ದೂತಃ ಪರಿಷ್ಕೃತಃ ।
# ನಭಂತಾಮನ್ಯಕೇ ಸಮೇ ॥

ಯಕ್ಷತ್ । ಚ । ಪಿಪ್ರಯತ್ । ಚ । ನಃ । ವಿಪ್ರಃ । ದೂತಃ । ಪರಿಷ್ಕೃತಃ ॥ ನಭಂತಾಮ್ । ಅನ್ಯಕೇ । ಸಮೇ ।

| ಮಂತ್ರ | ವಿನಿಯೋಗ |
|---|---|
| ಯಕ್ಷಚ್ಚ...ಸಮೇ ॥ | ಸ್ವಿಷ್ಟಕೃದ್ಯಾಗದ ವೈಕಲ್ಪಿಕಯಾಜ್ಯಾರೂಪವಾದ ಸಂಯಾಜ್ಯೆ–ಸಾ.ಭಾ<br>ತ್ರೈಧಾತವೀಯೇಷ್ಟಿಯ ವೈಕಲ್ಪಿಕಯಾಜ್ಯೆ–ಭ.ಭಾ.ಭಾ. |

✦ವಿಪ್ರಃ=ಬ್ರಾಹ್ಮಣಾಭಿಮಾನಿಯಾದ/ಮೇಧಾವಿಯಾದ; ದೂತಃ=ದೇವತೆಗಳ ದೂತನೆಂದು ಪ್ರಸಿದ್ಧನಾದ; ಪರಿಷ್ಕೃತಃ=ಬ್ರಾಹ್ಮಣಲಕ್ಷಣಗಳಿಂದ ಅಥವಾ ದೂತಲಕ್ಷಣಗಳಿಂದ ಅಲಂಕೃತನಾದ [ಅಗ್ನಿದೇವನು]; ಯಕ್ಷತ್=ದೇವತೆಗಳ ಯಾಗಭಾಗವನ್ನು ಸಮರ್ಪಿಸಲಿ; ಪಿಪ್ರಯತ್ ಚ=ದೇವತೆಗಳನ್ನು ತೃಪ್ತಿಪಡಿಸಲಿ; [ಫಲವು ದೊರಕುವಂತೆ ಮಾಡಿ] ನಮ್ಮನ್ನು ಸಂತೋಷಪಡಿಸಲಿ. ನಃ=ನಮ್ಮ; ಅನ್ಯಕೇ ಸಮೇ=ಬೇರೆಯ ಎಲ್ಲ ಕ್ಷುದ್ರಶತ್ರುಗಳೂ; ನಭಂತಾಮ್=ನಾಶ ಹೊಂದಲಿ.

ವಿಷ್ಣುವಿನ ಸಾಹಾಯ್ಯದಿಂದ ಇಂದ್ರನು ವೃತ್ರನನ್ನು ಜಯಿಸುತ್ತಾನೆಂದು ತ್ರೈಧಾತವೀಯೇಷ್ಟಿಯ ಬ್ರಾಹ್ಮಣದಲ್ಲಿದೆ. ಈ ಯಾಗದಲ್ಲಿ ಮೂರು ಚತುಷ್ಕಪಾಲಗಳನ್ನು ಹವಿಸ್ಸನ್ನಾಗಿ ಹೇಳಿರುತ್ತಾರೆ. ವಿಷ್ಣುವಿನ ಬೆಂಬಲದಿಂದ ಇಂದ್ರನು ಮೂರು ಬಾರಿ ವಜ್ರವನ್ನು ಪ್ರಯೋಗಿಸುತ್ತಾನೆ.

ಇವೆರಡರಿಂದಲೂ ತ್ರಿಧಾತುವುಳ್ಳ ತ್ರೈಧಾತವೀಯೇಷ್ಟಿಯೆಂದು ಅನ್ವರ್ಥನಾಮವಾಗಿದೆ. ಯಾಗದೇವತೆಗಳಾದ ಇಂದ್ರಾವಿಷ್ಣುಗಳು ಜಯಶೀಲರು. ಅವರು ಹವಿಸ್ಸನ್ನೂ ದಕ್ಷಿಣೆಯನ್ನೂ ವಿಭಾಗಿಸಿಕೊಂಡು ಸೇವಿಸಲಿ. ನಮಗೆ ಧನವನ್ನು ಅನುಗ್ರಹಿಸಲಿ.

ಇಂದ್ರಾವಿಷ್ಣೂ ದೃಗ್ಂಹಿತಾಶ್ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಮ್ । ಶತಂ ವರ್ಚಿನಸ್ಸಹಸ್ರಂ ಚ ಸಾಕಗ್ಂ ಹಥೋ ಅಪ್ರತ್ಯಸುರಸ್ಯ ವೀರಾನ್ ॥

---

ಇಂದ್ರಾವಿಷ್ಣೂ ಇತೀಂದ್ರಾ-ವಿಷ್ಣೂ । ದೃಗ್ಂಹಿತಾಃ । ಶಂಬರಸ್ಯ । ನವ । ಪುರಃ । ನವತಿಮ್ । ಚ । ಶ್ನಥಿಷ್ಟಮ್ ॥ ಶತಮ್ । ವರ್ಚಿನಃ । ಸಹಸ್ರಮ್ । ಚ । ಸಾಕಮ್ । ಹಥಃ । ಅಪ್ರತಿ । ಅಸುರಸ್ಯ । ವೀರಾನ್ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಾವಿಷ್ಣೂ..ವೀರಾನ್ ॥ | ತ್ರೈಧಾತವೀಯೇಷ್ಟಿಯ ವೈಕಲ್ಪಿಕಪುರೋನುವಾಕ್ಯೆ. |

---

✦ಇಂದ್ರಾವಿಷ್ಣೂ=ಹೇ! ಇಂದ್ರಾವಿಷ್ಣುದೇವತೆಗಳೇ! [ನೀವು] **ಶಂಬರಸ್ಯ**=ಶಂಬರಾಸುರನ; **ನವತಿಂ ನವ ಚ**=ತೊಂಬತ್ತೊಂಬತ್ತು; **ದೃಗ್ಂಹಿತಾಃ**=ದೃಢವಾದ; **ಪುರಃ**=ಪಟ್ಟಣಗಳನ್ನೂ; **ಶ್ನಥಿಷ್ಟಮ್**=ನಾಶಪಡಿಸಿದಿರಿ; **ಸಾಕಮ್**=ಜೊತೆಯಲ್ಲಿಯೇ; **ವರ್ಚಿನಃ**=ಪ್ರಕಾಶಮಾನರಾದ;[ಪ್ರಸಿದ್ಧರಾದ] **ಶತಮ್ ಸಹಸ್ರಮ್**=ನೂರು-ಸಾವಿರ ಸಂಖ್ಯೆಯ; **ಅಸುರಸ್ಯ ವೀರಾನ್ ಚ**=ಶಂಬರಾಸುರನ ಸಂಬಂಧಿಗಳಾದ ಮಂತ್ರಿ-ಸೈನ್ಯಾಧಿಕಾರಿ ಮೊದಲಾದ ವೀರರನ್ನೂ; **ಅಪ್ರತಿ**=ಪಕ್ಷರಾಹಿತ್ಯವಿಲ್ಲದೆ/ಭೇದವೆಣಿಸದೆ; **ಹಥಃ**=ಕೊಂದುಹಾಕಿದಿರಿ.

---

ಹೇ! ಅಗ್ನಿಯೇ! ನಿನ್ನ ಹವಿಸ್ಸುಗಳು ಮೂರು. ನಿನ್ನ ಆವಿರ್ಭಾವವೂ ಮೂರು ಕಡೆ. ನೀನು ನಾವೀಯುವ ಹವಿಸ್ಸನ್ನು ಸ್ವೀಕರಿಸಿ, ಆಯಾ ದೇವತೆಗಳಿಗೆ ಸೇರುವಂತೆ ಮಾಡು. ಯಜಮಾನನಿಗೆ ಸುಖವನ್ನು ಕೊಡು. ದುಃಖಗಳನ್ನು ಪರಿಹರಿಸು.

**'ತ್ರಯಃ ಪುರೋಡಾಶಾ ಭವಂತಿ' 'ಉತ್ತರಉತ್ತರೋ ಜ್ಯಾಯಾನ್ ಭವತಿ'** ಎಂಬಂತೆ ಮೂರು ವಿಧವಾದ ಮೂರು ಪುರೋಡಾಶಗಳನ್ನು ಅಗ್ನಿಯು ಹೊಂದುವನು. ಅದನ್ನು ದೇವತೆಗಳಿಗೆ ಸೇರಿಸಿ ಅವರನ್ನು ಸಂತೋಷಪಡಿಸಲಿ.

ಉತ ಮಾತಾ ಮಹಿಷಮನ್ವವೇನದಮೀ ತ್ವಾ ಜಹತಿ ಪುತ್ರ ದೇವಾಃ । ಅಥಾಬ್ರವೀದ್ವೃತ್ರಮಿಂದ್ರೋ ಹನಿಷ್ಯನ್ಸಖೇ ವಿಷ್ಣೋ ವಿತರಂ ವಿಕ್ರಮಸ್ವ ॥[೪೬–11]

[ಇಷ್ಟಾಽಥ ತ್ವಾ ತ್ರಯೋದಶ ಚ ॥]

---

ಉತ । ಮಾತಾ । ಮಹಿಷಮ್ । ಅನ್ವಿತಿ । ಅವೇನತ್ । ಅಮೀ ಇತಿ । ತ್ವಾ । ಜಹತಿ । ಪುತ್ರ । ದೇವಾಃ ॥ ಅಥ । ಅಬ್ರವೀತ್ । ವೃತ್ರಮ್ । ಇಂದ್ರಃ । ಹನಿಷ್ಯನ್ । ಸಖೇ । ವಿಷ್ಣೋ ಇತಿ । ವಿತರಮಿತಿ ವಿ–ತರಮ್ । ವೀತಿ । ಕ್ರಮಸ್ವ ॥

---

| ಮಂತ್ರ | ವಿನಿಯೋಗ |
|---|---|
| ಉತ ಮಾತಾ...ಕ್ರಮಸ್ವ ॥ | ತ್ರೈಧಾತವೀಯೇಷ್ಟಿಯ ವೈಕಲ್ಪಿಕಯಾಜ್ಯೆ. |

---

✦**ಉತ**=ಮತ್ತು; **ಮಾತಾ**=ಇಂದ್ರಮಾತೆಯಾದ ಅದಿತಿಯು; **ಮಹಿಷಮ್**=ಮಹಾಂತನಾದ ಮಗನಾದ ಇಂದ್ರನನ್ನು ಕುರಿತು; **ಅನ್ವವೇನತ್**=ಅನುಕ್ರಮವಾಗಿ ಪ್ರೋತ್ಸಾಹಿಸಿದಳು/ತಿಳಿಯಹೇಳಿದಳು [ಏನೆಂದರೆ] **ಪುತ್ರ**=ಮಗನೇ! **ತ್ವಾ**=[ಶತ್ರು ಜಯಕ್ಕೆ ಯತ್ನಿಸದೆ ಸುಮ್ಮನಿರುವ] ನಿನ್ನನ್ನು; **ಅಮೀ ದೇವಾಃ**=ಈ ದೇವತೆಗಳು; **ಜಹತಿ**=ತ್ಯಾಗ ಮಾಡಿಬಿಡುತ್ತಾರೆ [ಎಂದಳು] **ಅಥ**=ಬಳಿಕ; [ಉತ್ತೇಜಿತನಾದ] **ಇಂದ್ರಃ**=ಇಂದ್ರನು; **ವೃತ್ರಮ್**=ವೃತ್ರನನ್ನು; **ಹನಿಷ್ಯನ್**=ಕೊಲ್ಲುವವನಾಗಿ; **ಸಖೇ ವಿಷ್ಣೋ**=ಸ್ನೇಹಿತನಾದ ವಿಷ್ಣುವೇ! **ವಿತರಮ್**=ಬಹುಪ್ರಕಾರವಾಗಿ; **ವಿಕ್ರಮಸ್ವ**=ಪರಾಕ್ರಮವನ್ನು ತೋರಿಸು [ಇತಿ=ಎಂಬುದಾಗಿ] **ಅಬ್ರವೀತ್**=[ವಿಷ್ಣುವನ್ನು ಕುರಿತು] ಹೇಳಿದನು. [ಬಳಿಕ ಇಂದ್ರನು ಜಯಿಸಿದನು]*

---

***ತ್ವಷ್ಟಾ ಹತಪುತ್ರಃ [ತ್ರೈ.ಸಂ.2.4.12]** ಎಂಬ ಅನುವಾಕದಲ್ಲಿ ಇಂದ್ರನ ಜಯದ ವೃತ್ತಾಂತವಿದೆ.

ಈ ಇಷ್ಟಿಯಲ್ಲಿ ಮೂರು ಸಂಖ್ಯೆಯ ಪ್ರಾಶಸ್ತ್ಯವನ್ನು ಹೇಳಲಾಗಿದೆ.

**'ಅಗ್ನಿರ್ದೇವಾನಾಂ ದೂತ ಆಸೀತ್'** ಎಂಬ ಶ್ರುತಿಯಂತೆ ಅಗ್ನಿದೇವನು ದೇವತೆಗಳ ದೂತನು. ಅವನು ಮೇಧಾವಿಯೂ ಹೌದು. ಅವನು ನಮ್ಮ ಯಾಗವು ಸಂಪೂರ್ಣವಾಗುವಂತೆ ಮಾಡಲಿ. ನಮ್ಮ ಎಲ್ಲ ಇತರ ಕ್ಷುದ್ರಶತ್ರುಗಳೂ ನಾಶ ಹೊಂದಲಿ. ಯಜ್ಞಫಲವು ನಮಗೆ ದೊರೆಯುವಂತೆ ಅಗ್ನಿದೇವನು ಮಾಡಲಿ.

ಎಲೈ! ಇಂದ್ರಾವಿಷ್ಣುದೇವತೆಗಳೇ! ನೀವು ಶಂಬರಾಸುರನ ತೊಂಬತ್ತೊಂಬತ್ತು ನಗರಗಳನ್ನು ಧ್ವಂಸ ಮಾಡಿ, ಬಹುಸಂಖ್ಯೆಯಲ್ಲಿದ್ದ ಆ ಅಸುರನ ಮಂತ್ರಿ ಸೇನಾಪತಿಗಳನ್ನು ನಾಶ ಮಾಡಿರುವಿರಿ. ನೀವು ನಮ್ಮ ಎಲ್ಲ ಇಷ್ಟಾರ್ಥಗಳನ್ನೂ ಕರುಣಿಸಿರಿ. **'ಸರ್ವೇಭ್ಯೋ ಹಿ ಕಾಮೇಭ್ಯೋ ಯಜ್ಞಃ ಪ್ರಯುಜ್ಯತೇ'** ಎಂದು ಶ್ರುತಿಯಲ್ಲಿ ತ್ರೈಧಾತವೀಯೇಷ್ಟಿಯನ್ನು ಸರ್ವಕಾಮಪ್ರದವೆಂದು ಹೇಳಿದೆ.

ಇಂದ್ರನ ಮಾತೆಯಾದ ಅದಿತಿಯಿಂದ ಪ್ರೋತ್ಸಾಹಿಸಲ್ಪಟ್ಟ ಇಂದ್ರನು ವಿಷ್ಣುವನ್ನು ಪ್ರೋತ್ಸಾಹಿಸಿ, ಅವನ ನೆರವಿನಿಂದ ವೃತ್ರನನ್ನು ಜಯಿಸಿದನು. ಇಂತಹ ಪ್ರಭಾವಶಾಲಿಗಳಾದ ಇಂದ್ರಾವಿಷ್ಣುಗಳೇ! ನೀವು ನಮ್ಮ ಇಷ್ಟಾರ್ಥವನ್ನು ಕರುಣಿಸಿರಿ.

---

**ಯೋ ವೈ ಪವಮಾನಾನಾಂ ತ್ರೀಣಿ ಪರಿಭೂಸ್ಸ್ವಸ್ಸ್ವಸ್ತಿರ್ಭಕ್ಷೇಹಿ ಮಹೀನಾಂ ಪಯೋಽಸಿ ದೇವ ಸವಿತರೇತತ್ತೇ ಶ್ಯೇನಾಯ ಯದ್ವೈ ಹೋತೋ ಪಯಾಮಗೃಹೀತೋಽಸಿ ವಾಕ್ಷಸತ್ಪ್ರಸೋ ಅಗ್ನ ಏಕಾದಶ ॥ ೧೧ ॥**

**ಯೋ ವೈ ಸ್ಫಃಸ್ಸ್ವಸ್ತಿಸ್ಸ್ವಧಾಯ್ಯೈ ನಮಃ ಪ್ರಮುಂಚ ತಿಷ್ಠತೀವ ಷಟ್ಚತ್ವಾರಿಗ್ಂಶತ್ ॥ ೪೬ ॥**

**ಯೋ ವೈ ಪವಮಾನಾನಾಂ ವಿಕ್ರಮಸ್ವ**

**ಹರಿಃ ಓಮ್**

**ಶ್ರೀ ಕೃಷ್ಣಾರ್ಪಣಮಸ್ತು**

**ಇತಿ ತೃತೀಯಕಾಂಡೇ ದ್ವಿತೀಯಃ ಪ್ರಶ್ನಃ**

# ವಿನಿಯೋಗಸಂಗ್ರಹ

1-2ಪ್ರ ಸೋ ತ್ರ್ಯೈಧಾತವೀಯೇಷ್ಟೌ ದ್ವೇ ಧಾಯ್ಯೇ 3ಅಗ್ನ ಇತ್ಯಸೌ ।
ತತ್ರೈವ ಪರಿಧಾನೀಯಾ ಹ್ಯನುವಾಕ್ಯಾ 4ಸಮಿತ್ಯಸೌ ॥
5ಉಭೇತಿ ಯಾಜ್ಯಾ 6-8ತ್ರೀಣೀತಿ ಸಂಯಾಜ್ಯಾಸ್ತ್ರಿಸ್ರ ಈರಿತಾಃ ।
9ಇಂದ್ರಾನುವಾಕ್ಯೋತ 10ಯಾಜ್ಯಾ ದಶ ಮಂತ್ರಾ ಇಹೇರಿತಾಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–10

---

## ಅನುವಾಕದ ವಿಶೇಷ ವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| ೧) ಪ್ರ ಸೋ ಅಗ್ನೇ...ಮಾವಿಥ ॥ | ಕಕುಬುಷ್ಣಿಕ್ |
| ೨) ಪ್ರ ಹೋತ್ರೇ...ವೇಧಸೇ ॥ | ಪರೋಷ್ಣಿಕ್ |
| ೩) ಅಗ್ನೇ ತ್ರೀ ತೇ...ಅಪ್ರಯುಚ್ಛನ್ ॥ | ತ್ರಿಷ್ಟುಪ್ |
| ೪) ಸಂ ವಾಂ...ಪಾರಯಂತಾ ॥ | ತ್ರಿಷ್ಟುಪ್ |
| ೫) ಉಭಾ ಜಿಗ್ಯಥುಃ...ರಯೇಥಾಮ್ ॥ | ತ್ರಿಷ್ಟುಪ್ |
| ೬) ತ್ರೀಣ್ಯಾಯೂಗ್ಂಷಿ...ಶಂ ಯೋಃ ॥ | ತ್ರಿಷ್ಟುಪ್ |
| ೭) ಅಗ್ನಿಸ್ತ್ರೀಣಿ...ಇಹ ॥ | ಗಾಯತ್ರೀ |

೮) ಯಕ್ಷಚ್ಚ...ಸಮೇ ॥ ಗಾಯತ್ರೀ

೯) ಇಂದ್ರಾವಿಷ್ಣೂ...ವೀರಾನ್ ॥ ತ್ರಿಷ್ಟುಪ್

೧೦) ಉತ ಮಾತಾ...ವಿಕ್ರಮಸ್ವ ॥ ತ್ರಿಷ್ಟುಪ್

ಖ❀ಡಖ❀ಡ

## ತೃತೀಯಕಾಂಡಃ ತೃತೀಯಃ ಪ್ರಶ್ನಃ

# ಪ್ರಥಮೋಽನುವಾಕಃ

ಹರಿಃ ಓಮ್

**ಅಗ್ನೇ ತೇಜಸ್ವಿನ್ತೇಜಸ್ವೀ ತ್ವಂ ದೇವೇಷು ಭೂಯಾ**

---

ಅಗ್ನೇ । ತೇಜಸ್ವಿನ್ನ್ । ತೇಜಸ್ವೀ । ತ್ವಮ್ । ದೇವೇಷು । ಭೂಯಾಃ ।

---

ಎರಡನೆಯ ಪ್ರಶ್ನದಲ್ಲಿ ಪ್ರತಿನಿರ್ಗ್ರಾಹ್ಯಪರ್ಯಂತವಾದ ಮಂತ್ರಗಳೂ ಅವುಗಳ ವಿಧಿಗಳೂ ಹೇಳಲ್ಪಟ್ಟವು. ಈ ಮೂರನೆಯ ಪ್ರಶ್ನೆಯಲ್ಲಿ ಅತಿಗ್ರಾಹ್ಯಾದಿ ಮಂತ್ರಗಳೂ, ವೈಕೃತಮಂತ್ರಗಳೂ ವಿಧಿಗಳೂ ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಅಗ್ನೇ ತೇಜಸ್ವಿನ್...ಜುಹೋಮಿ ॥ | ಆಗ್ನೇಯಅತಿಗ್ರಾಹ್ಯಹೋಮವನ್ನು ಮಾಡಲು– ಸಾ.ಭಾ<br>*ಅತಿಗ್ರಾಹ್ಯ ಅವೇಕ್ಷಣ ಮತ್ತು ಹೋಮವನ್ನು ಮಾಡಲು– ಭ.ಭಾ.ಭಾ |

---

✦ಅಗ್ನೇ ತೇಜಸ್ವಿನ್=ಅತಿಶಯಕಾಂತಿಯುಕ್ತನಾದ ಅಗ್ನಿದೇವನೇ! ತ್ವಮ್=ನೀನು; ದೇವೇಷು=ದೇವತೆಗಳಲ್ಲಿ; ತೇಜಸ್ವೀ ಭೂಯಾಃ=ಅಧಿಕ ಕಾಂತಿಮಂತನಾಗಿರು /ಕಾಂತಿಮಂತನಾಗಿ ಯಾವಾಗಲೂ ಇರು.

---

*ಅಗ್ನೇ ತೇಜಸ್ವಿನ್....ಕುರು –ಅವೇಕ್ಷಣೆಗಾಗಿ ॥ ದೀಕ್ಷಾಯೈ...ಜುಹೋಮಿ– ಹೋಮಕ್ಕಾಗಿ
ಹೀಗೆಯೇ ೨)ಇಂದ್ರೌಜಸ್ವಿನ್..ಕುರು । ಬ್ರಹ್ಮಣಶ್ಚ ತ್ವಾ...ಜುಹೋಮಿ ॥
೩)ಸೂರ್ಯ ಭ್ರಾಜಸ್ವಿನ್...ಕುರು ॥ ವಾಯೋಶ್ಚ ತ್ವಾ...ಜುಹೋಮಿ ॥
ಈ ಮಂತ್ರಗಳಿಗೂ ಅವೇಕ್ಷಣ–ಹೋಮಗಳಿಗಾಗಿ ವಿನಿಯೋಗ ಎಂದು ಭಟ್ಟಭಾಸ್ಕರ ಮಿಶ್ರರ ಮತ.

## ತೇಜಸ್ವಂತಂ ಮಾಮಾಯುಷ್ಮಂತಂ ವರ್ಚಸ್ವಂತಂ ಮನುಷ್ಯೇಷು ಕುರು ದೀಕ್ಷಾಯೈ ಚ ತ್ವಾ ತಪಸಶ್ಚ ತೇಜಸೇ ಜುಹೋಮಿ

---

ತೇಜಸ್ವಂತಮ್ । ಮಾಮ್ । ಆಯುಷ್ಮಂತಮ್ । ವರ್ಚಸ್ವಂತಮ್ । ಮನುಷ್ಯೇಷು । ಕುರು । ದೀಕ್ಷಾಯೈ । ಚ । ತ್ವಾ । ತಪಸಃ । ಚ । ತೇಜಸೇ । ಜುಹೋಮಿ ।

---

ಮಾಮ್=ನನ್ನನ್ನು; ಮನುಷ್ಯೇಷು=ಮನುಷ್ಯರಲ್ಲಿ; ತೇಜಸ್ವಂತಮ್=ಅಧಿಕ ತೇಜೋಯುಕ್ತನನ್ನಾಗಿಯೂ; ಆಯುಷ್ಮಂತಮ್=ದೀರ್ಘಾಯುಷ್ಮಂತನನ್ನಾಗಿಯೂ/ ಹೆಚ್ಚಿನ ಅನ್ನವಂತನನ್ನಾಗಿಯೂ; ವರ್ಚಸ್ವಂತಮ್=ಅಧಿಕಬಲವಂತನನ್ನಾಗಿಯೂ; ಕುರು=ಮಾಡು; ದೀಕ್ಷಾಯೈ ಚ=ಯಾಗದೀಕ್ಷೆಯಿಂದಲೂ; ತಪಸಃ ಚ=ಉಪವಾಸಾದಿ ನಿಯಮಾನುಷ್ಠಾನದಿಂದಲೂ [ಉಂಟಾದ] ತೇಜಸೇ= ತೇಜಸ್ಸಿಗಾಗಿ; ತ್ವಾ=ನಿನ್ನನ್ನು;[ಅತಿಗ್ರಾಹ್ಯವನ್ನು] ಜುಹೋಮಿ= ಹೋಮ ಮಾಡುತ್ತೇನೆ.

---

ಅತಿಗ್ರಾಹ್ಯಹೋಮದ ಮಂತ್ರವನ್ನು ಈ ಪ್ರಪಾಠಕದ ಆರಂಭದಲ್ಲಿ ಹೇಳಲಾಗಿದೆ. ಆಗ್ನೇಯ, ಐಂದ್ರ, ಸೌರ್ಯಗಳೆಂಬ ಮೂರು ಅತಿಗ್ರಾಹ್ಯಗಳಲ್ಲಿ ಆಗ್ನೇಯ ಅತಿಗ್ರಾಹ್ಯವು ಮೊದಲನೆಯದು. ಆಗ್ನೇಯ ಅತಿಗ್ರಾಹ್ಯವನ್ನು ಅಗ್ನಿ ರೂಪವಾಗಿ ಪ್ರಾರ್ಥಿಸಲಾಗಿದೆ.

ಪ್ರತಿಪ್ರಸ್ಥಾತನು ಆಗ್ನೇಯ ಅತಿಗ್ರಾಹ್ಯವನ್ನು ತೆಗೆದುಕೊಂಡು ಹೋಮ ಮಾಡಬೇಕು.

ಹೇ! ಅಗ್ನಿಯೇ! ನೀನು ತೇಜಸ್ವಿಯು. ನನ್ನನ್ನು ತೇಜಸ್ವಿಯನ್ನಾಗಿ ಮಾಡು. ಈ ತೇಜಃಪ್ರಾಪ್ತಿಗಾಗಿ ಹೋಮ ಮಾಡುತ್ತೇನೆ.

ಹೇ! ಅಗ್ನಿಯೇ! ನಿನ್ನ ಸಂಬಂಧದ ಮಹಿಮೆಯಿಂದ ತೇಜಸ್ಸು ನನ್ನನ್ನು ಬಿಡದಿರಲಿ. ನಾನು ತೇಜಸ್ಸನ್ನು ಬಿಡದಂತಾಗಲಿ.

**ತೇಜೋವಿದಸಿ ತೇಜೋ ಮಾ ಮಾ ಹಾಸೀನ್ಮಾಽಹಂ**

**ತೇಜೋ ಹಾಸಿಷಂ ಮಾ ಮಾಂ ತೇಜೋಹಾಸೀ**

**-ದಿಂದ್ರೌಜಸ್ವಿ ನ್ನೋಜಸ್ವೀ ತ್ವಂ ದೇವೇಷು ಭೂಯಾ**

---

ತೇಜೋವಿದಿತಿ ತೇಜಃ-ವಿತ್ । ಅಸಿ । ತೇಜಃ । ಮಾ । ಮಾ । ಹಾಸೀತ್ । ಮಾ ।

ಅಹಮ್ । ತೇಜಃ । ಹಾಸಿಷಮ್ । ಮಾ । ಮಾಮ್ । ತೇಜಃ । ಹಾಸೀತ್ ।

ಇಂದ್ರ । ಓಜಸ್ವಿನ್ನ್ । ಓಜಸ್ವೀ । ತ್ವಮ್ । ದೇವೇಷು । ಭೂಯಾಃ ।

---

| ಮಂತ್ರ | ವಿನಿಯೋಗ |
| --- | --- |
| ತೇಜೋವಿದಸಿ...ಹಾಸೀತ್ ॥ | *ಅನುಮಂತ್ರಣವನ್ನು ಮಾಡಲು |
| ಇಂದ್ರೌಜಸ್ವಿನ್...ಜುಹೋಮಿ ॥ | ನೇಷ್ಟನು ಐಂದ್ರಾತಿಗ್ರಾಹ್ಯವನ್ನು ಹೋಮ ಮಾಡಲು |

---

✦[ಅಗ್ನಿಯೇ!]ತೇಜೋವಿತ್ ಅಸಿ=ತೇಜಸ್ಸಿಗೆ ಸಂಬಂಧಿಸಿರುವುದೆಲ್ಲವನ್ನೂ ನೀನು ತಿಳಿದವನಾಗಿರುವೆ; ತೇಜಃ=ತೇಜಸ್ಸು; ಮಾ ಮಾ ಹಾಸೀತ್=ನನ್ನನ್ನು ಬಿಟ್ಟು ಹೋಗದಿರಲಿ; ಅಹಮ್=ನಾನು; ತೇಜಃ=ತೇಜಸ್ಸನ್ನು; ಮಾ ಹಾಸಿಷಮ್= ತ್ಯಾಗ ಮಾಡದಿರುವಂತಾಗಲಿ; ತೇಜಃ=ತೇಜಸ್ಸು; ಮಾಮ್=ನನ್ನನ್ನು; ಮಾ ಹಾಸೀತ್= ಬಿಡದಿರುವಂತಾಗಲಿ. ✦ಓಜಸ್ವಿನ್ ಇಂದ್ರ=ಬಲವಂತನಾದ ಇಂದ್ರದೇವನೇ!/ಬಲಕಾರಣವಾದ ಓಜೋಧಾತುವುಳ್ಳ ಇಂದ್ರದೇವನೇ! ತ್ವಮ್ ದೇವೇಷು=ನೀನು ದೇವತೆಗಳಲ್ಲಿ; ಓಜಸ್ವೀ ಭೂಯಾಃ=ಬಲಿಷ್ಠನಾಗಿರುವೆ/ಬಲವಂತನಾಗಿರು;

---

೧) ತೇಜೋವಿದಸಿ...ಹಾಸೀತ್ ।
೨) ಓಜೋವಿದಸಿ...ಹಾಸೀತ್ ।
೩)ಸುವರ್ವಿದಸಿ...ಹಾಸೀತ್ । ಈ ಮಂತ್ರಗಳನ್ನು 'ವಾಚಯತಿ' ಎಂಬುದರಿಂದ ಅನುಮಂತ್ರಣಕ್ಕಾಗಿ ಎಂದು ಭ.ಭಾ. ಮಿಶ್ರರು ವಿನಿಯೋಗವನ್ನು ಹೇಳಿರುತ್ತಾರೆ.

ಓಜಸ್ವಂತಂ ಮಾಮಾಯುಷ್ಮಂತಂ ವರ್ಚಸ್ವಂತಂ

ಮನುಷ್ಯೇಷು ಕುರು ಬ್ರಹ್ಮಣಶ್ಚ ತ್ವಾ ಕ್ಷತ್ರಸ್ಯ [ಕ್ಷತ್ರಸ್ಯ ಚ (೧)

ಓಜಸೇ]ಚೌಜಸೇ ಜುಹೋಮ್ಯೋಜೋವಿದಸ್ಯೋಜೋ ಮಾ

---

ಓಜಸ್ವಂತಮ್ । ಮಾಮ್ । ಆಯುಷ್ಮಂತಮ್ । ವರ್ಚಸ್ವಂತಮ್ । ಮನುಷ್ಯೇಷು ।

ಕುರು । ಬ್ರಹ್ಮಣಃ । ಚ । ತ್ವಾ । ಕ್ಷತ್ರಸ್ಯ । ಚ ।(೧)। ಓಜಸೇ । ಜುಹೋಮಿ ।

ಓಜೋವಿದಿತ್ಯೋಜಃ-ವಿತ್ । ಅಸಿ । ಓಜಃ । ಮಾ ।

---

| ಮಂತ್ರ | ವಿನಿಯೋಗ |
|---|---|
| ಓಜೋವಿದಸಿ...ಹಾಸೀತ್ ॥ | ಹೋಮಾನಂತರದ ಅನುಮಂತ್ರಣಕ್ಕಾಗಿ |

---

**ಮನುಷ್ಯೇಷು ಮಾಮ್**=ಮನುಷ್ಯರಲ್ಲಿ ನನ್ನನ್ನು; **ಓಜಸ್ವಂತಮ್**=ಅತಿಶಯ ಬಲಯುಕ್ತನಾಗಿರುವಂತೆಯೂ; **ಆಯುಷ್ಮಂತಮ್**=ಆಯುಷ್ಮಂತನಾಗಿರುವಂತೆಯೂ; **ವರ್ಚಸ್ವಂತಮ್**=ವರ್ಚಸ್ವಿಯಾಗಿರುವಂತೆಯೂ; **ಕುರು**=ಮಾಡು; **ತ್ವಾ**=ಐಂದ್ರಾತಿ ಗ್ರಾಹ್ಯವಾದ ನಿನ್ನನ್ನು; **ಬ್ರಹ್ಮಣಃ ಚ ಕ್ಷತ್ರಸ್ಯ ಚ**=ಬ್ರಾಹ್ಮಣನಿಗೆ ಮತ್ತು ಕ್ಷತ್ರಿಯನಿಗೆ ಸಂಬಂಧಿಸಿದ; **ಓಜಸೇ ಜುಹೋಮಿ**=ಬಲವನ್ನು ಪಡೆಯುವುದಕ್ಕಾಗಿ ಹೋಮಮಾಡುತ್ತೇನೆ. ✦[ಇಂದ್ರನೇ!]**ಓಜೋವಿತ್ ಅಸಿ**=ನೀನು ಓಜಸ್ಸಿನ ಸರ್ವಾಂಶವನ್ನೂ ತಿಳಿದವನಾಗಿದ್ದೀಯೆ. **ಓಜಃ ಮಾ**=[ನಿನ್ನ ಅನುಗ್ರಹದಿಂದ] ಓಜಸ್ಸು ನನ್ನನ್ನು; **ಮಾ ಹಾಸೀತ್**=ಬಿಟ್ಟು

---

ಮನುಷ್ಯರಲ್ಲಿ ನಾನು ಇಂದ್ರಾನುಗ್ರಹದಿಂದ ದೇವೇಂದ್ರನಂತೆ ಅತಿಶಯ ಬಲವಂತನಾಗುವಂತೆ ಮಾಡು ಎಂದು ಪ್ರಾರ್ಥಿಸಿ, ನೇಷ್ಟನೆಂಬ ಋತ್ವಿಜನು ಹೋಮವನ್ನು ಮಾಡುತ್ತಾನೆ.

ಇಂತಹ ಕಡೆಗಳಲ್ಲಿ ಋತ್ವಿಜರೇ ಆ ಮಂತ್ರಗಳನ್ನು ಹೇಳಿದರೂ ಆ ಮಂತ್ರಗಳಿಂದ ಹೇಳಲ್ಪಡುವ ಕಾಮನೆಗಳು ಯಜಮಾನನ ಕಾಮನೆಗಳೇ. ಅವುಗಳನ್ನೇ ಋತ್ವಿಜರು ಹೇಳುತ್ತಾರೆಂಬುದು ಶಾಸ್ತ್ರಸಿದ್ಧಾಂತ.

**ಮಾ ಹಾಸೀನ್ಮಾಽಹಮೋಜೋ ಹಾಸಿಷಂ ಮಾ ಮಾ ಮೋಜೋ ಹಾಸೀತ್ಸೂರ್ಯ ಭ್ರಾಜಸ್ವಿನ್ಭ್ರಾಜಸ್ವೀ ತ್ವಂ ದೇವೇಷು ಭೂಯಾ**

---

ಮಾ । ಹಾಸೀತ್ । ಮಾ । ಅಹಮ್ । ಓಜಃ । ಹಾಸಿಷಮ್ । ಮಾ । ಮಾಮ್ । ಓಜಃ । ಹಾಸೀತ್ । ಸೂರ್ಯ । ಭ್ರಾಜಸ್ವಿನ್ನ್ । ಭ್ರಾಜಸ್ವೀ । ತ್ವಮ್ । ದೇವೇಷು । ಭೂಯಾಃ ।

---

| ಮಂತ್ರ | ವಿನಿಯೋಗ |
|---|---|
| ಸೂರ್ಯ ಭ್ರಾಜಸ್ವಿನ್...ಜುಹೋಮಿ ॥ | ಉನ್ನೇತನೆಂಬ ಋತ್ವಿಜನು ಸೌರ್ಯಾತಿಗ್ರಾಹ್ಯಹೋಮವನ್ನು ಮಾಡಲು |

---

ಹೋಗದಿರಲಿ; **ಅಹಮ್**=ನಾನು; **ಓಜಃ**= [ಯಾವ ಕಾರಣದಿಂದಲೂ] ಓಜಸ್ಸನ್ನು; **ಮಾ ಹಾಸಿಷಮ್**=ತೊರೆಯದೆ ಇರುವಂತಾಗಲಿ; **ಮಾಮ್**=ನನ್ನನ್ನು; **ಓಜಃ**= ಓಜಸ್ಸು; **ಮಾ ಹಾಸೀತ್**=ಬಿಡದಿರುವಂತಾಗಲಿ /ನನ್ನನ್ನು ಸೇರಿಕೊಂಡೇ ಇರಲಿ. ✦ **ಭ್ರಾಜಸ್ವಿನ್ ಸೂರ್ಯ**=ಪ್ರಕಾಶಗೊಳಿಸುವ ಸೂರ್ಯದೇವನೇ! **ತ್ವಮ್**=ನೀನು; **ದೇವೇಷು**=ದೇವತೆಗಳಲ್ಲಿ; **ಭ್ರಾಜಸ್ವೀ ಭೂಯಾಃ**= ಅತಿಶಯಭ್ರಾಜಸ್ವಂತನಾಗಿರುವೆ;

---

ಈ ಮಂತ್ರದಲ್ಲಿ ಓಜಸ್ಸೆಂದರೆ ಬಲವೆಂದೂ, ಬಲಕ್ಕೆ ಕಾರಣವಾದ ಎಂಟನೆಯ ಧಾತುವೆಂದೂ ವ್ಯಾಖ್ಯಾನ ಮಾಡಿರುತ್ತಾರೆ.

ಹೇ! ಇಂದ್ರನೇ! ನೀನು ಓಜಸ್ಸಿಗೆ ಸಂಬಂಧಿಸಿದ ಎಲ್ಲವನ್ನೂ ಬಲ್ಲವನು. ನೀನು ನನ್ನನ್ನು ಅನುಗ್ರಹಿಸು. ನಿನ್ನ ಅನುಗ್ರಹದ ಬಲದಿಂದ ಓಜಸ್ಸು ನನ್ನನ್ನು ಬಿಡದಂತಾಗಲಿ. ನಾನೂ ಸಹ ಅದನ್ನು ತೊರೆಯದಂತಾಗಲಿ. ಇಂದ್ರಿಯದೇವತೆಯಾದ ನಿನ್ನ ಅನುಗ್ರಹದಿಂದ ರೋಗಾದಿಗಳಿಂದ ಅಥವಾ ದೈವಿಕಕಾರಣಗಳಿಂದ ಓಜಸ್ಸು ಹೋಗದಿರಲಿ. ನೀನು ನನ್ನನ್ನು ಹಾಗೆ ಹರಸು.

ಭ್ರಾಜಸ್ವಂತಂ ಮಾಮಾಯುಷ್ಮಂತಂ ವರ್ಚಸ್ವಂತಂ

ಮನುಷ್ಯೇಷು ಕುರು ವಾಯೋಶ್ಚ ತ್ವಾಽಪಾಂ ಚ ಭ್ರಾಜಸೇ

ಜುಹೋಮಿ ಸುವರ್ವಿದಸಿ ಸುವರ್ಮಾ ಮಾ ಹಾಸೀ–

---

ಭ್ರಾಜಸ್ವಂತಮ್ । ಮಾಮ್ । ಆಯುಷ್ಮಂತಮ್ । ವರ್ಚಸ್ವಂತಮ್ । ಮನುಷ್ಯೇಷು ।

ಕುರು । ವಾಯೋಃ । ಚ । ತ್ವಾ । ಅಪಾಮ್ । ಚ । ಭ್ರಾಜಸೇ । ಜುಹೋಮಿ ।

ಸುವರ್ವಿದಿತಿ ಸುವಃ–ವಿತ್ । ಅಸಿ । ಸುವಃ । ಮಾ । ಮಾ । ಹಾಸೀತ್ ।

---

| ಮಂತ್ರ | ವಿನಿಯೋಗ |
|---|---|
| ಸುವರ್ವಿದಸಿ...ಸುವರ್ಹಾಸೀತ್ ॥ | ಸೌರ್ಯಾತಿಗ್ರಾಹ್ಯಹೋಮದ ಬಳಿಕ ಅನುಮಂತ್ರಣ ಮಾಡಲು |

---

**ಮಾಮ್**=ನನ್ನನ್ನು; **ಮನುಷ್ಯೇಷು**=ಮನುಷ್ಯರಲ್ಲಿ; **ಭ್ರಾಜಸ್ವಂತಮ್**=ಅಧಿಕವಾಗಿ ಭ್ರಾಜಸ್ವಂತನನ್ನಾಗಿಯೂ; **ಆಯುಷ್ಮಂತಮ್**=ಆಯುಷ್ಮಂತನನ್ನಾಗಿಯೂ; **ವರ್ಚಸ್ವಂತಮ್**=ಬಲಿಷ್ಠನನ್ನಾಗಿಯೂ; **ಕುರು**=ಮಾಡು; **ವಾಯೋಃ ಚ**= [ಸೌರ್ಯಾತಿಗ್ರಾಹ್ಯವೇ!] ವಾಯುವಿನ ಮತ್ತು; **ಅಪಾಮ್ ಚ**=ನೀರಿನ; **ಭ್ರಾಜಸೇ**= ಪ್ರಕಾಶಕತ್ವವನ್ನು[ಹೊಂದುವುದಕ್ಕಾಗಿ] **ತ್ವಾ**=ನಿನ್ನನ್ನು; **ಜುಹೋಮಿ** =ಹೋಮ ಮಾಡುತ್ತೇನೆ.
✦**ಸುವರ್ವಿತ್ ಅಸಿ**=[ಸೂರ್ಯನೇ!] ನೀನು ಸ್ವರ್ಗವನ್ನೂ, ಸ್ವರ್ಗಮಾರ್ಗವನ್ನೂ ತಿಳಿದವನಾಗಿದ್ದೀಯೆ; **ಸುವಃ ಮಾ ಮಾ ಹಾಸೀತ್**= ಸ್ವರ್ಗವು ನನ್ನನ್ನು ಬಿಟ್ಟು ಹೋಗದಿರಲಿ;

---

ಹೇ ಭ್ರಾಜಸ್ವಿಯಾದ ಸೂರ್ಯದೇವನೇ! ನಾನು ವಾಯುವಿನ ಮತ್ತು ನೀರಿನ ಭ್ರಾಜಸ್ಸನ್ನು ಪಡೆಯುವುದಕ್ಕಾಗಿ ಈ ಸೌರ್ಯಾತಿಗ್ರಾಹ್ಯವನ್ನು ಹೋಮ ಮಾಡುತ್ತೇನೆ.
ದೇವತೆಗಳಲ್ಲಿ ಸೂರ್ಯನು ಪ್ರಕಾಶಕಜ್ಯೋತಿಗಳಲ್ಲಿ ಮುಖ್ಯನಾದವನು. ಆತನು ನನ್ನನ್ನೂ /ಯಜಮಾನನನ್ನೂ ಮನುಷ್ಯರಲ್ಲಿ ಹೆಚ್ಚು ಪ್ರಕಾಶವುಳ್ಳವನನ್ನಾಗಿ ಮಾಡಲಿ.

ನ್ಮಾಽಹಗ್ಂ ಸುವರ್ ಹಾಸಿಷಂ ಮಾ ಮಾಗ್ಂ ಸುವರ್

ಹಾಸೀನ್ಮಯಿ ಮೇಧಾಂ ಮಯಿ ಪ್ರಜಾಂ

ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ

ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು

---

ಮಾ । ಅಹಮ್ । ಸುವಃ । ಹಾಸಿಷಮ್ । ಮಾ । ಮಾಮ್ । ಸುವಃ । ಹಾಸೀತ್ ।

ಮಯಿ । ಮೇಧಾಮ್ । ಮಯಿ । ಪ್ರಜಾಮಿತಿ ಪ್ರ-ಜಾಮ್ । ಮಯಿ । ಅಗ್ನಿಃ ।

ತೇಜಃ । ದಧಾತು । ಮಯಿ । ಮೇಧಾಮ್ । ಮಯಿ । ಪ್ರಜಾಮಿತಿ ಪ್ರ-ಜಾಮ್ ।

ಮಯಿ । ಇಂದ್ರಃ । ಇಂದ್ರಿಯಮ್ । ದಧಾತು ।

---

| ಮಂತ್ರ | ವಿನಿಯೋಗ |
|---|---|
| ಮಯಿ...ಭ್ರಾಜೋ ದಧಾತು ॥ | ಸೋಮಗ್ರಹಶೇಷವನ್ನು ಭಕ್ಷಣ ಮಾಡಲು |

---

**ಅಹಮ್**=ನಾನು; **ಸುವಃ ಮಾ ಹಾಸಿಷಮ್**=ನಾನು ಸ್ವರ್ಗವನ್ನು ಬಿಡುವಂತಾಗದಿರಲಿ; **ಮಾಮ್ ಸುವಃ ಮಾ ಹಾಸೀತ್**=[ಸರ್ವಪ್ರಕಾರದಿಂದಲೂ] ಸ್ವರ್ಗವು ನನ್ನನ್ನು ಬಿಡದೆ ಇರಲಿ. ✦**ಅಗ್ನಿಃ**=ಅಗ್ನಿದೇವನು; **ಮಯಿ**=ನನ್ನಲ್ಲಿ; **ಮೇಧಾಂ**=ಗ್ರಂಥ-ಗ್ರಂಥಾರ್ಥಧಾರಣಶಕ್ತಿಯನ್ನೂ; **ಮಯಿ ಪ್ರಜಾಮ್**=ನನ್ನಲ್ಲಿ ಉತ್ತಮ ಪುತ್ರರನ್ನೂ; **ಮಯಿ ತೇಜಃ**= ನನ್ನಲ್ಲಿ ಕಾಂತಿಯನ್ನೂ; **ದಧಾತು** =ನೆಲೆಗೊಳಿಸಲಿ. ✦**ಇಂದ್ರಃ**=ಐಂದ್ರಾತಿಗ್ರಾಹ್ಯದೇವತೆಯಾದ ಇಂದ್ರನು; **ಮಯಿ ಮೇಧಾಮ್**=ನನ್ನಲ್ಲಿ ಮೇಧಾಶಕ್ತಿಯನ್ನೂ; **ಮಯಿ ಪ್ರಜಾಮ್**=ನನ್ನಲ್ಲಿ ಉತ್ತಮಪುತ್ರರನ್ನೂ; **ಮಯಿ ಇಂದ್ರಿಯಮ್**= ನನ್ನಲ್ಲಿ ಇಂದ್ರಿಯಸಾಮರ್ಥ್ಯವನ್ನೂ; **ದಧಾತು**= ನೆಲೆಗೊಳಿಸಲಿ.

# ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥೨-1॥

[ಕ್ಷತ್ರಸ್ಯ ಚ ಮಯಿ ತ್ರಯೋವಿಗ್ಂಶತಿಶ್ಚ ॥]

---

ಮಯಿ । ಮೇಧಾಮ್ । ಮಯಿ । ಪ್ರಜಾಮಿತಿ ಪ್ರ–ಜಾಮ್ । ಮಯಿ । ಸೂರ್ಯಃ ।

ಭ್ರಾಜಃ । ದಧಾತು ॥೨॥

---

✦ಸೂರ್ಯಃ=ಸೌರ್ಯಾತಿಗ್ರಾಹ್ಯಸ್ವಾಮಿಯಾದ ಸೂರ್ಯನು; ಮಯಿ ಮೇಧಾಂ= ನನ್ನಲ್ಲಿ ಧಾರಣಶಕ್ತಿಯನ್ನೂ; ಮಯಿ ಪ್ರಜಾಮ್=ನನ್ನಲ್ಲಿ ಉತ್ತಮಪುತ್ರಾದಿಗಳನ್ನೂ; ಮಯಿ ಭ್ರಾಜಃ=ನನ್ನಲ್ಲಿ ಪ್ರಕಾಶಕತ್ವವನ್ನೂ; ದಧಾತು=ಸ್ಥಿರಗೊಳಿಸಲಿ.

---

ಎಂದು ಪ್ರಾರ್ಥನೆ.

ಹೇ! ಸೂರ್ಯನೇ! ನೀನು ಸ್ವರ್ಗವನ್ನೂ, ಸ್ವರ್ಗಮಾರ್ಗವನ್ನೂ ಅರಿತವನು. ನಿನ್ನ ಅನುಗ್ರಹವಿಶೇಷದಿಂದ ನಾನು ಸ್ವರ್ಗವನ್ನು ಬಿಡದಂತಾಗಲಿ. ಸ್ವರ್ಗವೂ ಸಹ ನನ್ನನ್ನು ಬಿಡದಿರಲಿ. ಹಾಗೆ ನೀನು ಅನುಗ್ರಹಿಸು.

ಆಗ್ನೇಯ ಅತಿಗ್ರಾಹ್ಯ, ಐಂದ್ರಾತಿಗ್ರಾಹ್ಯ ಮತ್ತು ಸೌರ್ಯಾತಿಗ್ರಾಹ್ಯವನ್ನು ಹೋಮ ಮಾಡಿದ ಋತ್ವಿಜರಾದ ಪ್ರತಿಪ್ರಸ್ಥಾತ, ನೇಷ್ಟ, ಉನ್ನೇತರು ತಾವು ಹೋಮ ಮಾಡಿದ ಸೋಮಗ್ರಹದ ಶೇಷವನ್ನು ಭಕ್ಷಣ ಮಾಡಬೇಕು.

ಹೇ! ಅಗ್ನಿಯೇ! ನೀನು ನನಗೆ ಮೇಧಾಶಕ್ತಿಯನ್ನು ಕರುಣಿಸು. ನನಗೆ ಉತ್ತಮ ಸಂತತಿಯಾಗಲಿ. ನನ್ನಲ್ಲಿ ಕಾಂತಿಯು ನೆಲಸಲಿ.

ಹೇ! ಇಂದ್ರನೇ! ಮೇಧಾಶಕ್ತಿ, ಉತ್ತಮ ಸಂತತಿ ಹಾಗೂ ಇಂದ್ರಿಯಶಕ್ತಿಯನ್ನು ಅನುಗ್ರಹಿಸು.

ಎಲೈ! ಸೂರ್ಯನೇ! ನೀನು ಮೇಧಾ, ಪುತ್ರಸಂಪತ್ತಿನೊಡನೆ ಪ್ರಕಾಶಕತ್ವವನ್ನು ನೀಡಿ ಅನುಗ್ರಹಿಸು.

---

## ವಿನಿಯೋಗಸಂಗ್ರಹ

[1]ಅಗ್ನೇऽತಿಗ್ರಾಹ್ಯಮಾಗ್ನೇಯಂ ಹುತ್ವಾ [2]ತೇಜ ಉಪಸ್ಥಿತಿಃ ।
[3-6]ತಥೇಂದ್ರಸೌರ್ಯಯೋರ್ಭಕ್ಷೇನ್ಮಯೀತಿ [7-9]ತ್ರೀನ್ನವೋದಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-9

## ಅನುವಾಕದಲ್ಲಿರುವ ವಿಶೇಷವಿಷಯಗಳು

### ಅ) ಮೀಮಾಂಸಾ

### ೧)ಅಗ್ನಿ-ಅತಿಗ್ರಾಹ್ಯಗಳಿಗೆ ವಿಕೃತಿಯಾಗದಲ್ಲಿ ಅತಿದೇಶವಿದೆಯೇ ?

**[ಜೈ.ಸೂ.10.8.21-22]**

ಪ್ರಕೃತಿಯಾಗದಲ್ಲಿ ಶ್ರುತಿಯಲ್ಲಿರುವ ಉಪದೇಶದಿಂದಲೇ ಎಲ್ಲ ಧರ್ಮ ಪ್ರಾಪ್ತಿಯಾಗುತ್ತದೆ. ವಿಕೃತಿಯಾಗದಲ್ಲಿ 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ವಚನದಂತೆ ಅತಿದೇಶದಿಂದ ಎಲ್ಲ ಧರ್ಮಗಳ ಪ್ರಾಪ್ತಿಯಾಗುತ್ತದೆ. ಹೀಗಿರುವಾಗ ಅಗ್ನಿ-ಅತಿಗ್ರಾಹ್ಯಗಳು ವಿಕೃತಿಯಾಗಗಳಲ್ಲಿ ತಾನೇ ಪ್ರಾಪ್ತಿಯಾಗುವಾಗ ಪುನಃ **'ತಮಗ್ನಿಷ್ಟೋಮೇನಾನುಯಜತಿ'** ಎಂಬ ವಚನಗಳಿಂದ ಪುನರ್ವಿಧಾನ ಮಾಡುತ್ತಿರುವುದರಿಂದ ಅಗ್ನಿ-ಅತಿಗ್ರಾಹ್ಯಗಳು ವಿಕೃತಿಯಲ್ಲಿ ಅನ್ವಯಿಸುವುದೇ? ಎಂದು **ಸಂಶಯ.**

ಪುನರ್ವಿಧಾನವು ಸಾರ್ಥಕವಾಗಲು ಅಗ್ನಿ-ಅತಿಗ್ರಾಹ್ಯಗಳಿಗೆ ವಿಕೃತಿಯಲ್ಲಿ ಅತಿದೇಶವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಅತಿದೇಶವು ಕೆಲವು ಅಂಗಗಳನ್ನು ಮಾತ್ರ ವಿಕೃತಿಯಲ್ಲಿ ಅತಿದೇಶ ಮಾಡುತ್ತದೆ ಎಂದು ಹೇಳುವುದು ಯುಕ್ತವಲ್ಲ. ಆದುದರಿಂದ ಇಂತಹ ಪುನರ್ವಿಧಾನಸ್ಥಳಗಳಲ್ಲಿ ಪ್ರಕೃತಿ-ವಿಕೃತಿಗಳಿಗೆ ಸಾಮ್ಯವೆಂದು ಅಂಗೀಕರಿಸಬೇಕು. ಈ ಸಾಮ್ಯದ

ಫಲವೆಂದರೆ **'ಶ್ಯೇನಚಿತಂ ಚಿನ್ವೀತ ಸುವರ್ಗಕಾಮಃ'** ಮೊದಲಾದ ಗುಣಕಾಮ ವಿಧಿಗಳು ಈ ವಿಕೃತಿಯಲ್ಲಿಯೂ ಪ್ರವರ್ತಿಸುತ್ತವೆ. ಹೀಗಾಗಿ ಅತಿಗ್ರಾಹ್ಯಗಳಿಗೆ ವಿಕೃತಿಯಾಗಗಳಲ್ಲಿ ಅತಿದೇಶವಿದೆ. ಇದು ಇಲ್ಲಿನ ಸಿದ್ಧಾಂತ.

## ॥ ದ್ವಿತೀಯೋಽನುವಾಕಃ ॥

ವಾಯುರ್ ಹಿಂಕರ್ತಾಽಗ್ನಿಃ ಪ್ರಸ್ತೋತಾ ಪ್ರಜಾಪತಿಸ್ಸಾಮ

ಬೃಹಸ್ಪತಿರುದ್ಗಾತಾ ವಿಶ್ವೇ ದೇವಾ ಉಪಗಾತಾರೋ

---

ವಾಯುಃ । ಹಿಂಕರ್ತೇತಿ ಹಿಂ-ಕರ್ತಾ । ಅಗ್ನಿಃ । ಪ್ರಸ್ತೋತೇತಿ ಪ್ರ-ಸ್ತೋತಾ ।

ಪ್ರಜಾಪತಿರಿತಿ ಪ್ರಜಾ-ಪತಿಃ । ಸಾಮ । ಬೃಹಸ್ಪತಿಃ । ಉದ್ಗಾತೇತ್ಯುತ್-ಗಾತಾ ।

ವಿಶ್ವೇ । ದೇವಾಃ । ಉಪಗಾತಾರ ಇತ್ಯುಪ-ಗಾತಾರಃ ।

---

ಮೊದಲನೆಯ ಅನುವಾಕದಲ್ಲಿ ಅತಿಗ್ರಾಹ್ಯಗಳಿಗೆ ಸಂಬಂಧಿಸಿದ ವಿಷಯಗಳು ಹೇಳಲ್ಪಟ್ಟವು. ಎರಡನೆಯ ಅನುವಾಕದಲ್ಲಿ ಉಪಾಕರಣ-ಪ್ರತಿಗರಾಂಗಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
| --- | --- |
| **ವಾಯುರ್ ಹಿಂಕರ್ತಾ...ದಧತು ॥** | ಸ್ತೋತ್ರೋಪಾಕರಣವನ್ನು ಮಾಡಲು |

---

✦**ವಾಯುಃ ಹಿಂಕರ್ತಾ**=ವಾಯುದೇವನು [ಸಾಮಗಾನದಲ್ಲಿರುವ ಸಾಮದ ಐದು ಭಾಗಗಳಲ್ಲಿ] ಹಿಂಕಾರವನ್ನು ಹೇಳತಕ್ಕವನು; **ಅಗ್ನಿಃ ಪ್ರಸ್ತೋತಾ**= ಅಗ್ನಿಯು ಪ್ರಸ್ತಾವವೆಂಬ ಎರಡನೆಯ ಭಾಗವನ್ನು ಗಾನ ಮಾಡುವವನು; **ಪ್ರಜಾ ಪತಿಃ ಸಾಮ**=ಸರ್ವದೇವಾತ್ಮಕನಾದ ಪ್ರಜಾಪತಿಯು ಸರ್ವಸಾಮಸ್ವರೂಪನಾ ಗಿದ್ದಾನೆ. **ಬೃಹಸ್ಪತಿಃ ಉದ್ಗಾತಾ**=ಬೃಹಸ್ಪತಿಯು ಉದ್ಗೀಥವೆಂಬ ಸಾಮಗಾನದ ಮೂರನೆಯ ಭಾಗವನ್ನು ಗಾನ ಮಾಡುವ ಉದ್ಗಾತೃವಾಗಿದ್ದಾನೆ. **ವಿಶ್ವೇ ದೇವಾಃ ಉಪಗಾತಾರಃ**=ಎಲ್ಲಾ ಉಳಿದ ದೇವತೆಗಳೂ 'ಓಮ್' ಎಂದು ಉಪ ಗಾನವನ್ನು ಮಾಡುವವರಾಗಿದ್ದಾರೆ.

ಮರುತಃ ಪ್ರತಿಹರ್ತಾರ ಇಂದ್ರೋ ನಿಧನಂ ತೇ ದೇವಾಃ ಪ್ರಾಣಭೃತಃ ಪ್ರಾಣಂ ಮಯಿ ದಧತ್ವೇತದ್ವೈ ಸರ್ವ ಮಧ್ವರ್ಯುರುಪಾಕುರ್ವನ್ನುದ್ಗಾತೃಭ್ಯ ಉಪಾಕರೋತಿ

---

ಮರುತಃ । ಪ್ರತಿಹರ್ತಾರ ಇತಿ ಪ್ರತಿ–ಹರ್ತಾರಃ । ಇಂದ್ರಃ । ನಿಧನಮಿತಿ ನಿ–ಧನಮ್ । ತೇ । ದೇವಾಃ । ಪ್ರಾಣಭೃತ ಇತಿ ಪ್ರಾಣ–ಭೃತಃ । ಪ್ರಾಣಮಿತಿ ಪ್ರ–ಅನಮ್ । ಮಯಿ । ದಧತು । ಏತತ್ । ವೈ । ಸರ್ವಮ್ । ಅಧ್ವರ್ಯುಃ । ಉಪಾಕುರ್ವನ್ನಿತ್ಯುಪ–ಆಕುರ್ವನ್ । ಉದ್ಗಾತೃಭ್ಯ ಇತ್ಯುದ್ಗಾತೃ–ಭ್ಯಃ । ಉಪಾಕರೋತೀತ್ಯುಪ–ಆಕರೋತಿ ।

---

**ಮರುತಃ ಪ್ರತಿಹರ್ತಾರಃ**=ಮರುದ್ದೇವತೆಗಳು ನಾಲ್ಕನೆಯ ಸಾಮಭಾಗವನ್ನು ಗಾನ ಮಾಡುವ ಪ್ರತಿಹರ್ತಾರರು; **ಇಂದ್ರಃ ನಿಧನಮ್**=ಇಂದ್ರನು ನಿಧನವೆಂಬ ಐದನೆಯ ಸಾಮಭಾಗವನ್ನು ಹೇಳುವವನು; **ತೇ ದೇವಾಃ**=ಆ ವಾಯುವೇ ಮೊದಲಾದ ದೇವತೆಗಳು; **ಪ್ರಾಣಭೃತಃ**=ಪ್ರಾಣಪೋಷಕರಾಗಿರುತ್ತಾರೆ; **ಪ್ರಾಣಮ್ ಮಯಿ ದಧತು**=[ಅವರು] ನನ್ನಲ್ಲಿ ಪ್ರಾಣಾದಿಗಳು ಸ್ಥಿರವಾಗಿ ನೆಲಸುವಂತೆ ಮಾಡಲಿ.

---

ಸ್ತೋತ್ರೋಪಾಕರಣವೆಂದರೆ ಸಾಮಗಾನಾರಂಭ. ಈ ಮಂತ್ರದಿಂದ ಅಧ್ವರ್ಯುವು ಪ್ರಸ್ತೋತನಿಗೆ ದರ್ಭಮುಷ್ಟಿಯನ್ನು ಕೊಟ್ಟು ಸಾಮಗಾನಾರಂಭಕ್ಕೆ ಅನುಮತಿಯನ್ನು ಕೊಡುತ್ತಾನೆ.

ಸಾಮಗಾನದಲ್ಲಿ ಹಿಂಕಾರವನ್ನು ಉದ್ಗಾತೃಗಣದವರೆಲ್ಲರೂ ಹೇಳಬೇಕು. ಪ್ರಸ್ತಾವವೆಂಬ ಎರಡನೆಯ ಭಾಗವನ್ನು ಪ್ರಸ್ತೋತೃವು ಹೇಳಬೇಕು. ಉದ್ಗೀಥವೆಂಬ ಮೂರನೆಯ ಭಾಗವನ್ನು ಉದ್ಗಾತೃವು ಹೇಳಬೇಕು. ಪ್ರತಿಹಾರವೆಂಬ ನಾಲ್ಕನೆಯ ಭಾಗವನ್ನು ಪ್ರತಿಹರ್ತನು ಹೇಳಬೇಕು. ನಿಧನವೆಂಬ ಕೊನೆಯ ಭಾಗವನ್ನು ಉದ್ಗಾತೃಗಣದವರೆಲ್ಲರೂ ಹೇಳಬೇಕು.

ತೇ ದೇವಾಃ ಪ್ರಾಣಭೃತಃ ಪ್ರಾಣಂ ಮಯಿ

ದಧತ್ವಿತ್ಯಾಹೈತದೇವ ಸರ್ವಮಾತ್ಮನ್ಧತ್ತೇ

---

ತೇ । ದೇವಾಃ । ಪ್ರಾಣಭೃತ ಇತಿ ಪ್ರಾಣ-ಭೃತಃ । ಪ್ರಾಣಮಿತಿ ಪ್ರ-ಅನಮ್ । ಮಯಿ।

ದಧತು । ಇತಿ । ಆಹ । ಏತತ್ । ಏವ । ಸರ್ವಮ್ । ಆತ್ಮನ್ನ್ । ಧತ್ತೇ ।

---

**'ವಾಯುರ್ ಹಿಂಕರ್ತಾ' ಮೊದಲಾದ ಮಂತ್ರವಿಧಿ-ಬ್ರಾಹ್ಮಣ**

| ಬ್ರಾಹ್ಮಣಭಾಗ | ವಿವರಣೆ |
|---|---|
| ಉಪಾಕುರ್ವನ್ | ಉಪಾಕರಣವನ್ನು ಮಾಡುತ್ತಾ [ಪ್ರಸ್ತೋತೃವಿಗೆ ದರ್ಭಮುಷ್ಟಿಯನ್ನು ನೀಡಿ ಸಾಮಗಾನಕ್ಕೆ ಅನುಮತಿಯನ್ನು ನೀಡುತ್ತಾ] |
| ಅಧ್ವರ್ಯುಃ ಉದ್ಗಾತೃಭ್ಯಃ ಉಪಾಕರೋತಿ | ಅಧ್ವರ್ಯುವು ಉದ್ಗಾತೃಗಳಿಗೆ ಗಾನಕ್ಕೆ ಅನುಮತಿಯನ್ನು ನೀಡಬೇಕು. [ವಿಧಿ] |
| ತೇ ದೇವಾಃ ಪ್ರಾಣಭೃತಃ ಪ್ರಾಣಮ್ ಮಯಿ ದಧತು ಇತಿ ಆಹ | ತೇ ದೇವಾಃ...ದಧತು [ಪ್ರಾಣಪೋಷಕರಾದ ಆ ವಾಯ್ವಾದಿದೇವತೆಗಳು ನನ್ನಲ್ಲಿ ಪ್ರಾಣಾದಿಗಳನ್ನು ನೆಲೆಗೊಳಿಸಲಿ] ಎಂದು ಅಧ್ವರ್ಯುವು ಶ್ರುತಿಯು /ಹೇಳುತ್ತಾನೆ/ತ್ತದೆ. |
| ಏತತ್ ಏವ ಸರ್ವಮ್ | ಇದರಿಂದ ವಾಯ್ವಾದಿಗಳು, ಹಿಂಕಾರಾದಿಗಳು ಮತ್ತು ಪ್ರಾಣಾದಿಗಳು ಇವೆಲ್ಲವನ್ನೂ ಅಧ್ವರ್ಯುವು |
| ಆತ್ಮನ್ ಧತ್ತೇ | ತನ್ನಲ್ಲಿ ಸ್ಥಾಪಿಸುತ್ತಾನೆ. |

---

ಅಧ್ವರ್ಯುವನ್ನು ಬಿಟ್ಟು ಮಿಕ್ಕ ಋತ್ವಿಜರು 'ಓಮ್' ಎಂದು ಉಪಗಾನವನ್ನು ಮಾಡಬೇಕು. ಯಜಮಾನನು 'ಹೋ' ಎಂದು ಉಪಗಾನವನ್ನು ಮಾಡಬೇಕು.

ಇಡಾ ದೇವಹೂರ್ಮನುರ್ಯಜ್ಞನೀರ್ಬೃಹಸ್ಪತಿರುಕ್ಥಾಮ

ದಾನಿ ಶಗ್ಂಸಿಷದ್ವಿಶ್ವೇ ದೇವಾ[(೩)ಸೂಕ್ತವಾಚಃ]ಸ್ಸೂಕ್ತವಾಚಃ

ಪೃಥಿವಿ ಮಾತರ್ಮಾ ಮಾ ಹಿಗ್ಂಸೀರ್ಮಧು ಮನಿಷ್ಯೇ

---

ಇಡಾ । ದೇವಹೂರಿತಿ ದೇವ-ಹೂಃ । ಮನುಃ ।ಯಜ್ಞನೀರಿತಿ ಯಜ್ಞ-ನೀಃ । ಬೃಹಸ್ಪತಿಃ । ಉಕ್ಥಾಮದಾನೀತ್ಯುಕ್ಥ-ಮದಾನಿ । ಶಗ್ಂಸಿಷತ್ । ವಿಶ್ವೇ । ದೇವಾಃ । ಸೂಕ್ತವಾಚ ಇತಿ ಸೂಕ್ತ-ವಾಚಃ । ಪೃಥಿವಿ । ಮಾತಃ । ಮಾ । ಮಾ । ಹಿಗ್ಂಸೀಃ । ಮಧು । ಮನಿಷ್ಯೇ ।

---

| ಮಂತ್ರ | ವಿನಿಯೋಗ |
| --- | --- |
| ಇಡಾ...ಅನುಮದಂತು ॥ | ಅಧ್ವರ್ಯುವು ಶಸ್ತ್ರಪ್ರತಿಗರ ಮಾಡುವಾಗ ಜಪಿಸಲು/ಆರ್ತ್ವಿಜ್ಯವನ್ನು ಮಾಡುವಾಗ ಹೇಳಲು |

---

✦**ಇಡಾ**=ದೇವಗೋವು; **ದೇವಹೂಃ**=ದೇವತೆಗಳನ್ನು ಆಹ್ವಾನಿಸುವಂತಹದ್ದಾಗಿದೆ/ದೇವಹೋತೃವಾಗಿದೆ; **ಮನುಃ**=ಮನುವು/ಪ್ರಜಾಪತಿಯು; **ಯಜ್ಞನೀಃ**=ಯಜ್ಞಪ್ರವರ್ತಕನು. **ಬೃಹಸ್ಪತಿಃ**=ದೇವಾಚಾರ್ಯನಾದ ಬೃಹಸ್ಪತಿಯು; **ಉಕ್ಥಾಮದಾನಿ**=ಸಂತೋಷಜನಕವಾದ ಉಕ್ಥಗಳೆಂಬ ಶಸ್ತ್ರವಿಶೇಷಗಳನ್ನು; **ಶಗ್ಂಸಿಷತ್**=ಹೇಳುತ್ತಾನೆ. **ವಿಶ್ವೇ ದೇವಾಃ**=ವಿಶ್ವೇದೇವರು/ದೇವವಿಶೇಷಗಳು; **ಸೂಕ್ತವಾಚಃ**=ಸೂಕ್ತಗಳನ್ನು ಹೇಳತಕ್ಕವರಾಗಿದ್ದಾರೆ. **ಪೃಥಿವಿ ಮಾತಃ**=ತಾಯಿಯಾದ ಭೂದೇವಿಯೇ! **ಮಾ ಮಾ ಹಿಗ್ಂಸೀಃ**=ನನ್ನನ್ನು ಹಿಂಸಿಸಬೇಡ; **ಮಧು ಮನಿಷ್ಯೇ**=ಜೇನಿನಂತೆ ಮಧುರವಾದ ಕಾರ್ಯಗಳನ್ನೇ ಮನಸ್ಸಿನಲ್ಲಿ ಆಲೋಚಿಸುತ್ತೇನೆ.

# ಮಧು ಜನಿಷ್ಯೇ ಮಧು ವಕ್ಷ್ಯಾಮಿ ಮಧು ವದಿಷ್ಯಾಮಿ ಮಧುಮತೀಂ ದೇವೇಭ್ಯೋ ವಾಚಮುದ್ಯಾಸಗ್ಂ ಶುಶ್ರೂಷೇಣ್ಯಾಂ ಮನುಷ್ಯೇಭ್ಯ-

---

ಮಧು । ಜನಿಷ್ಯೇ । ಮಧು । ವಕ್ಷ್ಯಾಮಿ । ಮಧು । ವದಿಷ್ಯಾಮಿ । ಮಧುಮತೀಮಿತಿ ಮಧು-ಮತೀಮ್ । ದೇವೇಭ್ಯಃ । ವಾಚಮ್ । ಉದ್ಯಾಸಮ್ । ಶುಶ್ರೂಷೇಣ್ಯಾಮ್ । ಮನುಷ್ಯೇಭ್ಯಃ ।

---

**ಮಧು ಜನಿಷ್ಯೇ**=ಪ್ರಿಯವಾದ ಯಜ್ಞಫಲಗಳನ್ನೇ ಉತ್ಪತ್ತಿ ಮಾಡುತ್ತೇನೆ; **ಮಧು ವಕ್ಷ್ಯಾಮಿ**=ಮಧುವಿನಂತೆ ಪ್ರಿಯವಾದ ಹವಿಸ್ಸುಗಳನ್ನೇ ದೇವತೆಗಳಿಗೆ ಒಯ್ಯುತ್ತೇನೆ; **ಮಧು ವದಿಷ್ಯಾಮಿ**=ಪ್ರಿಯವಾದ ಪ್ರತಿಗರಾದಿಮಂತ್ರಗಳನ್ನು ಹೇಳುತ್ತೇನೆ; **ದೇವೇಭ್ಯಃ**=ದೇವತೆಗಳಿಗಾಗಿ; **ಮಧುಮತೀಮ್ ವಾಚಮ್**=ಪ್ರಿಯವಾದ 'ಉಕ್ಥಶಾಃ' ಮೊದಲಾದ ಮಂತ್ರಗಳನ್ನು; **ಉದ್ಯಾಸಮ್**=ಹೇಳುತ್ತೇನೆ; **ಮನುಷ್ಯೇಭ್ಯಃ**=ಮನುಷ್ಯರಿಗೆ; **ಶುಶ್ರೂಷೇಣ್ಯಾಮ್ ವಾಚಮ್**=ಕೇಳಲು ಪ್ರಿಯವಾದ ಮಾತನ್ನು; **ಉದ್ಯಾಸಮ್**=ಹೇಳುತ್ತೇನೆ;

---

ಇದು ಗಾನಕ್ರಮ. ಇಲ್ಲಿ ಸರ್ವದೇವಾತ್ಮಕನಾದ ಪ್ರಜಾಪತಿಯು ಪೂರ್ಣಸಾಮ ಸ್ವರೂಪನೆಂದೂ ವಾಯ್ವಾದಿದೇವತೆಗಳು ಸಾಮಭಾಗಸ್ವರೂಪರೆಂದೂ ಹೇಳಲಾಗಿದೆ. ಅವರು ಅಧ್ವರ್ಯುವಾದ ನನ್ನಲ್ಲಿ/ಯಜಮಾನನಾದ ನನ್ನಲ್ಲಿ ಪ್ರಾಣವನ್ನು ನೆಲೆಗೊಳಿಸಲಿ ಎಂದು ಅಧ್ವರ್ಯುವು ಪ್ರಾರ್ಥಿಸುತ್ತಾನೆ.

ಅಧ್ವರ್ಯುವು ಪ್ರಸ್ತೋತೃವಿಗೆ ದರ್ಭಮುಷ್ಟಿಯನ್ನು ಕೊಟ್ಟು ಸಾಮಗಾನಕ್ಕೆ ಅನುಮತಿಯನ್ನೀಯುತ್ತಾನೆ. **ತೇ ದೇವಾಃ...ದಧತು** ಎಂಬ ಮಂತ್ರವನ್ನು ಹೇಳುವನು. ಇದರಿಂದ ಹಿಂಕಾರಾದಿಗಳು ಅವನಲ್ಲಿ ನೆಲೆಗೊಳ್ಳುವುದರಿಂದ ಪೂರ್ವೋಕ್ತರೀತಿಯಲ್ಲಿ ಉಪಾಕರಣವನ್ನು ಮಾಡಬೇಕು.

ಸ್ತಂ ಮಾ ದೇವಾ ಅವಂತು ಶೋಭಾಯ್ಯೆ

ಪಿತರೋಽನು ಮದಂತು ॥೪-2॥

[ಶಗ್ಂಸಿಷದ್ವಿಶ್ವೇ ದೇವಾ ಅಷ್ಟಾವಿಗ್ಂಶತಿಶ್ಚ ॥]

---

ತಮ್ । ಮಾ । ದೇವಾಃ । ಅವನ್ತು । ಶೋಭಾಯ್ಯೆ । ಪಿತರಃ । ಅನ್ವಿತಿ ।

ಮದಂತು ॥೪॥

---

**ತಮ್ ಮಾ**=ಅಂತಹ ನನ್ನನ್ನು; **ದೇವಾಃ ಅವಂತು**=ದೇವತೆಗಳು ಪ್ರಮಾದಾದಿಗಳುಂಟಾಗದಂತೆ ರಕ್ಷಿಸಲಿ; **ಪಿತರಃ**=ಪಿತೃದೇವತೆಗಳು; **ಶೋಭಾಯ್ಯೆ**= ಶುಭವಾದ ಮಾತನ್ನು ಹೇಳುವುದಕ್ಕೆ; **ಅನು ಮದಂತು**= ಅನುಮತಿಸಲಿ/ ಮಂತ್ರರೂಪವಾದ ಮಾತಿನಿಂದ ಸಂತೋಷಿಸಲಿ.

---

ಅಧ್ವರ್ಯುವು 'ಓಥಾಮೋದ ಇವ' ಮೊದಲಾದ ಶಸ್ತ್ರಪ್ರತಿಗರ ಮಾಡುವಾಗ ಈ ಮಂತ್ರಜಪವನ್ನು ಮಾಡಬೇಕು. ಅಧ್ವರ್ಯುವು ಪೂರ್ವಾಭಿಮುಖವಾಗಿ ಕುಳಿತು ಈ ಮಂತ್ರವನ್ನು ಜಪಿಸಬೇಕು.

ಮನುವೇ ಮೊದಲಾದವರು ಈ ಯಾಗದಲ್ಲಿ ಯಜ್ಞಪ್ರವರ್ತಕರಾಗಿದ್ದಾರೆ. ನಾನು ಮಧುರವಾದ ಆಲೋಚನೆ, ಮಾತು, ಕಾರ್ಯಗಳನ್ನೇ ಮಾಡುವೆನು.

ನನ್ನನ್ನು ದೇವತೆಗಳು ರಕ್ಷಿಸಲಿ. ಪಿತೃದೇವತೆಗಳು ಈ ಮಾತನ್ನು ಹೇಳಲು ಅನುಮತಿಸಲಿ.



## ॥ ತೃತೀಯೋಽನುವಾಕಃ ॥

ವಸವಸ್ತ್ವಾ ಪ್ರವೃಹಂತು ಗಾಯತ್ರೇಣ ಛಂದಸಾಽಗ್ನೇಃ

ಪ್ರಿಯಂ ಪಾಥ ಉಪೇಹಿ

---

ವಸವಃ । ತ್ವಾ । ಪ್ರೇತಿ । ವೃಹಂತು । ಗಾಯತ್ರೇಣ । ಛಂದಸಾ । ಅಗ್ನೇಃ । ಪ್ರಿಯಮ್ ।

ಪಾಥಃ । ಉಪೇತಿ । ಇಹಿ ।

---

ಎರಡನೆಯ ಅನುವಾಕದಲ್ಲಿ ಉಪಾಕರಣ ಪ್ರತಿಗರಾಂಗಮಂತ್ರಗಳು ಹೇಳಲ್ಪಟ್ಟವು. ಮೂರನೆಯ ಅನುವಾಕದಲ್ಲಿ ಅದಾಭ್ಯ-ಅಂಶುಗ್ರಹಗಳಿಗೆ ಸಂಬಂಧಿಸಿದ ಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ವಸವಸ್ತ್ವಾ...ಉಪೇಹಿ ॥<br>ರುದ್ರಾಸ್ತ್ವಾ...ಉಪೇಹಿ ॥<br>ಆದಿತ್ಯಾಸ್ತ್ವಾ...ಉಪೇಹಿ ॥ | ಬಟ್ಟೆಯಲ್ಲಿ ಕಟ್ಟಿರುವ ಸೋಮಲತೆಯಿಂದ ಮೂರು ಅಂಶಗಳನ್ನು ಬೇರ್ಪಡಿಸಲು |

---

✦[ಎಲೈ! ಸೋಮಭಾಗವೇ!]ತ್ವಾ=ನಿನ್ನನ್ನು; ವಸವಃ=ವಸುಗಳು; ಗಾಯತ್ರೇಣ ಛಂದಸಾ=ಗಾಯತ್ರೀಛಂದಸ್ಸಿನಿಂದ; ಪ್ರ ವೃಹಂತು=ಬೇರ್ಪಡಿಸಲಿ; [ನೀನು] ಅಗ್ನೇಃ=ಅಗ್ನಿದೇವನಿಗೆ; ಪ್ರಿಯಮ್ ಪಾಥಃ=ಪ್ರಿಯವಾದ ಅನ್ನವಾಗುವಿಕೆಯನ್ನು; ಉಪೇಹಿ=ಹೊಂದು.

ರುದ್ರಾಸ್ತ್ವಾ ಪ್ರವೃಹಂತು ತ್ರೈಷ್ಟುಭೇನ

ಛಂದಸೇಂದ್ರಸ್ಯ ಪ್ರಿಯಂ ಪಾಥ ಉಪೇಹ್ಯಾದಿತ್ಯಾಸ್ತ್ವಾ

ಪ್ರವೃಹಂತು ಜಾಗತೇನ ಛಂದಸಾ ವಿಶ್ವೇಷಾಂ

ದೇವಾನಾಂ ಪ್ರಿಯಂ ಪಾಥ ಉಪೇಹಿ

---

ರುದ್ರಾಃ । ತ್ವಾ । ಪ್ರೇತಿ । ವೃಹಂತು । ತ್ರೈಷ್ಟುಭೇನ । ಛಂದಸಾ । ಇಂದ್ರಸ್ಯ । ಪ್ರಿಯಮ್ ।
ಪಾಥಃ । ಉಪೇತಿ । ಇಹಿ । ಆದಿತ್ಯಾಃ । ತ್ವಾ । ಪ್ರೇತಿ । ವೃಹಂತು । ಜಾಗತೇನ ।
ಛಂದಸಾ । ವಿಶ್ವೇಷಾಮ್ । ದೇವಾನಾಮ್ । ಪ್ರಿಯಮ್ । ಪಾಥಃ । ಉಪೇತಿ । ಇಹಿ ।

---

✦[ಎಲೈ! ಸೋಮಭಾಗವೇ!] **ತ್ವಾ**=ನಿನ್ನನ್ನು; **ರುದ್ರಾಃ**=ರುದ್ರರು; **ತ್ರೈಷ್ಟುಭೇನ ಛಂದಸಾ**=ತ್ರಿಷ್ಟುಪ್‌ಛಂದಸ್ಸಿನಿಂದ; **ಪ್ರವೃಹಂತು**=[ಸೋಮಲತಾಸಮೂಹ ದಿಂದ] ಬೇರ್ಪಡಿಸಲಿ; **ಇಂದ್ರಸ್ಯ**=ಇಂದ್ರನಿಗೆ; **ಪ್ರಿಯಮ್ ಪಾಥಃ**=ಇಷ್ಟವಾದ ಹವಿಸ್ಸಾಗುವಿಕೆಯನ್ನು; **ಉಪೇಹಿ**=ಹೊಂದು; ✦[ಎಲೈ! ಸೋಮಭಾಗವೇ!] **ಆದಿತ್ಯಾಃ**=ಆದಿತ್ಯರು; **ತ್ವಾ**=ನಿನ್ನನ್ನು; **ಜಾಗತೇನ ಛಂದಸಾ**=ಜಗತೀಛಂದಸ್ಸಿನಿಂದ; **ಪ್ರವೃಹಂತು**=ರಾಶಿಯಿಂದ ಬೇರೆ ಮಾಡಲಿ; **ವಿಶ್ವೇಷಾಮ್ ದೇವಾನಾಮ್**=ವಿಶ್ವೇದೇವರಿಗೆ; **ಪ್ರಿಯಮ್ ಪಾಥಃ**=ಪ್ರಿಯವಾದ ಹವಿಸ್ಸಾಗುವಿಕೆಯನ್ನು; **ಉಪೇಹಿ**=ಹೊಂದು.

---

ಸೋಮಲತೆಯಿಂದ ಮೂರು ಅಂಶಗಳನ್ನು ಬೇರ್ಪಡಿಸುವಾಗ ವಸುರುದ್ರಾದಿತ್ಯರು ಸೋಮರಾಶಿಯಿಂದ ಈ ಮೂರು ಸೋಮಭಾಗಗಳನ್ನು ಗಾಯತ್ರೀ–ತ್ರಿಷ್ಟುಪ್–ಜಗತೀಛಂದಸ್ಸುಗಳ ಸಹಾಯದಿಂದ ಬೇರ್ಪಡಿಸಲಿ. ಆ ಸೋಮಭಾಗಗಳು ಅಗ್ನಿ–ಇಂದ್ರ–ವಿಶ್ವೇದೇವರಿಗೆ ಹವಿಸ್ಸಾಗಲೆಂದು ಅಧ್ವರ್ಯುವು ಹೇಳುತ್ತಾನೆ.

# ಮಾಂದಾಸು ತೇ ಶುಕ್ರ ಶುಕ್ರಮಾಧೂನೋಮಿ

# ಭಂದನಾಸು ಕೋತನಾಸು

---

ಮಾಂದಾಸು । ತೇ । ಶುಕ್ರ । ಶುಕ್ರಮ್ । ಏತಿ । ಧೂನೋಮಿ । ಭಂದನಾಸು ।

ಕೋತನಾಸು ।

---

| ಮಂತ್ರ | ವಿನಿಯೋಗ |
| --- | --- |
| ೧)ಮಾಂದಾಸು ತೇ....ಆಧೂನೋಮಿ ॥<br>೨)ಭಂದನಾಸು....೩)ಕೋತನಾಸು..<br>೪)ನೂತನಾಸು... ೫)ರೇಶೀಷು...<br>೬)ಮೇಷೀಷು...೭)ವಾಶೀಷು...<br>೮)ವಿಶ್ವಭೃತ್ಸು...೯)ಮಾಧ್ವೀಷು...೧೦)ಕಕುಹಾಸು.<br>೧೧)ಶಕ್ವರೀಷು...೧೨)ಶುಕ್ರಾಸು..ಆಧೂನೋಮಿ ॥ | ಅನುಷಂಗದಿಂದ ಕೂಡಿರುವ ಈ ಹನ್ನೆರಡು ಮಂತ್ರಗಳಿಂದ ಈ ಸೋಮ ಭಾಗಗಳನ್ನು ಹೋತೃಚಮಸದಲ್ಲಿ ಹಾಕಿರುವ ವಸತೀವರೀಜಲಗಳಿಂದ ಅಲ್ಲಾಡಿಸುವುದಕ್ಕಾಗಿ. |

---

✦**ಶುಕ್ರ**=ಪ್ರಕಾಶಮಾನವಾದ ಸೋಮವೇ! **ತೇ**=ನಿನ್ನ; **ಶುಕ್ರಮ್**=ಪ್ರಕಾಶಮಾನವಾದ ಸೋಮಭಾಗವನ್ನು; **ಮಾಂದಾಸು**=ಮೆಲ್ಲನೆ ಹರಿಯುವ ನೀರುಗಳಲ್ಲಿ; **ಆಧೂನೋಮಿ** =ಅಲುಗಾಡಿಸುತ್ತೇನೆ.

✦ಶುಕ್ರ=ಪ್ರಕಾಶಮಾನವಾದ ಸೋಮವೇ! ತೇ ಶುಕ್ರಮ್=ನಿನ್ನ ಪ್ರಕಾಶಮಾನವಾದ ಸೋಮಭಾಗವನ್ನು; ಭಂದನಾಸು=ಕಲ್ಯಾಣಕರವಾದ ನೀರುಗಳಲ್ಲಿ; ಆಧೂನೋಮಿ =ಅಲ್ಲಾಡಿಸುತ್ತೇನೆ.

✦ಶುಕ್ರ=ಪ್ರಕಾಶಮಾನವಾದ ಸೋಮವೇ! ತೇ ಶುಕ್ರಮ್=ಪ್ರಕಾಶಮಾನವಾದ ಸೋಮಭಾಗವನ್ನು; **ಕೋತನಾಸು**=ಜ್ಞಾನಕಾರಿಯಾದ ನೀರುಗಳಲ್ಲಿ; ಆಧೂನೋಮಿ =ಅಲ್ಲಾಡಿಸುತ್ತೇನೆ.

## ನೂತನಾಸು ರೇಶೀಷು ಮೇಷೀಷು ವಾಶೀಷು

## ವಿಶ್ವಭೃತ್ಸು ಮಾಧ್ವೀಷು ಕಕುಹಾಸು

ನೂತನಾಸು । ರೇಶೀಷು । ಮೇಷೀಷು । ವಾಶೀಷು । ವಿಶ್ವಭೃತ್ಸ್ವಿತಿ ವಿಶ್ವಭೃತ್-ಸು ।

ಮಾಧ್ವೀಷು । ಕಕುಹಾಸು ।

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ನೂತನಾಸು**=ಹೊಸದಾದ ನೀರುಗಳಲ್ಲಿ; ಆಧೂನೋಮಿ= ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ರೇಶೀಷು**=ಬೇಗನೇ ಹರಿದು ನೆಲವನ್ನು ಕೊಚ್ಚಿಕೊಂಡು ಹೋಗುವ ನೀರುಗಳಲ್ಲಿ; ಆ ಧೂನೋಮಿ=ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮ ವನ್ನು; **ಮೇಷೀಷು**=ಅನ್ಯೋನ್ಯವಾಗಿ ಸ್ಪರ್ಧಿಸುವ ನೀರುಗಳಲ್ಲಿ; ಆಧೂನೋಮಿ =ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ವಾಶೀಷು**=ಶಬ್ದ ಮಾಡುವ ನೀರುಗಳಲ್ಲಿ; ಆಧೂನೋಮಿ= ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ವಿಶ್ವಭೃತ್ಸು**=ವಿಶ್ವವನ್ನು ಧರಿಸುವ ನೀರುಗಳಲ್ಲಿ; ಆಧೂನೋಮಿ =ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ಮಾಧ್ವೀಷು**=ಮಧುರವಾದ ನೀರುಗಳಲ್ಲಿ (ಹಾಕಿ); ಆಧೂನೋಮಿ =ಅಲ್ಲಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಲತಾಭಾಗವಾದ ಸೋಮವನ್ನು; **ಕಕುಹಾಸು**=ಪ್ರಧಾನಭೂತವಾದ ನೀರುಗಳಲ್ಲಿ; ಆಧೂನೋಮಿ= ಸುತ್ತಿಸುತ್ತೇನೆ.

**ಶಕ್ವರೀಷು [(೫)] ಶುಕ್ರಾಸು ತೇ ಶುಕ್ರ**

**ಶುಕ್ರಮಾಧೂನೋಮಿ ಶುಕ್ರಂ ತೇ ಶುಕ್ರೇಣ**

**ಗೃಹ್ಣಾಮ್ಯಹ್ನೋ ರೂಪೇಣ ಸೂರ್ಯಸ್ಯ ರಶ್ಮಿಭಿಃ ॥**

---

ಶಕ್ವರೀಷು ।[(೫)] ಶುಕ್ರಾಸು । ತೇ । ಶುಕ್ರ । ಶುಕ್ರಮ್ । ಏತಿ । ಧೂನೋಮಿ । ಶುಕ್ರಮ್ । ತೇ । ಶುಕ್ರೇಣ । ಗೃಹ್ಣಾಮಿ । ಅಹ್ನಃ । ರೂಪೇಣ । ಸೂರ್ಯಸ್ಯ । ರಶ್ಮಿಭಿರಿತಿ ರಶ್ಮಿ-ಭಿಃ ॥

---

| ಮಂತ್ರ | ವಿನಿಯೋಗ |
|---|---|
| **ಶುಕ್ರಂ ತೇ...ರಶ್ಮಿಭಿಃ ॥** | ಅಂಶುವನ್ನಾಗಲೀ ಅದಾಭ್ಯಗ್ರಹವನ್ನಾಗಲೀ ತೆಗೆದುಕೊಳ್ಳಲು. ಅಂಶುಗ್ರಹಣವಾದರೆ ಹಾಲು/ಮೊಸರು/ನಿಗ್ರಾಭ್ಯ (ಜಲವಿಶೇಷ) ಇವುಗಳಲ್ಲಿ ಒಂದರಿಂದ ಮೊದಲು ತೆಗೆದುಕೊಳ್ಳಲು. |

---

✦ಶುಕ್ರ ತೇ ಶುಕ್ರಮ್=ಪ್ರಕಾಶಮಾನವಾದ ಸೋಮವೇ! ನಿನ್ನ ಲತಾಭಾಗವಾದ ಸೋಮವನ್ನು; **ಶಕ್ವರೀಷು**=ಶಕ್ತಿಯುಳ್ಳ ಜಲಗಳಲ್ಲಿ; ಆಧೂನೋಮಿ=ಸುತ್ತಾಡಿಸುತ್ತೇನೆ.

✦ಶುಕ್ರ ತೇ ಶುಕ್ರಮ್=ಎಲೈ! ಪ್ರಕಾಶಮಾನವಾದ ಸೋಮವೇ! ನಿನ್ನ ಭಾಗವಾದ ಸೋಮವನ್ನು; **ಶುಕ್ರಾಸು**=ಪ್ರಕಾಶಮಾನವಾದ/ನಿರ್ಮಲವಾದ ಜಲಗಳಲ್ಲಿ; ಆಧೂನೋಮಿ=ಹಾಕಿ ಸುತ್ತಾಡಿಸುವೆನು.

✦[ಎಲೈ! ದಧಿದ್ರವ್ಯವೇ!] **ತೇ**=ನಿನ್ನ; **ಶುಕ್ರಮ್**=ಸಾರವನ್ನು; **ಶುಕ್ರೇಣ**=ಸೋಮಾದಿಸಾರದೊಡನೆ; **ಅಹ್ನಃ ರೂಪೇಣ**=ಹಗಲಿನ ಸ್ವರೂಪವಾದ; **ಸೂರ್ಯಸ್ಯ ರಶ್ಮಿಭಿಃ**=ಸೂರ್ಯನ ಕಿರಣಗಳಿಂದ; **ಗೃಹ್ಣಾಮಿ**=ತೆಗೆದುಕೊಳ್ಳುತ್ತೇನೆ.

ಆಽಸ್ಮಿನ್ನುಗ್ರಾ ಅಚುಚ್ಯವುರ್ದಿವೋ ಧಾರಾ ಅಸಶ್ಚತ ॥

ಕಕುಹಗ್ಂ ರೂಪಂ ವೃಷಭಸ್ಯ ರೋಚತೇ ಬೃಹತ್ಸೋಮ

ಸ್ಸೋಮಸ್ಯ ಪುರೋಗಾಶ್ಶುಕ್ರಶ್ಶುಕ್ರಸ್ಯ ಪುರೋಗಾಃ ॥

---

ಏತಿ । ಅಸ್ಮಿನ್ನ್ । ಉಗ್ರಾಃ । ಅಚುಚ್ಯವುಃ । ದಿವಃ । ಧಾರಾಃ । ಅಸಶ್ಚತ ॥ ಕಕುಹಮ್ ।

ರೂಪಮ್ । ವೃಷಭಸ್ಯ । ರೋಚತೇ । ಬೃಹತ್ । ಸೋಮಃ । ಸೋಮಸ್ಯ ।

ಪುರೋಗಾ ಇತಿ ಪುರಃ–ಗಾಃ । ಶುಕ್ರಃ । ಶುಕ್ರಸ್ಯ । ಪುರೋಗಾ ಇತಿ ಪುರಃ–ಗಾಃ ॥

---

| ಮಂತ್ರ | ವಿನಿಯೋಗ |
|---|---|
| ಆಸ್ಮಿನ್ನುಗ್ರಾ...ಅಸಶ್ಚತ ॥ | ಅಂಶುಗ್ರಹವನ್ನು ತೆಗೆದುಕೊಳ್ಳಲು |
| ಕಕುಹಗ್ಂ...ಪುರೋಗಾಃ ॥ | ಅಂಶುಗ್ರಹವನ್ನು ತೆಗೆದುಕೊಂಡು ಒಯ್ಯಲು |

---

✦**ಅಸ್ಮಿನ್**=ಈ ಪಾತ್ರದಲ್ಲಿ; **ಉಗ್ರಾಃ**=ತೀವ್ರವಾದ; **ಧಾರಾಃ**=ಸೋಮರಸದ ಧಾರೆಗಳು; **ದಿವಃ**=ಸ್ವರ್ಗದ ದೆಸೆಯಿಂದ **ಆ ಅಚುಚ್ಯವುಃ**=ಬಂದು ಸುತ್ತಲೂ ಬಿದ್ದವು; **ಅಸಶ್ಚತ**=ಆ ಧಾರೆಗಳು ಪಾತ್ರದಲ್ಲಿ ಸೇರಿದವು; ✦**ವೃಷಭಸ್ಯ**= ಮಳೆಯನ್ನು ಸುರಿಸುವ ಇಂದ್ರನ; **ಬೃಹತ್**=ಪ್ರೌಢವಾದ; **ಕಕುಹಮ್**=ಪ್ರಧಾನವಾದ; **ರೂಪಮ್**=ವೃಷ್ಟ್ಯಾತ್ಮಕವಾದ ರೂಪವು; **ರೋಚತೇ**=ಪ್ರಕಾಶಿಸುತ್ತದೆ; **ಸೋಮಃ**=ವಲ್ಲಿ ರೂಪವಾದ ಸೋಮವು; **ಸೋಮಸ್ಯ**=ದೇವತಾರೂಪನಾದ ಸೋಮರಾಜನಿಗೆ; **ಪುರೋಗಾಃ**=ಅಗ್ರಗಾಮಿಯಾಗಿದೆ; **ಶುಕ್ರಃ**=ಪ್ರಕಾಶಮಾನವಾದ ಸೋಮರಸವು; **ಶುಕ್ರಸ್ಯ**=ಪ್ರಕಾಶಮಾನನಾದ ಇಂದ್ರನಿಗೆ; **ಪುರೋಗಾಃ**=ಮುಂದೆ ಹೋಗುವುದಾಗಿದೆ.

---

**ಹೋತೃಚಮಸದಲ್ಲಿರುವ ನೀರಿನಲ್ಲಿ ಪ್ರತ್ಯೇಕಿಸಿರುವ ಸೋಮಭಾಗಗಳನ್ನು ಹಾಕಿ, ನಾಲ್ಕು, ಐದು ಅಥವಾ ಏಳು ಬಾರಿ ಸುತ್ತಿಸಬೇಕು.**

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ ತಸ್ಮೈ ತೇ**

**ಸೋಮ ಸೋಮಾಯ ಸ್ವಾಹೋ-**

---

ಯತ್ । ತೇ । ಸೋಮ । ಅದಾಭ್ಯಮ್ । ನಾಮ । ಜಾಗೃವಿ । ತಸ್ಮೈ । ತೇ ।

ಸೋಮ । ಸೋಮಾಯ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| ಯತ್ತೇ...ಸ್ವಾಹಾ ॥ | ಹೋಮವನ್ನು ಮಾಡಲು |

---

✦ಸೋಮ=ಎಲೈ! ಸೋಮರಾಜನೇ! ತೇ=ನಿನ್ನ; ಯತ್=ಯಾವ; ಅದಾಭ್ಯಮ್=ಯಾರಿಂದಲೂ ತಿರಸ್ಕರಿಸಲು ಅಸಾಧ್ಯವಾದ; ನಾಮ=ಹೆಸರು; ಜಾಗೃವಿ=ಜಾಗೃತವಾಗಿ/ಪ್ರಸಿದ್ಧವಾಗಿ ಇದೆಯೋ; ಸೋಮ=ಸೋಮದೇವನೇ! ತಸ್ಮೈ ತೇ ಸೋಮಾಯ=ಆ ಸೋಮರಾಜನಾದ ನಿನಗೆ; ಸ್ವಾಹಾ=ಇದು ಹುತವಾಗಲಿ.

---

ಹೀಗೆ ಸುತ್ತಿಸುವಾಗ ಅನುಷಂಗಸಹಿತವಾಗಿ **'ಮಾಂದಾಃ'** ಮುಂತಾದ ಹನ್ನೆರಡು ಮಂತ್ರಗಳನ್ನು ಹೇಳುತ್ತಾನೆ. ಮಾಂದಾ ಮುಂತಾದವುಗಳು ನೀರಿನ ಗುಹ್ಯನಾಮಗಳೆಂದು ಹೇಳುತ್ತಾರೆ. ನೀರಿನ ವಿವಿಧರೂಪಗಳನ್ನು ಹೇಳಲಾಗಿದೆ. ನೀರಿನಿಂದ ಉಂಟಾಗುವ ಫಲಗಳನ್ನೂ ಹೇಳಲಾಗಿದೆ. ನೀರಿನ ಸರ್ವತೋಮುಖತ್ವವನ್ನೂ ಶ್ರುತಿಯು ಹೇಳುತ್ತದೆ.

ಎಲೈ! ದಧಿದ್ರವ್ಯವೇ! ನಿನ್ನನ್ನು ಸೋಮಾದಿಸಾರದೊಡನೆ ಗ್ರಹಿಸುವೆನು. ಇಲ್ಲಿ ಅಂಶು ಎಂಬುದನ್ನು-ಕಿರಣ-ಅಂಶ ಎರಡಕ್ಕೂ ಸಮಾನಶಬ್ದವಾಗಿರುವುದರಿಂದ ನಾಮ ಸಾಮ್ಯದಿಂದ ಸೂರ್ಯನ-ರಶ್ಮಿಯೆಂದು ವರ್ಣಿಸಲಾಗಿದೆ.

ಮಿಶ್ರರ ಮತದಂತೆ ಈ ಮಂತ್ರದ ವಿನಿಯೋಗವು ಬೇರೆ ಇದೆ. ಅದಾಭ್ಯಪಾತ್ರದಲ್ಲಿ ಅಂಶುಗಳನ್ನು ಸಂಗ್ರಹಿಸಲು ಈ ಮಂತ್ರದ ವಿನಿಯೋಗವೆಂದು ಅವರ ಮತ.

ಈ ಅಂಶುಗ್ರಹದ ಪಾತ್ರೆಯಲ್ಲಿ ಸ್ವರ್ಗದಿಂದಲೇ ಸೋಮರಸದ ಧಾರೆಗಳು ಬಂದು ಸುತ್ತಲೂ ಬಿದ್ದಿವೆ. ಅವೆಲ್ಲವೂ ಈ ಪಾತ್ರೆಯಲ್ಲಿ ಸೇರಿವೆ.

ಶಿಕ್ತ್ವಂ ದೇವ ಸೋಮ ಗಾಯತ್ರೇಣ ಛಂದಸಾಽಗ್ನೇಃ

[(೬)]ಪ್ರಿಯಂ ಪಾಥೋ ಅಪೀಹಿ ವಶೀ ತ್ವಂ ದೇವ

ಸೋಮ ತ್ರೈಷ್ಟುಭೇನ ಛಂದಸೇಂದ್ರಸ್ಯ ಪ್ರಿಯಂ

ಪಾಥೋ ಅಪೀಹ್ಯ-

---

ಉಶಿಕ್ । ತ್ವಮ್ । ದೇವ । ಸೋಮ । ಗಾಯತ್ರೇಣ । ಛಂದಸಾ । ಅಗ್ನೇಃ । (೬) ।

ಪ್ರಿಯಮ್ । ಪಾಥಃ । ಅಪೀತಿ । ಇಹಿ । ವಶೀ । ತ್ವಮ್ । ದೇವ । ಸೋಮ ।

ತ್ರೈಷ್ಟುಭೇನ । ಛಂದಸಾ । ಇಂದ್ರಸ್ಯ । ಪ್ರಿಯಮ್ । ಪಾಥಃ । ಅಪೀತಿ । ಇಹಿ ।

---

| ಮಂತ್ರ | ವಿನಿಯೋಗ |
|---|---|
| ಉಶಿಕ್ತ್ವಂ..ಅಪೀಹಿ ॥ | ಬೇರ್ಪಡಿಸಿರುವ ಸೋಮಭಾಗವನ್ನು ಮಹಾಭಿಷವಕ್ಕಾಗಿ ಪ್ರಾತಃಸವನದಲ್ಲಿ ಸೇರಿಸುವುದಕ್ಕಾಗಿ |
| ವಶೀ...ಅಪೀಹಿ ॥ | ಮಾಧ್ಯಂದಿನಸವನದಲ್ಲಿ ಸೇರಿಸಲು |

✦**ದೇವ ಸೋಮ**=ಎಲೈ! ಸೋಮದೇವನೇ! **ತ್ವಮ್**=ನೀನು; **ಉಶಿಕ್**=ಎಲ್ಲರಿಗೂ ಮನೋಹರನಾಗಿರುವೆ; **ಗಾಯತ್ರೇಣ ಛಂದಸಾ**=ಗಾಯತ್ರೀಛಂದಸ್ಸಿನಿಂದ [ಸೋಮರಾಶಿಯಿಂದ ಬೇರ್ಪಡಿಸಲ್ಪಟ್ಟಿರುವೆ. ಅಂತಹ ಪ್ರಥಮಾಂಶುಸ್ವರೂಪನಾದ ನೀನು] **ಅಪಿ**=ಮತ್ತೆ; **ಅಗ್ನೇಃ ಪ್ರಿಯಮ್ ಪಾಥಃ**=[ಪ್ರಾತಃಸವನದಲ್ಲಿ] ಅಗ್ನಿಗೆ ಇಷ್ಟವಾದ ಅನ್ನ[ಹವ್ಯ]ವಾಗುವಿಕೆಯನ್ನು; **ಇಹಿ**=ಹೊಂದು; ✦**ಸೋಮ ದೇವ**=ದೇವನಾದ ಸೋಮನೇ! **ವಶೀ**=ವಿಶ್ವವನ್ನು ವಶದಲ್ಲಿಟ್ಟುಕೊಂಡಿರುವ; **ತ್ವಮ್**=[ಸೋಮದ್ವಿತೀಯಾಂಶವಾದ] ನೀನು; **ತ್ರೈಷ್ಟುಭೇನ ಛಂದಸಾ**=ತ್ರಿಷ್ಟುಪ್‌ಛಂದಸ್ಸಿನಿಂದ [ಸೋಮರಾಶಿಯಿಂದ ಬೇರ್ಪಡಿಸಲ್ಪಟ್ಟಿರುವೆ.] **ಅಪಿ**=ಮತ್ತೆ; **ಇಂದ್ರಸ್ಯ ಪ್ರಿಯಮ್ ಪಾಥಃ**=[ಮಾಧ್ಯಂದಿನಸವನದಲ್ಲಿ]ಇಂದ್ರನಿಗೆ ಪ್ರಿಯವಾದ ಅನ್ನವಾಗುವಿಕೆಯನ್ನು; **ಇಹಿ**=ಹೊಂದು;

# ಸ್ಮತ್ಸಖಾ ತ್ವಂ ದೇವ ಸೋಮ ಜಾಗತೇನ ಛಂದಸಾ
# ವಿಶ್ವೇಷಾಂ ದೇವಾನಾಂ ಪ್ರಿಯಂ ಪಾಥೋ ಅಪೀ-

---

ಅಸ್ಮತ್ಸಖೇತ್ಯಸ್ಮತ್-ಸಖಾ । ತ್ವಮ್ । ದೇವ । ಸೋಮ । ಜಾಗತೇನ । ಛಂದಸಾ ।
ವಿಶ್ವೇಷಾಮ್ । ದೇವಾನಾಮ್ । ಪ್ರಿಯಮ್ । ಪಾಥಃ । ಅಪೀತಿ । ಇಹಿ ।

---

| ಮಂತ್ರ | ವಿನಿಯೋಗ |
| --- | --- |
| ಅಸ್ಮತ್ಸಖಾ...ಅಪೀಹಿ ॥ | ತೃತೀಯಸವನದಲ್ಲಿ ಸೇರಿಸಲು |

---

✦**ದೇವ ಸೋಮ**=ದೇವನಾದ ಸೋಮನೇ! **ತ್ವಮ್ ಅಸ್ಮತ್ಸಖಾ**=[ಸೋಮತೃತೀಯಾಂಶವಾದ]ನೀನು ನಮಗೆ ಇಷ್ಟಗಳನ್ನು ಕೊಡುವ ಗೆಳೆಯನಾಗಿರುವೆ; **ಜಾಗತೇನ ಛಂದಸಾ**=ಜಗತೀಛಂದಸ್ಸಿನಿಂದ [ಸೋಮರಾಶಿಯಿಂದ ಬೇರ್ಪಟ್ಟಿರುವೆ] [ಇಂತಹ ತೃತೀಯಾಂಶವಾದ ನೀನು ತೃತೀಯಸವನದಲ್ಲಿ] **ವಿಶ್ವೇಷಾಮ್ ದೇವಾನಾಮ್**=ವಿಶ್ವೇದೇವರಿಗೆ; **ಪ್ರಿಯಮ್ ಪಾಥಃ**=ಪ್ರಿಯವಾದ ಅನ್ನ/ಹವ್ಯವಾಗುವಿಕೆಯನ್ನು; **ಅಪಿ ಇಹಿ**=ಮತ್ತೆ ಹೊಂದು.

---

ಮಳೆಯನ್ನು ಸುರಿಸುವ ಇಂದ್ರನ ಪ್ರಧಾನವಾದ ರೂಪವೇ ವೃಷ್ಟಿಯಾಗಿದೆ. ಬಳ್ಳಿಯಾಗಿರುವ ಈ ಸೋಮವು ಸೋಮರಾಜನಿಗೂ ಇಂದ್ರನಿಗೂ ಮನ್ನಡೆಯುವಂತೆ ಇದೆ.

ಸೋಮದೇವನೇ! ನಿನ್ನ ಈ ಹೆಸರನ್ನು ಯಾರೂ ತಿರಸ್ಕರಿಸಲು ಸಾಧ್ಯವಿಲ್ಲದಂತೆ ನಿನ್ನ ಆ ಹೆಸರು ಪ್ರಕಾಶಮಾನವಾಗಿದೆ. ಅಂತಹ ಸೋಮನೆಂಬ ಹೆಸರಿನವನಾದ ನಿನಗೆ ಇದು ಚೆನ್ನಾಗಿ ಹುತವಾಗಲಿ.

ಹೇ! ಸೋಮದೇವನೇ! ನೀನು ಮನೋಹರನಾಗಿರುವೆ. ಪ್ರಾತಃಸವನದಲ್ಲಿ ಅಗ್ನಿಗೆ ಇಷ್ಟವಾದ ಹವ್ಯವಾಗುವಿಕೆಯನ್ನು ಎಂದೂ, ನೀನು ವಿಶ್ವವನ್ನು ವಶದಲ್ಲಿಟ್ಟುಕೊಂಡಿರುವೆಯೆಂದು ಮಾಧ್ಯಂದಿನಸವನದಲ್ಲಿಯೂ, ನಮ್ಮ ಗೆಳೆಯನಾದ ನೀನು

**ಹ್ಯಾ ನಃ ಪ್ರಾಣ ಏತು ಪರಾವತ ಆಽಂತರಿಕ್ಷಾದ್ದಿವಸ್ಪರಿ ।**

**ಆಯುಃ ಪೃಥಿವ್ಯಾ ಅಧ್ಯಮೃತಮಸಿ ಪ್ರಾಣಾಯ ತ್ವಾ ॥**

---

ಏತಿ । ನಃ । ಪ್ರಾಣ ಇತಿ ಪ್ರ–ಅನಃ । ಏತು । ಪರಾವತ ಇತಿ ಪರಾ–ವತಃ । ಏತಿ ।

ಅಂತರಿಕ್ಷಾತ್ । ದಿವಃ । ಪರಿ ॥ ಆಯುಃ । ಪೃಥಿವ್ಯಾಃ । ಅಧೀತಿ । ಅಮೃತಮ್ । ಅಸಿ ।

ಪ್ರಾಣಾಯೇತಿ ಪ್ರ–ಅನಾಯ । ತ್ವಾ ॥

---

| ಮಂತ್ರ | ವಿನಿಯೋಗ |
| --- | --- |
| **ಆ ನಃ ಪ್ರಾಣ...ಪ್ರಾಣಾಯ ತ್ವಾ ॥** | ಅಧ್ವರ್ಯು–ಯಜಮಾನರು ಶತಮಾನಹಿರಣ್ಯವನ್ನು ಮೂಸಿ ನೋಡಲು<br>ಅಂಶುಹೋಮಾನಂತರ ಹಿರಣ್ಯವನ್ನು ಮೂಸಿ ನೋಡಲು–ಭ.ಭಾ.ಭಾ |

---

✦**ಪರಾವತಃ**=ದೂರಪ್ರದೇಶದಿಂದಲೂ; **ಪ್ರಾಣಃ**=ಪ್ರಾಣವು; **ನಃ**=ನಮ್ಮನ್ನು ಕುರಿತು; **ಆ ಏತು**=ಬರಲಿ; **ಅಂತರಿಕ್ಷಾತ್**=ಅಂತರಿಕ್ಷದಿಂದ; ಆ ನಃ ಏತು=ನಮ್ಮನ್ನು ಕುರಿತು ಬರಲಿ. **ದಿವಃ ಪರಿ** ಆ ಏತು=ಸ್ವರ್ಗದ ಮೇಲಿನ ಪ್ರದೇಶದಲ್ಲಿದ್ದರೂ ಬರಲಿ; [ಎಲೈ! ಹಿರಣ್ಯವೇ! ನೀನು] **ಪೃಥಿವ್ಯಾಃ ಅಧಿ**=ಭೂಮಿಯ ಮೇಲೆ; **ಆಯುಃ**= ಆಯುಸ್ಸನ್ನುಂಟುಮಾಡುವವನೂ; **ಅಮೃತಮ್**=ಸಾವಿಲ್ಲದಿರುವುದಕ್ಕೆ ಕಾರಣನೂ /ಸಾವಿಲ್ಲದವನೂ; **ಅಸಿ**=ಆಗಿರುತ್ತೀಯೆ; **ತ್ವಾ**=ನಿನ್ನನ್ನು; **ಪ್ರಾಣಾಯ**=ಪ್ರಾಣಸ್ಥಿತಿಗಾಗಿ; ಜಿಘ್ರಾಮಿ=ಮೂಸಿ ನೋಡುವೆನು.

---

**ವಿಶ್ವೇದೇವರಿಗೆ ಪ್ರಿಯನಾದವನೆಂದು ತೃತೀಯಸವನದಲ್ಲಿಯೂ ಹೇಳಿ, ಗುರುತಿಸಿ ಬೇರೆ ಬೇರೆಯಾಗಿ ಇಟ್ಟಿರುವ ಮೂರು ಭಾಗಗಳನ್ನು ಮೂರು ಸವನಗಳ ಮಹಾಭಿಷವದಲ್ಲಿ ಸೇರಿಸಬೇಕು.**

ಇಂದ್ರಾಗ್ನೀ ಮೇ ವರ್ಚಃ ಕೃಣುತಾಂ ವರ್ಚಸ್ಸೋಮೋ ಬೃಹಸ್ಪತಿಃ । ವರ್ಚೋ ಮೇ ವಿಶ್ವೇ ದೇವಾ ವರ್ಚೋ ಮೇ ಧತ್ತಮಶ್ವಿನಾ ॥

ಇಂದ್ರಾಗ್ನೀ ಇತೀಂದ್ರ-ಅಗ್ನೀ । ಮೇ । ವರ್ಚಃ । ಕೃಣುತಾಮ್ । ವರ್ಚಃ । ಸೋಮಃ । ಬೃಹಸ್ಪತಿಃ ॥ ವರ್ಚಃ । ಮೇ । ವಿಶ್ವೇ । ದೇವಾಃ । ವರ್ಚಃ । ಮೇ । ಧತ್ತಮ್ । ಅಶ್ವಿನಾ ॥

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನೀ ಮೇ...ಮಶ್ವಿನಾ ॥ | ಅಧ್ವರ್ಯುವು ನೀರನ್ನು ಸ್ಪರ್ಶಿಸಲು |

✦ಇಂದ್ರಾಗ್ನೀ=ಇಂದ್ರಾಗ್ನಿದೇವತೆಗಳು; ಮೇ=ನನಗೆ; ವರ್ಚಃ ಕೃಣುತಾಮ್= ಬಲವನ್ನು ಉಂಟು ಮಾಡಲಿ; ಸೋಮಃ==ಸೋಮದೇವನೂ; ಬೃಹಸ್ಪತಿಃ= ಬೃಹಸ್ಪತಿಯೂ; ವರ್ಚಃ=ಬಲವನ್ನು; ಕೃಣುತಾಮ್=ಉಂಟುಮಾಡಲಿ;ವಿಶ್ವೇ ದೇವಾಃ=ವಿಶ್ವೇ ದೇವತೆಗಳೂ; ಮೇ=ನನಗೆ; ವರ್ಚಃ=ಬಲವನ್ನು; ಕೃಣ್ವಂತು= ಉಂಟು ಮಾಡಲಿ; ಅಶ್ವಿನಾ=ಅಶ್ವಿನೀದೇವತೆಗಳು; ಮೇ=ನನಗೆ; ವರ್ಚಃ ಧತ್ತಮ್ =ಬಲವನ್ನು ನೆಲೆಗೊಳಿಸಲಿ.

ಅಧ್ವರ್ಯುವು ಅಗ್ಂಶುಗ್ರಹವನ್ನು ತೆಗೆದುಕೊಳ್ಳುವಾಗ ಮನಸ್ಸಿನಿಂದ ವಾಮದೇವ್ಯಸಾಮವನ್ನು ಗಾನ ಮಾಡುತ್ತಾ ಉಸಿರನ್ನು ಬಿಡದಂತೆ ತೆಗೆದು ಕೊಳ್ಳಬೇಕು. ಮಧ್ಯದಲ್ಲಿ ಉಸಿರನ್ನು ಬಿಟ್ಟರೆ ಅಧ್ವರ್ಯು ಮತ್ತು ಯಜಮಾನರು ಶತಮಾನಹಿರಣ್ಯವನ್ನು ಆಘ್ರಾಣಿಸಬೇಕು.

ಮಧ್ಯದಲ್ಲಿ ಉಸಿರು ಬಿಡುವುದರಿಂದ ಪ್ರಾಣಕ್ಕೆ ಹಾನಿಯಾಯಿತು. ಆಯುಸ್ಸಿಗೆ ಕಾರಣವಾದ, ಅಮೃತದಂತೆ ಇರುವ ಹಿರಣ್ಯವನ್ನು ಮೂಸಿ ನೋಡುವುದರಿಂದ ಮತ್ತೆ

ದಧನ್ವೇ ವಾ ಯದೀಮನು ವೋಚದ್ಬ್ರಹ್ಮಾಣಿ ವೇರು ತತ್ ।

ಪರಿ ವಿಶ್ವಾನಿ ಕಾವ್ಯಾ ನೇಮಿಶ್ಚಕ್ರಮಿವಾಭವತ್ ॥೭–3॥

ಶಕ್ವರೀಷ್ವಗ್ನೇರ್ಬೃಹಸ್ಪತಿಃ ಪಂಚವಿಗ್ಂಶತಿಶ್ಚ ॥

---

ದಧನ್ವೇ । ವಾ । ಯತ್ । ಈಮ್ । ಅನ್ವಿತಿ । ವೋಚತ್ । ಬ್ರಹ್ಮಾಣಿ । ವೇಃ । ಉ ।

ತತ್ ॥ ಪರೀತಿ । ವಿಶ್ವಾನಿ । ಕಾವ್ಯಾ । ನೇಮಿಃ । ಚಕ್ರಮ್ । ಇವ । ಅಭವತ್ ॥೭॥

---

| ಮಂತ್ರ | ವಿನಿಯೋಗ |
|---|---|
| ದಧನ್ವೇ ವಾ...ಅಭವತ್ ॥ | *ಪ್ರಜಾಪತಿದೇವತೆಗೆ ಹೋಮವನ್ನು ಅನುಷ್ಠಿಸಲು |

---

✦**ವೇಃ**=ಹೊಂದಬೇಕಾದ ಯಜ್ಞದ; **ಬ್ರಹ್ಮಾಣಿ**=ವ್ಯಾಪಕವಾಗಿರುವ ದೀಕ್ಷಾದ್ಯಂಗಗಳನ್ನು; **ಅನು**=ಅನುಕ್ರಮವಾಗಿ; **ವೋಚತ್**=ವೇದವು ಹೇಳಿದೆ. **ವಾ**=ಮತ್ತು; **ಯತ್ ಈಮ್ ಅಸ್ತಿ**=ಯಾವುದು ಹೀಗೆ ಇದೆಯೋ; **ತತ್ ಉ**=ಅದನ್ನೂ; **ದಧನ್ವೇ**=ನಾನು ಮನಸ್ಸಿನಲ್ಲಿ ಧರಿಸಿರುತ್ತೇನೆ/ಮರೆತಿಲ್ಲ; [ಯಜ್ಞವು]**ಕಾವ್ಯಾ ವಿಶ್ವಾನಿ**= ಕಾವ್ಯದಂತೆ ಮನೋಹರವಾಗಿರುವ ಎಲ್ಲ ಅಂಗಗಳನ್ನೂ/ಫಲಗಳನ್ನೂ; **ನೇಮಿಃ ಚಕ್ರಮ್ ಇವ**=ಚಕ್ರದ ಪಟ್ಟಿಯು ಚಕ್ರವನ್ನು ಹೇಗೋ ಹಾಗೆ; **ಪರಿ ಅಭವತ್**=ಸುತ್ತಲೂ ವ್ಯಾಪಿಸಿದೆ/ಹೇಳಿದೆ.

---

ಪ್ರಾಣವು ನೆಲೆಗೊಳ್ಳುತ್ತದೆ ಎಂದು ತಾತ್ಪರ್ಯ.

ಈ ಉದಕಸ್ಪರ್ಶದಿಂದ ಇಂದ್ರಾಗ್ನಿಗಳೂ, ಸೋಮ–ಬೃಹಸ್ಪತಿಗಳೂ ವಿಶ್ವೇದೇವರೂ ಅಶ್ವಿನೀದೇವತೆಗಳೂ ನನಗೆ ಬಲವನ್ನು ಕೊಡಲಿ. ಅದಕ್ಕಾಗಿ ಉದಕಸ್ಪರ್ಶವನ್ನು ಮಾಡುತ್ತೇನೆ.

---

*ಯಾವ ದೇವತೆಯನ್ನೂ ಈ ಮಂತ್ರದಲ್ಲಿ ಸ್ಪಷ್ಟವಾಗಿ ಹೇಳದಿರುವುದರಿಂದ 'ಅನಿರುಕ್ತಃ ಪ್ರಜಾಪತಿಃ' ಎಂಬಂತೆ ಮಂತ್ರ–ಹೋಮಗಳೆರಡೂ ಪ್ರಜಾಪತಿದೇವತಾಕವಾಗಿವೆ.

ಈ ಮಂತ್ರದಲ್ಲಿ ದೇವತಾವಾಚಕಶಬ್ದವು ಸ್ಪಷ್ಟವಾಗಿಲ್ಲವಾದುದರಿಂದ ಇದು ಪ್ರಜಾಪತಿದೇವತಾಕವಾಗಿದೆ.

ವೇದವು ದೀಕ್ಷಾದ್ಯಂಗಗಳನ್ನು ಅನುಕ್ರಮವಾಗಿ ಹೇಳಿದೆ. ನಾನು ಅದನ್ನು ಹಾಗೆಯೇ ಧರಿಸಿದ್ದೇನೆ. ಮರೆತಿಲ್ಲ. ಯಜ್ಞವು ಕಾವ್ಯದಂತೆ ಮನೋಹರವಾದ ಎಲ್ಲ ಅಂಗಗಳನ್ನೂ, ಫಲಗಳನ್ನೂ ಚಕ್ರದ ಪಟ್ಟಿಯು ಚಕ್ರವನ್ನು ವ್ಯಾಪಿಸಿರುವಂತೆ ವ್ಯಾಪಿಸಿ ಹೇಳಿದೆ.

ಇಂತಹ ವೇದಪ್ರತಿಪಾದ್ಯನಾದ ಪ್ರಜಾಪತಿಗೆ ಇದು ಹುತವಾಗಲಿ.

---

## ವಿನಿಯೋಗಸಂಗ್ರಹ

1-3ವಸ ತ್ರಿಭಿರ್ಗ್ರಹೀತವ್ಯಾ ನದ್ಧಸೋಮಾಂಶವಸ್ತ್ರಯಃ ।
4-15ಮಾಂದಾ ದ್ವಾದಶ ಮಂತ್ರಾಸ್ತೈಶ್ಚಮಸಸ್ಥಾ ಅಪೋಽಂಶುಭಿಃ ॥
ಆಧೂನೋತ್ಯಥ ಶುಕ್ರಂ16 ತೇಽದಾಭ್ಯಪಾತ್ರೇ ದಧಿಗ್ರಹಃ ।
17ಆಽಸ್ಮಿನ್ನದಾಭ್ಯಮಾದತ್ತೇ 18ಕಕುಹಂ ಸೋಽಪನೀಯತೇ ॥
19ಯತ್ತೇ ಜುಹೋತ್ಯುಶಿಕ್20-22 ಪ್ರೋಕ್ತಾನಂಶೂನಭಿಷವತ್ರಯೇ ।
ತ್ರಿಭಿಃ ಸಂಸೃಜತೇ ಹ್ಯಾ ನಃ23 ಸ್ವರ್ಣೋಽಪರಿ ಸಮುಚ್ಛ್ರಯೇತ್ ॥
24ಇಂದ್ರಾ ಸ್ಪೃಷ್ಟ್ವೋದಕಂ ಹೋಮೋ 25ದಧನ್ವೇ ಪಂಚವಿಂಶತಿಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–25

## ॥ ಚತುರ್ಥೋಽನುವಾಕಃ ॥

ಏತದ್ವಾ ಅಪಾಂ ನಾಮಧೇಯಂ ಗುಹ್ಯಂ ಯದಾಧಾವಾ

ಮಾಂದಾಸು ತೇ ಶುಕ್ರ ಶುಕ್ರಮಾಧೂನೋಮೀತ್ಯಾಹಾ

---

ಏತತ್ । ವೈ । ಅಪಾಮ್ । ನಾಮಧೇಯಮಿತಿ ನಾಮ-ಧೇಯಮ್ । ಗುಹ್ಯಮ್ ।

ಯತ್ । ಆಧಾವಾ ಇತ್ಯಾ-ಧಾವಾಃ । ಮಾಂದಾಸು । ತೇ । ಶುಕ್ರ । ಶುಕ್ರಮ್ । ಏತಿ ।

ಧೂನೋಮಿ । ಇತಿ । ಆಹ ।

---

ಮೂರನೆಯ ಅನುವಾಕದಲ್ಲಿ ಅದಾಭ್ಯ ಮತ್ತು ಅಂಶುಗ್ರಹಕ್ಕಾಗಿ ಮಂತ್ರಗಳು ಹೇಳಲ್ಪಟ್ಟಿವೆ. ಈ ನಾಲ್ಕನೆಯ ಅನುವಾಕದಲ್ಲಿ ಅವುಗಳ ಬ್ರಾಹ್ಮಣವು ಹೇಳಲ್ಪಟ್ಟಿದೆ.

---

### 'ಮಾಂದಾಸು' ಮುಂತಾದ ಮಂತ್ರಗಳ ತಾತ್ಪರ್ಯ

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಆಧಾವಾಃ | 'ಮಾಂದಾಃ' ಮೊದಲಾದ ಆಧಾವನಾಮಗಳು ಯಾವುವುಂಟೋ |
| ಏತತ್ ಅಪಾಮ್ ಗುಹ್ಯಮ್ ನಾಮಧೇಯಮ್ ವೈ | ಇವುಗಳು ನೀರುಗಳ ಗುಟ್ಟಾದ ಹೆಸರುಗಳಷ್ಟೆ. |
| ಮಾಂದಾಸು ತೇ ಶುಕ್ರ ಶುಕ್ರಮ್ ಆಧೂನೋಮಿ ಇತಿ ಆಹ | [ಆ ಜಲಾಭಿಮಾನಿದೇವತೆಗಳ ಪ್ರೀತಿಗಾಗಿ] 'ಮಾಂದಾಸು ತೇ' ಮುಂತಾದ ಮಂತ್ರಗಳನ್ನು ಹೇಳಿ ಆಧವನವನ್ನು ಮಾಡಬೇಕು [ವಿಧಿ]* |

---

* ಈ ವಿಷಯವು ಹಿಂದಿನ ಅನುವಾಕದಲ್ಲಿ ಇದೆ.

ಪಾಮೇವ ನಾಮಧೇಯೇನ ಗುಹ್ಯೇನ ದಿವೋ
ವೃಷ್ಟಿಮವರುಂಧೇ ಶುಕ್ರಂ ತೇ ಶುಕ್ರೇಣ
ಗೃಹ್ಣಾಮೀತ್ಯಾಹೈತದ್ವಾ ಅಹ್ನೋ ರೂಪಂ ಯದ್ರಾತ್ರಿ

---

ಅಪಾಮ್ । ಏವ । ನಾಮಧೇಯೇನೇತಿ ನಾಮ-ಧೇಯೇನ । ಗುಹ್ಯೇನ । ದಿವಃ ।
ವೃಷ್ಟಿಮ್ । ಅವೇತಿ । ರುಂಧೇ । ಶುಕ್ರಮ್ । ತೇ । ಶುಕ್ರೇಣ । ಗೃಹ್ಣಾಮಿ । ಇತಿ ।
ಆಹ । ಏತತ್ । ವೈ । ಅಹ್ನಃ । ರೂಪಮ್ । ಯತ್ । ರಾತ್ರಿಃ ।

---

| | |
|---|---|
| ಅಪಾಮ್ ಗುಹ್ಯೇನ ನಾಮಧೇಯೇನ ಏವ | ಜಲಾಭಿಮಾನಿದೇವತೆಗಳ ಈ ನಾಮಧೇಯಗಳ ಪಠನದಿಂದ [ಪ್ರೀತರಾದ ದೇವತೆಗಳ ಅನುಗ್ರಹದಿಂದ] |
| ದಿವಃ ವೃಷ್ಟಿಮ್ ಅವರುಂಧೇ | ದ್ಯುಲೋಕದಿಂದ ಮಳೆಯನ್ನು ಪಡೆಯುತ್ತಾನೆ. |

**'ಶುಕ್ರಂ ತೇ ಶುಕ್ರೇಣ' ಎಂಬ ಮಂತ್ರಭಾಗದ ವ್ಯಾಖ್ಯಾನ-ಅರ್ಥವಾದ**

| | |
|---|---|
| ಶುಕ್ರಮ್ ತೇ ಶುಕ್ರೇಣ ಗೃಹ್ಣಾಮಿ ಇತಿ ಆಹ | ದಧಿಮಿಶ್ರಣದಲ್ಲಿ ಅಧ್ವರ್ಯುವು 'ಶುಕ್ರಂ ತೇ' ಎಂಬ ಮಂತ್ರವನ್ನು ಹೇಳುತ್ತಾನೆ. |
| ರಾತ್ರಿಃ[ಇತಿ]ಯತ್ ಏತತ್ ಅಹ್ನಃ ರೂಪಮ್ ವೈ | ರಾತ್ರಿಯೆಂಬುದು ಯಾವುದುಂಟೋ ಅದು ಹಗಲಿನ *ನಿರೂಪಕವಾಗಿದೆ. |

---

ವಸತೀವರೀಜಲದಿಂದ ಸೋಮಭಾಗಗಳನ್ನು ಅಲ್ಲಾಡಿಸುವುದಕ್ಕಾಗಿ ಹೇಳುವ 'ಮಾಂದಾಸು' ಮಂತಾದವುಗಳಲ್ಲಿರುವ ಮಾಂದಾ ಮುಂತಾದವುಗಳು ನೀರಿನ ಗುಟ್ಟಾದ ಹೆಸರುಗಳಾಗಿವೆ. ಈ ಮಂತ್ರಗಳ ಪಠನದಿಂದ ಪ್ರೀತರಾದ ಜಲಾಭಿಮಾನಿ

---

*ಹಗಲಿನ ಪರಿಮಾಣವು ರಾತ್ರಿಯಿಂದ ತಿಳಿಯುವುದು. ಅಹಃ ನಿರೂಪ್ಯತೇ ಯೇನ/ಯಯಾ ॥

ಸ್ಸೂರ್ಯಸ್ಯ ರಶ್ಮಯೋ ವೃಷ್ಟ್ಯಾ ಈಶತೇಽಹ್ನ ಏವ ರೂಪೇಣ ಸೂರ್ಯಸ್ಯ ರಶ್ಮಿಭಿರ್ದಿವೋ ವೃಷ್ಟಿಂ ಚ್ಯಾವಯತ್ಯಾಽಸ್ಮಿನ್ನುಗ್ರಾ [..ನ್ನುಗ್ರಾಃ(ಲ)ಅಚುಚ್ಯವು] ಅಚುಚ್ಯವುರಿತ್ಯಾಹ

---

ಸೂರ್ಯಸ್ಯ । ರಶ್ಮಯಃ । ವೃಷ್ಟ್ಯಾಃ । ಈಶತೇ । ಅಹ್ನಃ । ಏವ । ರೂಪೇಣ । ಸೂರ್ಯಸ್ಯ । ರಶ್ಮಿಭಿರಿತಿ ರಶ್ಮಿ–ಭಿಃ । ದಿವಃ । ವೃಷ್ಟಿಮ್ । ಚ್ಯಾವಯತಿ । ಏತಿ । ಅಸ್ಮಿನ್ । ಉಗ್ರಾಃ ।(ಲ)। ಅಚುಚ್ಯವುಃ । ಇತಿ । ಆಹ ।

---

| | |
|---|---|
| ಸೂರ್ಯಸ್ಯ ರಶ್ಮಯಃ<br>ವೃಷ್ಟ್ಯಾಃ ಈಶತೇ<br>ಅಹ್ನಃ ರೂಪೇಣ ಏವ<br>ಸೂರ್ಯಸ್ಯ ರಶ್ಮಿಭಿಃ<br>ದಿವಃ ವೃಷ್ಟಿಮ್ ಚ್ಯಾವಯತಿ | ಸೂರ್ಯನ ಕಿರಣಗಳು ವೃಷ್ಟಿಗೆ [ಮಳೆಯನ್ನು ಸುರಿಸಲು] ಅಧಿಪತಿಗಳಾಗಿವೆ/ಸಮರ್ಥವಾಗಿವೆ. ಹಗಲಿನ ನಿರೂಪಕವಾದ ರಾತ್ರಿಯ ಕಾಲದಿಂದಲೂ, ಸೂರ್ಯನ ಕಿರಣಗಳುಳ್ಳ ಹಗಲಿ ನಿಂದಲೂ [ಈ ಮಂತ್ರಪಾಠದಿಂದ]ಅಂತರಿಕ್ಷದಿಂದ ಮಳೆಯನ್ನು ಬೀಳುವಂತೆ ಮಾಡುತ್ತಾನೆ. |

'ಆಽಸ್ಮಿನ್' ಎಂಬ ಮಂತ್ರಭಾಗದ ವ್ಯಾಖ್ಯಾನ

| | |
|---|---|
| ಆ ಅಸ್ಮಿನ್ ಉಗ್ರಾಃ<br>ಅಚುಚ್ಯವುಃ ಇತಿ ಆಹ | 'ಈ ಪಾತ್ರದಲ್ಲಿ ತೀವ್ರವಾದ ಸೋಮಧಾರೆಗಳು ಬೀಳುತ್ತವೆ' ಎಂಬ ಅರ್ಥದ ಈ ಮಂತ್ರಭಾಗವನ್ನು ಅಧ್ವರ್ಯುವು ಹೇಳುತ್ತಾನೆ. |

---

ದೇವತೆಗಳು ಅನುಗ್ರಹಿಸುವರು. ಇದರಿಂದ ಯಜಮಾನನು ದ್ಯುಲೋಕದಿಂದ ಮಳೆಯನ್ನು ಹೊಂದುವನು.

ಯಥಾಯಜುರೇವೈತತ್ಕಕುಹಗ್ಂ ರೂಪಂ ವೃಷಭಸ್ಯ ರೋಚತೇ ಬೃಹದಿತ್ಯಾಹೈತದ್ವಾ ಅಸ್ಯ ಕಕುಹಗ್ಂ ರೂಪಂ ಯದ್ವೃಷ್ಟೀ ರೂಪೇಣೈವ ವೃಷ್ಟಿಮವರುಂಧೇ

ಯಥಾಯಜುರಿತಿ ಯಥಾ-ಯಜುಃ । ಏವ । ಏತತ್ । ಕಕುಹಮ್ । ರೂಪಮ್ । ವೃಷಭಸ್ಯ । ರೋಚತೇ । ಬೃಹತ್ । ಇತಿ । ಆಹ । ಏತತ್ । ವೈ । ಅಸ್ಯ । ಕಕುಹಮ್ । ರೂಪಮ್ । ಯತ್ । ವೃಷ್ಟಿಃ । ರೂಪೇಣ । ಏವ । ವೃಷ್ಟಿಮ್ । ಅವೇತಿ । ರುಂಧೇ ।

| | |
|---|---|
| ಏತತ್ ಯಥಾಯಜುಃ ಏವ | ಯಜುರ್ಮಂತ್ರವು ಹೇಳುವಂತೆ ಈ ಮಂತ್ರವು ಸ್ಪಷ್ಟಾರ್ಥವಾಗಿದೆ. |

**'ಕಕುಹಮ್' ಮುಂತಾದ ಮಂತ್ರಭಾಗದ ವ್ಯಾಖ್ಯಾನ**

| | |
|---|---|
| ಕಕುಹಮ್ ರೂಪಮ್ ವೃಷಭಸ್ಯ ರೋಚತೇ ಬೃಹತ್ ಇತಿ ಆಹ | 'ಮಳೆಯನ್ನು ಸುರಿಸುವ ಇಂದ್ರನ ಮುಖ್ಯರೂಪವು ಪ್ರಕಾಶಿಸುತ್ತದೆ' ಎಂದು ಅರ್ಥ ಕೊಡುವ ಈ ಮಂತ್ರವನ್ನು ಅಧ್ವರ್ಯುವು ಹೇಳುತ್ತಾನೆ. |
| ಯತ್ ವೃಷ್ಟಿಃ ಏತತ್ ವೈ ಅಸ್ಯ ಕಕುಹಮ್ ರೂಪಮ್ | ಈ ವೃಷ್ಟಿ ಎಂಬುದೇ ಈ ಇಂದ್ರನ ಮುಖ್ಯವಾದ ರೂಪವಾಗಿದೆ. |
| ರೂಪೇಣ ಏವ ವೃಷ್ಟಿಮ್ ಅವರುಂಧೇ | [ಈ ಮುಖ್ಯತ್ವವನ್ನು ಸ್ಪಷ್ಟಪಡಿಸುವ'ಕಕುಹಮ್' ಯುಕ್ತವಾದ ಮಂತ್ರಪಾಠದಿಂದಲೇ] ರೂಪದಿಂದಲೇ ಇಂದ್ರನ ಮುಖ್ಯರೂಪವಾದ ಮಳೆಯನ್ನು ಹೊಂದುತ್ತಾನೆ. |

ರಾತ್ರಿಯು ಹಗಲಿನ ಪರಿಮಾಣವನ್ನು ನಿರೂಪಿಸುವುದು. ರಾತ್ರಿಯಾದೊಡನೆಯೇ ಹಗಲಿನ ಪರಿಮಾಣವು ತಿಳಿಯುವುದಷ್ಟೆ. ಸೂರ್ಯನ ರಶ್ಮಿಗಳು ಮಳೆಗೆ ಅಧಿಪತಿಗಳಂತಿವೆ. 'ಶುಕ್ರಂ ತೇ' ಎಂಬ ಮಂತ್ರಪಾಠದಿಂದ ರಾತ್ರಿ-ಹಗಲೂ ಮಳೆಯನ್ನು ಸುರಿಸುವಂತೆ ಮಾಡುತ್ತಾನೆ.

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವೀತ್ಯಾಹೈಷ ಹ ವೈ ಹವಿಷಾ ಹವಿರ್ಯಜತಿ ಯೋಽದಾಭ್ಯಂ ಗೃಹೀತ್ವಾ ಸೋಮಾಯ ಜುಹೋತಿ**

---

ಯತ್ । ತೇ । ಸೋಮ । ಅದಾಭ್ಯಮ್ । ನಾಮ । ಜಾಗೃವಿ । ಇತಿ । ಆಹ । ಏಷಃ । ಹ । ವೈ । ಹವಿಷಾ । ಹವಿಃ । ಯಜತಿ । ಯಃ । ಅದಾಭ್ಯಮ್ । ಗೃಹೀತ್ವಾ । ಸೋಮಾಯ । ಜುಹೋತಿ ।

---

**'ಯತ್ತೇ ಸೋಮ' ಎಂದು ಅದಾಭ್ಯಹೋಮವಿಧಿ-ಅರ್ಥವಾದ**

| | |
|---|---|
| ಸೋಮ ತೇ ಯತ್ ಅದಾಭ್ಯಮ್ ನಾಮ ಜಾಗೃವಿ ಇತಿ ಆಹ | 'ಸೋಮನೇ! ನಿನ್ನ ತಿರಸ್ಕರಿಸಲು ಸಾಧ್ಯವಿಲ್ಲದ ಹೆಸರು ಯಾವಾಗಲೂ ಜಾಗೃತವಾಗಿದೆ' ಎಂದು ಅರ್ಥವನ್ನು ಕೊಡುವ ಮಂತ್ರವನ್ನು ಶ್ರುತಿಯು ಹೇಳುತ್ತದೆ. |
| ಯಃ ಅದಾಭ್ಯಮ್ ಗೃಹೀತ್ವಾ ಸೋಮಾಯ ಜುಹೋತಿ | ಯಾವನು ದಧಿಗ್ರಹವನ್ನು [ಅದಾಭ್ಯ]ಗ್ರಹಣ ಮಾಡಿ ಸೋಮದ್ರವ್ಯದೇವತೆಯಾದ ಸೋಮನಿಗೆ ಹೋಮವನ್ನು ಮಾಡುತ್ತಾನೆಯೋ |
| ಏಷಃ ಹವಿಷಾ ಹವಿಃ ಯಜತಿ ಹ ವೈ | ಅವನು ಹವಿಸ್ಸಿನಿಂದಲೇ ಹವೀರೂಪನಾದ ದೇವತೆಗೆ ಯಾಗ ಮಾಡಿದವನಾಗುತ್ತಾನೆ [ಅದುದರಿಂದ ಇದು ಪ್ರಶಸ್ತ] |

---

ಇನ್ನೊಂದೆಡೆ ಶ್ರುತಿಯಲ್ಲಿ **'ಅಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ'** ಎಂದು ಹೇಳಿದೆ.

ಪಾತ್ರದಲ್ಲಿ ತೀವ್ರವಾದ ಸೋಮಧಾರೆಗಳು ಬೀಳುತ್ತವೆ ಎಂಬ ಮಂತ್ರದ ಅರ್ಥವು

ಪರಾ ವಾ ಏತಸ್ಯಾಯುಃ ಪ್ರಾಣ ಏತಿ[...ಏತಿ(೯)]

ಯೋಽಗ್ಂಶುಂ ಗೃಹ್ಣಾತ್ಯಾ ನಃ ಪ್ರಾಣ ಏತು ಪರಾವತ

ಇತ್ಯಾಹಾ-

---

ಪರೇತಿ । ವೈ । ಏತಸ್ಯ । ಆಯುಃ । ಪ್ರಾಣ ಇತಿ ಪ್ರ-ಅನಃ । ಏತಿ ।(೯)। ಯಃ ।

ಅಗ್ಂಶುಮ್ । ಗೃಹ್ಣಾತಿ । ಏತಿ । ನಃ । ಪ್ರಾಣ ಇತಿ ಪ್ರ-ಅನಃ । ಏತು ।

ಪರಾವತ ಇತಿ ಪರಾ-ವತಃ । ಇತಿ । ಆಹ ।

---

'ಆ ನಃ ಪ್ರಾಣ ಏತು' ಎಂಬ ಮಂತ್ರಭಾಗದ ಬ್ರಾಹ್ಮಣ/ಅರ್ಥವಾದ

| | |
|---|---|
| ಯಃ ಅಗ್ಂಶುಮ್ ಗೃಹ್ಣಾತಿ | ಯಾವ ಯಜಮಾನನು ಅಂಶುವೆಂಬ ಸೋಮ ರಸವನ್ನು ಪಾತ್ರದಲ್ಲಿ ಗ್ರಹಿಸುತ್ತಾನೆಯೋ |
| ಏತಸ್ಯ ಆಯುಃ ಪ್ರಾಣಃ ಪರಾ ಏತಿ ವೈ | ಈ ಯಜಮಾನನ ಆಯುಷ್ಪ್ರದವಾದ ಪ್ರಾಣವು ಹೊರಟುಹೋಗುತ್ತದೆ. |
| *ಆ ನಃ ಪ್ರಾಣಃ ಏತು ಪರಾವತಃ ಇತಿ ಆಹ | 'ದೂರದೇಶದಿಂದಲೂ ಪ್ರಾಣವು ನಮ್ಮನ್ನು ಕುರಿತು ಬರಲಿ' ಎಂಬ ಅರ್ಥವನ್ನು ಈ ಮಂತ್ರವು ಕೊಡುತ್ತದೆ. |

---

ಸ್ಪಷ್ಟವಾಗಿ ಇದೆ.

ಪರ್ಜನ್ಯದೇವನಾದ ಇಂದ್ರನಿಗೆ ವೃಷ್ಟಿಯೇ ಮುಖ್ಯವಾದ ರೂಪವಾಗಿದೆ. 'ಕಕುಹಮ್ ರೂಪಮ್' ಎಂದು ಪ್ರಧಾನರೂಪವಾಚಿಗಳಾದ ಪದಗಳಿಂದ ಕೂಡಿರುವ ಮಂತ್ರದಿಂದ ಸುಪ್ರೀತನಾದ ಇಂದ್ರನು ಮಳೆಯನ್ನು ಸುರಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಇದೆ.

ಇದು ದಧಿಗ್ರಹಯಾಗದ ಪ್ರಶಂಸೆಯಾಗಿದೆ. ದಧಿಯೂ ಹವಿಸ್ಸಾಗಿದೆ. ಸೋಮವೂ

---

*ಆ ನಃ ಪ್ರಾಣ ಏತು...ಪ್ರಾಣಾಯ ತ್ವಾ । ಎಂಬ ಇಡೀ ಮಂತ್ರಕ್ಕೆ ಆಘ್ರಾಣದಲ್ಲಿ ವಿನಿಯೋಗವಿದೆ. ಶ್ರುತಿಯಲ್ಲಿ ಆ ಮಂತ್ರದ ಬ್ರಾಹ್ಮಣವು ವಿಭಾಗಿಸಿ ಹೇಳಲ್ಪಟ್ಟದೆ.

ಯುರೇವ ಪ್ರಾಣಮಾತ್ಮನ್ಧತ್ತೇಽಮೃತಮಸಿ ಪ್ರಾಣಾಯ

ತ್ವೇತಿ ಹಿರಣ್ಯಮಭಿ ವ್ಯನಿತ್ಯಮೃತಂ ವೈ ಹಿರಣ್ಯಮಾಯುಃ

ಪ್ರಾಣೋಽಮೃತೇನೈವಾಯುರಾತ್ಮನ್ಧತ್ತೇ

---

ಆಯುಃ । ಏವ । ಪ್ರಾಣಮಿತಿ ಪ್ರ-ಅನಮ್ । ಆತ್ಮನ್ । ಧತ್ತೇ । ಅಮೃತಮ್ । ಅಸಿ ।

ಪ್ರಾಣಾಯೇತಿ ಪ್ರ-ಅನಾಯ । ತ್ವಾ । ಇತಿ । ಹಿರಣ್ಯಮ್ । ಅಭಿ । ವೀತಿ । ಅನಿತಿ ।

ಅಮೃತಮ್ । ವೈ । ಹಿರಣ್ಯಮ್ । ಆಯುಃ । ಪ್ರಾಣ ಇತಿ ಪ್ರ-ಅನಃ । ಅಮೃತೇನ ।

ಏವ । ಆಯುಃ । ಆತ್ಮನ್ । ಧತ್ತೇ ।

---

| | |
|---|---|
| ಆಯುಃ ಪ್ರಾಣಮ್ ಆತ್ಮನ್ ಏವ ಧತ್ತೇ | [ಈ ಮಂತ್ರವನ್ನು ಹೇಳುವುದರಿಂದ] ಯಜಮಾನನು ಆಯುಷ್ಪ್ರದವಾದ ಪ್ರಾಣವನ್ನು ತನ್ನಲ್ಲಿಯೇ ನೆಲೆಗೊಳಿಸುತ್ತಾನೆ. |
| ಅಮೃತಮ್ ಅಸಿ ಪ್ರಾಣಾಯ ತ್ವಾ ಇತಿ | [ಓ ಹಿರಣ್ಯನೇ! ನೀನು] ಅಮೃತಸ್ವರೂಪನು. [ಪ್ರಾಣಪ್ರದನು] ನಿನ್ನನ್ನು ಪ್ರಾಣಸ್ಥಿತಿಗಾಗಿ [ಮೂಸಿ ನೋಡುತ್ತೇನೆ] ಎಂಬ ಮಂತ್ರವನ್ನು ಹೇಳಿ |
| ಹಿರಣ್ಯಮ್ ಅಭಿವ್ಯನಿತಿ ಹಿರಣ್ಯಮ್ ಅಮೃತಮ್ ವೈ | ಚಿನ್ನವನ್ನು ಆಘ್ರಾಣಿಸಬೇಕು. ಚಿನ್ನವು ನಾಶವಿಲ್ಲ ದುದಷ್ಟೆ. |
| ಆಯುಃ ಪ್ರಾಣಃ ಅಮೃತೇನ ಏವ ಆಯುಃ ಆತ್ಮನ್ ಧತ್ತೇ | ಪ್ರಾಣವು ಆಯುಃಸ್ವರೂಪವಾದುದು [ಆದುದರಿಂದ ಹಿರಣ್ಯದ ಆಘ್ರಾಣದಿಂದ] ಅಮೃತದಿಂದಲೇ ಪ್ರಾಣವನ್ನು ನೆಲೆಗೊಳಿಸಿದಂತಾಗುತ್ತದೆ. |

---

ಹವಿಸ್ಸು. ದಧಿಗ್ರಹಗ್ರಹಣವನ್ನು ಮಾಡಿ ಸೋಮನಿಗೆ ಹೋಮವನ್ನು ಮಾಡುವುದರಿಂದ ಒಂದು ಹವಿಸ್ಸನ್ನು ಉದ್ದೇಶಿಸಿ, ಮತ್ತೊಂದು ಹವಿಸ್ಸಿನಿಂದ ಹೋಮ ಮಾಡಿದಂತಾಗುತ್ತದೆ. ಸೋಮನು ಹವಿಃಸ್ವರೂಪನೂ ಹೌದು. ಹವಿಸ್ಸಿನಿಂದ

ಶತಮಾನಂ ಭವತಿ ಶತಾಯುಃ ಪುರುಷಶ್ಶತೇಂದ್ರಿಯ

ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠ

---

ಶತಮಾನಮಿತಿ ಶತ-ಮಾನಮ್ । ಭವತಿ । ಶತಾಯುರಿತಿ ಶತ-ಆಯುಃ । ಪುರುಷಃ ।

ಶತೇಂದ್ರಿಯ ಇತಿ ಶತ-ಇಂದ್ರಿಯಃ । ಆಯುಷಿ । ಏವ । ಇಂದ್ರಿಯೇ । ಪ್ರತೀತಿ । ತಿಷ್ಠತಿ ।

---

### ಚಿನ್ನದ ಪರಿಮಾಣವಿಧಿ;ಬ್ರಾಹ್ಮಣ-ಅರ್ಥವಾದ

| | |
|---|---|
| ಶತಮಾನಮ್ ಭವತಿ | ಚಿನ್ನವು ನೂರು ಮಾನಗಳ ಪರಿಮಾಣವನ್ನು ಹೊಂದಿರಬೇಕು. |
| ಪುರುಷಃ ಶತಾಯುಃ | ಮಾನವನು ನೂರು ವರ್ಷಗಳ ಆಯುಸ್ಸುಳ್ಳವನಾಗಿದ್ದಾನೆ.[ನೂರು ನಾಡಿಗಳಲ್ಲಿ ಹತ್ತು ಇಂದ್ರಿಯಗಳ ಸಂಚಾರವಿರುವುದರಿಂದ] |
| ಶತೇಂದ್ರಿಯಃ ಆಯುಷಿ ಏವ ಇಂದ್ರಿಯೇ ಪ್ರತಿತಿಷ್ಠತಿ | ಶತೇಂದ್ರಿಯನಾಗಿದ್ದಾನೆ. ಯಜಮಾನನು ಆಯುಸ್ಸಿನಲ್ಲಿಯೂ ಇಂದ್ರಿಯಶಕ್ತಿಯಲ್ಲಿಯೂ ಪ್ರತಿಷ್ಠಿತನಾಗುತ್ತಾನೆ. |

---

ಹವಿರ್ದೇವತೆಗೆ ಯಾಗ ಮಾಡಿದಂತಾಗಿ ಇದು ಪ್ರಶಸ್ತವಾಗುತ್ತದೆ.

ಅಂಶುಹೋಮಾನಂತರದಲ್ಲಿ ಅಧ್ವರ್ಯು-ಯಜಮಾನರು ಹಿರಣ್ಯವನ್ನು ಮೂಸಿ ನೋಡುತ್ತಾರೆ. ಈ ಮಂತ್ರವನ್ನು ಪಾಠ ಮಾಡುವುದರಿಂದ ಯಜಮಾನನು ತನ್ನಲ್ಲಿಯೇ ಪ್ರಾಣವನ್ನು ನೆಲೆಗೊಳಿಸಿಕೊಳ್ಳುತ್ತಾನೆ.

ಆಘ್ರಾಣಿಸುವ ವಿಧಿಗಾಗಿ ಚಿನ್ನವು ನೂರು ಮಾನಗಳ ಪರಿಮಾಣವನ್ನು ಹೊಂದಿರಬೇಕು. ಚಿನ್ನದ ಮಾನಗಳ ಸಂಖ್ಯೆಯು ನೂರಾಗಿರುವುದರಿಂದ ಯಜಮಾನನ ಆಯುಸ್ಸು, ಇಂದ್ರಿಯಸಾಮರ್ಥ್ಯಗಳು ಪ್ರತಿಷ್ಠಿತವಾಗುತ್ತವೆ.

ಇದು ಶತಸಂಖ್ಯೆಯ ಪ್ರಶಂಸೆ. ಇಂತಹ ಸಂಖ್ಯಾಪ್ರಶಂಸೆಯು ಶ್ರುತಿಯಲ್ಲಿ ಹಲವು ಕಡೆಗಳಲ್ಲಿ ಇದೆ.

ತ್ಯಪ ಉಪಸ್ಪೃಶತಿ ಭೇಷಜಂ ವಾ ಆಪೋ

ಭೇಷಜಮೇವ ಕುರುತೇ ॥೧೦-4॥

ಉಗ್ರಾ ಏತ್ಯಾಪಸ್ತ್ರೀಣಿ ಚ ॥

---

ಆಪಃ । ಉಪೇತಿ । ಸ್ಪೃಶತಿ । ಭೇಷಜಮ್ । ವೈ । ಆಪಃ । ಭೇಷಜಮ್ । ಏವ । ಕುರುತೇ ॥೧೦॥

---

### ಉದಕಸ್ಪರ್ಶನವಿಧಿ-ಬ್ರಾಹ್ಮಣ

| | |
|---|---|
| ಅಪಃ ಉಪಸ್ಪೃಶತಿ | ['ಇಂದ್ರಾಗ್ನೀ ಮೇ' ಎಂಬ ಮಂತ್ರದಿಂದ] ನೀರನ್ನು ಮುಟ್ಟಬೇಕು. |
| ಆಪಃ ಭೇಷಜಮ್ ವೈ | ನೀರು ಔಷಧವಷ್ಟೆ. |
| ಭೇಷಜಮ್ ಏವ ಕುರುತೇ | ಇದರಿಂದ ದೋಷಪರಿಹಾರವೆಂಬ ಚಿಕಿತ್ಸೆಯನ್ನೇ ಮಾಡುತ್ತಾನೆ. |

---

'ಇಂದ್ರಾಗ್ನೀ 'ದಧನ್ವೇ ವಾ' ಎಂಬ ಎರಡು ಮಂತ್ರಗಳಿಂದ ವೇದಿಯ ಒಳಗೆ ಮಾರ್ಜನವನ್ನು ಮಾಡಿಕೊಳ್ಳಬೇಕು. ಇದು ಮಿಶ್ರರ ಮತ.

ನೀರು ಔಷಧವೆಂಬುದಾಗಿಯೂ, ಸ್ಪರ್ಶದಿಂದ ಚಿಕಿತ್ಸೆ ಮಾಡಿದಂತಾಗುತ್ತದೆಯೆಂಬುದಾಗಿ ಸ್ಪರ್ಶವಿಧಿಯ ಪ್ರಶಂಸೆ.

---

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧)ಅದಾಭ್ಯ-ಅಂಶುಗ್ರಹಗಳು ಯಾಗಗಳೇ ? [ಜೈ.ಸೂ.2.3.12]

ಅನಾರಭ್ಯಾಧೀತವಾದ **'ಯದದಾಭ್ಯಂ ಗೃಹೀತ್ವಾ ಅಂಶುಮ್ ಗೃಹ್ಣಾತಿ'** ಎಂಬಲ್ಲಿ ವಿಹಿತವಾದವುಗಳು ಯಾಗಗಳೇ? ಅಥವಾ ಅಗ್ನಿಷ್ಟೋಮಯಾಗದಲ್ಲಿ ಗುಣವಿಧಿಗಳೇ? ಇದು ಇಲ್ಲಿನ **ಸಂಶಯ.**

ಇಲ್ಲಿಯ **ಪೂರ್ವಪಕ್ಷವು** ಹೀಗಿದೆ; **'ಅದಾಭ್ಯ'** ಎಂಬುದು ಜ್ಯೋತಿ ಇತ್ಯಾದಿ ಗಳಂತೆ ಅಪೂರ್ವವಾದ ಹೆಸರಾಗಿರುವುದರಿಂದ ಇವು ಅಪೂರ್ವವಾಗಿ ವಿಹಿತವಾ ಗಿರುವ ಯಾಗಗಳೇ.

ಮೇಲಿನ ವಾಕ್ಯಗಳಲ್ಲಿ ಯಾಗಸೂಚಕವಾದ **ಯಜತಿ** ಎಂಬ ಶಬ್ದವು ಇಲ್ಲದಿರು ವುದರಿಂದ ಇವು ಯಾಗವಿಧಿಗಳಲ್ಲ. **ಯಜತೇ** ಎಂಬ ಪದವು ಇದ್ದರೂ **'ಗೃಹೀತ್ವಾ'** ಮತ್ತು **'ಸೋಮಾಯ'** ಎಂಬ ಪದಗಳಿಂದ ವ್ಯವಹಿತವಾಗಿದೆ. ಹೀಗಾಗಿ **'ಅದಾಭ್ಯಂ ಗೃಹೀತ್ವಾ ಸೋಮಾಯ ಜುಹೋತಿ'** ಎಂದಿರುವುದರಿಂದ ಇದು ಗುಣವಿಧಿ ಯಾಗಿದೆ. ತೈತ್ತಿರೀಯಸಂಹಿತೆಯ ಆರನೆಯ ಕಾಂಡದ ಆರನೆಯ ಪ್ರಪಾಠಕದಲ್ಲಿ ಅಗ್ನಿಷ್ಟೋಮಪ್ರಕರಣದಲ್ಲಿಯೇ ಇವು ಗುಣವಿಧಿಗಳು. ಇದು ಇಲ್ಲಿನ **ಸಿದ್ಧಾಂತ.**

### ೨) ಅದಾಭ್ಯ-ಅಂಶುಗ್ರಹಗಳಿಗೆ ಗ್ರಹಧರ್ಮವು ಇದೆಯೇ?

ಅನಾರಭ್ಯಾಧೀತಗಳಾಗಿ ವಿಹಿತವಾಗಿರುವ ಈ ಅದಾಭ್ಯ-ಅಂಶುಗ್ರಹಗಳಿಗೆ ಉಳಿದ ಸೋಮಯಾಗದ ಗ್ರಹಗಳಿಗೆ ಇರುವಂತೆ ಗ್ರಹಧರ್ಮವಾದ ಸಾದನ-ಸಮ್ಮಾರ್ಗಗಳು ಇವೆಯೇ? ಇದು ಇಲ್ಲಿನ **ಸಂಶಯ.**

ಪ್ರಕರಣಪ್ರಮಾಣದಿಂದ ಅನಾರಭ್ಯಾಧೀತಗಳಾದ ಐಂದ್ರವಾಯವಾದಿಗ್ರಹಗಳ ಲ್ಲಿಯೇ ಆ ಸಾದನಾದಿಧರ್ಮಗಳು. ಪ್ರಕರಣವು ನಿಯಾಮಕವಾದುದರಿಂದ ಈ

ಗ್ರಹಗಳಿಗೆ ಸಾದನಾದಿಧರ್ಮಗಳು ಇಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

**'ಗ್ರಹಾಃ ಸಾದ್ಯಂತೇ'** ಎಂದು ಸಾಮಾನ್ಯವಾಕ್ಯವಿರುವುದರಿಂದ ಇವುಗಳಿಗೂ ಗ್ರಹಸಂಜ್ಞೆಯು ಇರುವುದರಿಂದ ಇವುಗಳಿಗೂ ಸಾದನ-ಸಮ್ಮಾರ್ಗಗಳು ಇವೆ. ಇಲ್ಲಿ ಜ್ಯೋತಿಷ್ಟೋಮವೇ ಪ್ರಕರಣಿ, ಐಂದ್ರವಾಯವಾದಿಗಳು ಪ್ರಕರಣಿಗಳಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ಪಂಚಮೋಽನುವಾಕಃ ॥

ವಾಯುರಸಿ ಪ್ರಾಣೋ ನಾಮ

ಸವಿತುರಾಧಿಪತ್ಯೇಽಪಾನಂ ಮೇ ದಾ-

---

ವಾಯುಃ । ಅಸಿ । ಪ್ರಾಣ ಇತಿ ಪ್ರ–ಅನಃ । ನಾಮ । ಸವಿತುಃ । ಆಧಿಪತ್ಯ ಇತ್ಯಾಧಿ–ಪತ್ಯೇ । ಅಪಾನಮಿತ್ಯಪ–ಅನಮ್ । ಮೇ । ದಾಃ ।

---

ನಾಲ್ಕನೆಯ ಅನುವಾಕದಲ್ಲಿ ಅಂಶು–ಅದಾಭ್ಯಮಂತ್ರಗಳ ಬ್ರಾಹ್ಮಣವು ಉಕ್ತವಾಗಿದೆ. ಈ ಐದನೆಯ ಅನುವಾಕದಲ್ಲಿ ವಿಕೃತಿಯಾದ ದ್ವಾದಶಾಹಸೋಮಯಾಗದ ಅಂಗಗಳಾದ ಪೃಶ್ನಿಗ್ರಹಮಂತ್ರಗಳು ಉಕ್ತವಾಗಿವೆ.

| ಮಂತ್ರ | ವಿನಿಯೋಗ |
|---|---|
| ವಾಯುರಸಿ...ಅಪಾನಂ ಮೇ ದಾಃ ॥ | ವೈಕೃತವಾದ ಪೃಶ್ನಿಗ್ರಹಗಳ ಮಾನವನ್ನು ಮಾಡಲು [೧೦ ಮಂತ್ರಗಳು] |

---

✦**ವಾಯುಃ ಅಸಿ**=[ಹೇ! ಸೋಮನೇ!] [ಯಜಮಾನನಿಂದ ಕುಡಿಯಲ್ಪಟ್ಟವನಾಗಿ ಪ್ರಾಣಾದಿವಾಯುಗಳನ್ನು ತುಂಬಿಕೊಡುವವನಾಗಿ] ವಾಯು ಎಂದು ಹೆಸರಾಗಿರುವೆ. **ಪ್ರಾಣಃ ನಾಮ** ಅಸಿ=[ವಿಶೇಷವಾಗಿ] ಪ್ರಾಣ ಎನ್ನಿಸಿಕೊಂಡಿರುವೆ; **ಸವಿತುಃ ಆಧಿಪತ್ಯೇ**=[ಎಲ್ಲಕ್ಕೂ ಅನುಮತಿಯನ್ನು ಕೊಡುವ] ಸವಿತೃಸ್ವರೂಪನಾದ ಪರಮಾತ್ಮನ ಆಧಿಪತ್ಯದಲ್ಲಿ ಇದ್ದು; **ಮೇ ಅಪಾನಮ್ ದಾಃ**=ಒಳಕ್ಕೆ ಎಳೆದುಕೊಳ್ಳುವ ಅಪಾನಾದಿವಾಯುಗಳನ್ನು ನನಗೆ ಕೊಡು.

ಶ್ಚಕ್ಷುರಸಿ ಶ್ರೋತ್ರಂ ನಾಮ ಧಾತುರಾಧಿಪತ್ಯ ಆಯುರ್ಮೇ

ದಾ ರೂಪಮಸಿ ವರ್ಣೋ ನಾಮ ಬೃಹಸ್ಪತೇರಾಧಿಪತ್ಯೇ

ಪ್ರಜಾಂ ಮೇ ದಾ

---

ಚಕ್ಷುಃ। ಅಸಿ। ಶ್ರೋತ್ರಮ್। ನಾಮ। ಧಾತುಃ। ಆಧಿಪತ್ಯ ಇತ್ಯಾಧಿ–ಪತ್ಯೇ। ಆಯುಃ।

ಮೇ । ದಾಃ । ರೂಪಮ್ । ಅಸಿ । ವರ್ಣಃ । ನಾಮ । ಬೃಹಸ್ಪತೇಃ । ಆಧಿಪತ್ಯ

ಇತ್ಯಾಧಿ–ಪತ್ಯೇ। ಪ್ರಜಾಮಿತಿ ಪ್ರ–ಜಾಮ್। ಮೇ। ದಾಃ।

---

| ಮಂತ್ರ | ವಿನಿಯೋಗ |
|---|---|
| ಚಕ್ಷುರಸಿ...ಆಯುರ್ಮೇ ದಾಃ ॥<br>ರೂಪಮಸಿ...ಪ್ರಜಾಂ ಮೇ ದಾಃ ॥ | ಪೃಶ್ನಿಗ್ರಹಗಳ ಮಾನವನ್ನು ಮಾಡಲು |

---

✦**ಚಕ್ಷುಃ ಅಸಿ ಶ್ರೋತ್ರಮ್ ನಾಮ**=ಆಪ್ಯಾಯನಗೊಳಿಸುವ ನೀನು ಕಣ್ಣು–ಕಿವಿಗಳ ಸ್ವರೂಪನಾಗಿರುವೆ; **ಧಾತುಃ ಆಧಿಪತ್ಯೇ**=ಸ್ರಷ್ಟನಾದ ಧಾತೃದೇವನ ಆಧಿಪತ್ಯದಲ್ಲಿ ಇದ್ದು; **ಮೇ ಆಯುಃ ದಾಃ**=ನನಗೆ ದೀರ್ಘಾಯುಸ್ಸನ್ನು ಕೊಡು.

✦**ರೂಪಮ್ ಅಸಿ ವರ್ಣಃ ನಾಮ**=ಅಂಗಸೌಷ್ಠವರೂಪನೂ, ಕಾಂತಿಸ್ವರೂಪನೂ ಆಗಿರುವ ನೀನು; **ಬೃಹಸ್ಪತೇಃ ಆಧಿಪತ್ಯೇ**=[ಆ ಎರಡನ್ನೂ ಕೊಡುವ] ಬೃಹಸ್ಪತಿಯ ಅಧೀನದಲ್ಲಿದ್ದು; **ಪ್ರಜಾಮ್ ಮೇ ದಾಃ**=[ರೂಪಕಾಂತಿಯುಕ್ತವಾದ] ಪುತ್ರಪೌತ್ರಾದಿ ಪ್ರಜೆಯನ್ನು ನನಗೆ ಕೊಡು.

---

**'ವಾಯುರಸಿ'** ಎಂದು ಆರಂಭಗೊಳ್ಳುವ ಹತ್ತು ಮಂತ್ರಗಳಿಂದ ಹತ್ತು ದಿನಗಳ ಸೋಮಾಭಿಷವಕ್ಕೆ ಬೇಕಾದ ಸೋಮಲತೆಯನ್ನು ಅಳೆದು ಇಡಬೇಕು. ಈ ಲತೆಗಳೇ ಅಭಿಷವದ ಅನಂತರ ಪೃಶ್ನಿಗ್ರಹಗಳಾಗುತ್ತವೆ.

# ಋತಮಸಿ ಸತ್ಯಂ ನಾಮೇಂದ್ರಸ್ಯಾಧಿಪತ್ಯೇ
# ಕ್ಷತ್ರಂ ಮೇ ದಾ ಭೂತಮಸಿ ಭವ್ಯಂ ನಾಮ
# ಪಿತೃಣಾಮಾಧಿಪತ್ಯೇಽಪಾಮೋಷಧೀನಾಂ ಗರ್ಭಂ ಧಾ

---

ಋತಮ್ । ಅಸಿ । ಸತ್ಯಮ್ । ನಾಮ । ಇಂದ್ರಸ್ಯ । ಆಧಿಪತ್ಯ ಇತ್ಯಾಧಿ-ಪತ್ಯೇ ।
ಕ್ಷತ್ರಮ್ । ಮೇ । ದಾಃ । ಭೂತಮ್ । ಅಸಿ । ಭವ್ಯಮ್ । ನಾಮ । ಪಿತೃಣಾಮ್ ।
ಆಧಿಪತ್ಯ ಇತ್ಯಾಧಿ-ಪತ್ಯೇ । ಅಪಾಮ್ । ಓಷಧೀನಾಮ್ । ಗರ್ಭಮ್ । ಧಾಃ ।

---

| ಮಂತ್ರ | ವಿನಿಯೋಗ |
|---|---|
| ಋತಮಸಿ...ಕ್ಷತ್ರಂ ಮೇ ದಾಃ ‖<br>ಭೂತಮಸಿ...ಗರ್ಭಂ ಧಾಃ ‖ | ಪೃಶ್ನಿಗ್ರಹಗಳ ಮಾನವನ್ನು ಮಾಡಲು |

---

✦**ಋತಮ್ ಅಸಿ ಸತ್ಯಮ್ ನಾಮ**=ನೀನು ಮನಸ್ಸಿನಿಂದ ಚಿಂತಿಸುವ ಹಾಗೂ ವಾಕ್ಕಿನಿಂದ ಹೇಳಲ್ಪಡುವ ಋತ-ಸತ್ಯಗಳ ರೂಪನಾಗಿರುವೆ. **ಇಂದ್ರಸ್ಯ ಆಧಿಪತ್ಯೇ**=ಆ ಎರಡನ್ನೂ ಪಾಲಿಸುವ ಇಂದ್ರನ ಅಧೀನದಲ್ಲಿದ್ದು; **ಕ್ಷತ್ರಮ್ ಮೇ ದಾಃ**=ನನಗೆ ಬಲವನ್ನು ಕೊಡು.

✦[ಸೋಮನೇ!]**ಭೂತಮ್ ಅಸಿ ಭವ್ಯಮ್ ನಾಮ**=[ಯಜ್ಞಫಲವನ್ನು ಕೊಡುವವನಾಗಿ] ನೀನು ಭೂತಸ್ವರೂಪನೂ, ಭವಿಷ್ಯತ್ಸ್ವರೂಪನೂ ಆಗಿರುವೆ. **ಪಿತೃಣಾಮ್ ಆಧಿಪತ್ಯೇ**=ಪಿತೃದೇವತೆಗಳ ಆಧಿಪತ್ಯದಲಿದ್ದು; **ಅಪಾಮ್ ಓಷಧೀನಾಮ್ ಗರ್ಭಮ್ ಧಾಃ**=ಜಲ-ಸಸ್ಯಗಳ ಗರ್ಭರೂಪವಾಗಿರುವ ಪಶುಗಳನ್ನು ನನ್ನಲ್ಲಿ ಸ್ಥಿರವಾಗಿರುವಂತೆ ಮಾಡು.

---

ಆ ಸೋಮಲತೆಯನ್ನು ಬಗೆ ಬಗೆಯಾಗಿ ಸ್ತುತಿಸಿ ವಿವಿಧ ಫಲಗಳನ್ನು ಯಜಮಾನನು

---

*ಮನಸ್ಸಿನಲ್ಲಿ ಚಿಂತಿಸುವ ತಥ್ಯವು-ಋತ. ಬಾಯಿಯಿಂದ ಹೇಳಲ್ಪಡುವ ತಥ್ಯವು-ಸತ್ಯ.

# ಋತಸ್ಯ ತ್ವಾ ವ್ಯೋಮನ ಋತಸ್ಯ [(೧೧)]ತ್ವಾ ವಿಭೂಮನ ಋತಸ್ಯ ತ್ವಾ ವಿಧರ್ಮಣ ಋತಸ್ಯ ತ್ವಾ ಸತ್ಯಾಯರ್ತಸ್ಯ ತ್ವಾ ಜ್ಯೋತಿಷೇ

ಋತಸ್ಯ । ತ್ವಾ । ವ್ಯೋಮನ ಇತಿ ವಿ–ಓಮನೇ । ಋತಸ್ಯ [(೧೧)] ತ್ವಾ । ವಿಭೂಮನ ಇತಿ ವಿ–ಭೂಮನೇ । ಋತಸ್ಯ । ತ್ವಾ । ವಿಧರ್ಮಣ ಇತಿ ವಿ–ಧರ್ಮಣೇ । ಋತಸ್ಯ । ತ್ವಾ । ಸತ್ಯಾಯ । ಋತಸ್ಯ । ತ್ವಾ । ಜ್ಯೋತಿಷೇ ।

| ಮಂತ್ರ | ವಿನಿಯೋಗ |
|---|---|
| ಋತಸ್ಯ...ವ್ಯೋಮನೇ । ಋತಸ್ಯ...ವಿಧರ್ಮಣೇ । ಋತಸ್ಯ...ವಿಭೂಮನೇ । ಋತಸ್ಯ...ಸತ್ಯಾಯ । ಋತಸ್ಯ...ಜ್ಯೋತಿಷೇ ॥ | ಪೃಶ್ನಿಗ್ರಹಗಳ ಮಾನವನ್ನು ಮಾಡಲು |

✦[ಸೋಮನೇ!]ತ್ವಾ=ನಿನ್ನನ್ನು; **ಋತಸ್ಯ ವ್ಯೋಮನೇ**=ಸತ್ಯದ ವಿಶೇಷ ರಕ್ಷಣೆಗಾಗಿ /ಪೃಥಿವಿಯ ಜಯಕ್ಕಾಗಿ; ಮಿಮೇ=ಅಳೆಯುತ್ತೇನೆ; ✦**ಋತಸ್ಯ ವಿಭೂಮನೇ**= ಸತ್ಯದ ಬಾಹುಳಕ್ಕಾಗಿ/ಅಂತರಿಕ್ಷಜಯಕ್ಕಾಗಿ; **ತ್ವಾ**=ನಿನ್ನನ್ನು; ಮಿಮೇ=ಅಳೆಯುತ್ತೇನೆ. ✦**ತ್ವಾ ಋತಸ್ಯ ವಿಧರ್ಮಣೇ**=ಸತ್ಯದ ವಿಶೇಷಧಾರಣಕ್ಕಾಗಿ/ದೇವಲೋಕದ ಜಯಕ್ಕಾಗಿ ನಿನ್ನನ್ನು; ಮಿಮೇ=ಅಳೆಯುತ್ತೇನೆ. ✦**ಋತಸ್ಯ ತ್ವಾ ಸತ್ಯಾಯ**=ಸತ್ಯದ ಸಂಪೂರ್ಣತೆಗಾಗಿ/ಸುಳ್ಳಿನ ಸೋಂಕೇ ಇಲ್ಲದಿರುವುದಕ್ಕಾಗಿ/ದಿಗ್ವಿಜಯಕ್ಕಾಗಿ ನಿನ್ನನ್ನು; ಮಿಮೇ=ಅಳೆಯುತ್ತೇನೆ. ✦**ಋತಸ್ಯ ತ್ವಾ ಜ್ಯೋತಿಷೇ**=ಸತ್ಯದ ಪ್ರಕಾಶಕ್ಕಾಗಿ /ಸ್ವರ್ಗಜಯಕ್ಕಾಗಿ ನಿನ್ನನ್ನು; ಮಿಮೇ=ಅಳೆಯುತ್ತೇನೆ.

ಬಯಸುತ್ತಾನೆ. ಆ ಸೋಮಲತೆಯು ವಾಯು, ಚಕ್ಷು, ವರ್ಣ, ಋತ, ಭೂತ, ಭವ್ಯರೂಪಗಳೆಂದು ಸ್ತುತಿಸಲಾಗಿದೆ.

ಪ್ರಜಾಪತಿರ್ವಿರಾಜಮಪಶ್ಯತ್ತಯಾ ಭೂತಂ ಚ ಭವ್ಯಂ

ಚಾಸೃಜತ ತಾಮೃಷಿಭ್ಯಸ್ತಿರೋಽದಧಾತ್ತಾಂ ಜಮದಗ್ನಿ

ಸ್ತಪಸಾಽಪಶ್ಯತ್ತಯಾ ವೈ ಸ ಪೃಶ್ನೀನ್ಕಾಮಾನಸೃಜತ

ತತ್ಪೃಶ್ನೀನಾಂ ಪೃಶ್ನಿತ್ವಂ

---

ಪ್ರಜಾಪತಿರಿತಿ ಪ್ರಜಾ-ಪತಿಃ । ವಿರಾಜಮಿತಿ ವಿ-ರಾಜಮ್ । ಅಪಶ್ಯತ್ । ತಯಾ ।

ಭೂತಮ್ । ಚ । ಭವ್ಯಮ್ । ಚ । ಅಸೃಜತ । ತಾಮ್ । ಋಷಿಭ್ಯ ಇತ್ಯೃಷಿ-ಭ್ಯಃ । ತಿರಃ ।

ಅದಧಾತ್ । ತಾಮ್ । ಜಮದಗ್ನಿಃ । ತಪಸಾ । ಅಪಶ್ಯತ್ । ತಯಾ । ವೈ । ಸಃ । ಪೃಶ್ನೀನ್ ।

ಕಾಮಾನ್ । ಅಸೃಜತ । ತತ್ । ಪೃಶ್ನೀನಾಮ್ । ಪೃಶ್ನಿತ್ವಮಿತಿ ಪೃಶ್ನಿ-ತ್ವಮ್ ।

---

ಪೃಶ್ನಿಗ್ರಹಗಳ ಉತ್ಪತ್ತಿಯ ಬ್ರಾಹ್ಮಣ

| | |
|---|---|
| ಪ್ರಜಾಪತಿಃ ವಿರಾಜಮ್ ಅಪಶ್ಯತ್ | ಪ್ರಜಾಪತಿಬ್ರಹ್ಮನು ವಿರಾಟ್ ಛಂದಸ್ಸನ್ನು/ ಗೋವನ್ನು ನೋಡಿದನು/ತಿಳಿದನು. |
| ತಯಾ ಭೂತಮ್ ಚ ಭವ್ಯಮ್ ಚ ಅಸೃಜತ | ಆ ಛಂದಸ್ಸಿನಿಂದ ಭೂತ, ಭವ್ಯ ಜಗತ್ತನ್ನು ಸೃಷ್ಟಿಸಿದನು. |
| ತಾಮ್ ಋಷಿಭ್ಯಃ ತಿರಃ ಅದಧಾತ್ | ಆ ಛಂದಸ್ಸನ್ನು ಋಷಿಗಳಿಗೆ ತಿಳಿಯದಂತೆ ಮಾಡಿದನು. |
| ತಾಮ್ ಜಮದಗ್ನಿಃ ತಪಸಾ ಅಪಶ್ಯತ್ | ಆ ಛಂದಸ್ಸನ್ನು ಜಮದಗ್ನಿಮುನಿಯು ತಪಸ್ಸಿನಿಂದ ತಿಳಿದುಕೊಂಡನು. |
| ಸಃ ತಯಾ ವೈ ಪೃಶ್ನೀನ್ ಕಾಮಾನ್ ಅಸೃಜತ | ಆ ಜಮದಗ್ನಿಯು ಆ ವಿರಾಟ್ ಛಂದಸ್ಸಿನಿಂದ ಧೇನುಸ್ವರೂಪವಾದ ಭೋಗಗಳನ್ನು ಸೃಷ್ಟಿಸಿದನು. |
| ತತ್ ಪೃಶ್ನೀನಾಮ್ ಪೃಶ್ನಿತ್ವಮ್ | ಅದೇ ಪೃಶ್ನಿಮಂತ್ರಗಳಿಗಿರುವ ಪೃಶ್ನಿತ್ವ. |

ಯತ್ಪೃಶ್ನ್ಯೋ ಗೃಹ್ಯಂತೇ ಪೃಶ್ನೀನೇವ ತೈಃ ಕಾಮಾನ್ ಯಜಮಾನೋಽವರುಂಧೇ ವಾಯುರಸಿ ಪ್ರಾಣೋ [ಪ್ರಾಣಃ (೧೨)]ನಾಮೇತ್ಯಾಹ ಪ್ರಾಣಾಪಾನಾವೇವಾವರುಂಧೇ

---

ಯತ್ । ಪೃಶ್ನ್ಯಃ । ಗೃಹ್ಯಂತೇ । ಪೃಶ್ನೀನ್ । ಏವ । ತೈಃ । ಕಾಮಾನ್ । ಯಜಮಾನಃ । ಅವೇತಿ । ರುಂಧೇ । ವಾಯುಃ । ಅಸಿ । ಪ್ರಾಣ ಇತಿ ಪ್ರ-ಅನಃ । (೧೨) । ನಾಮ । ಇತಿ । ಆಹ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಏವ । ಅವೇತಿ । ರುಂಧೇ ।

---

### ಪೃಶ್ನಿಗ್ರಹಣವಿಧಿ; ಫಲಶ್ರುತಿ

| | |
|---|---|
| ಯತ್ ಪೃಶ್ನ್ಯಃ ಗೃಹ್ಯಂತೇ | 'ವಾಯುರಸಿ..'ಮುಂತಾದ ಹತ್ತು ಮಂತ್ರಗಳಿಂದ ಪೃಶ್ನಿಗಳನ್ನು[ಸೋಮಲತಾಭಾಗಗಳನ್ನು]ಪ್ರತ್ಯೇಕಿಸಿ ಇಡಬೇಕು. ಇದೇ ಪೃಶ್ನಿಗ್ರಹಣ. |
| ಯಜಮಾನಃ ತೈಃ ಪೃಶ್ನೀನ್ ಏವ ಕಾಮಾನ್ ಅವರುಂಧೇ | ಯಜಮಾನನು ಆ ಪೃಶ್ನಿಗ್ರಹಣಗಳಿಂದ ಕಾಮಧೇನು ಸ್ವರೂಪವಾದ ಪ್ರಾಣಾಪಾನಪ್ರಾಪ್ತ್ಯಾದಿ ಭೋಗಗಳನ್ನು ಹೊಂದುತ್ತಾನೆ. |

### ಪೃಶ್ನಿಗಳಲ್ಲಿ ಪ್ರಥಮಪೃಶ್ನಿಮಾನಮಂತ್ರದ ವ್ಯಾಖ್ಯಾನಬ್ರಾಹ್ಮಣ-ಫಲಶ್ರುತಿ

| | |
|---|---|
| ವಾಯುರಸಿ ಪ್ರಾಣಃ ನಾಮ ಇತ್ಯಾಹ | 'ವಾಯುರಸಿ...ಅಪಾನಂ ಮೇ ದಾಃ' ಎಂದು ಪ್ರಥಮಪೃಶ್ನಿಗ್ರಹಮಂತ್ರವು ಹೇಳುತ್ತದೆ. |
| ಪ್ರಾಣಾಪಾನೌ ಏವ ಅವರುಂಧೇ | ಈ ಮಂತ್ರಪೂರ್ವಕಗ್ರಹಣದಿಂದ ಯಜಮಾನನು ಪ್ರಾಣಾಪಾನಾದಿವಾಯುಗಳ ಸುಸ್ಥಿತಿಯನ್ನು ಹೊಂದುತ್ತಾನೆ. |

ಚಕ್ಷುರಸಿ ಶ್ರೋತ್ರಂ ನಾಮೇತ್ಯಾಹಾಯುರೇವಾವ

ರುಂಧೇ ರೂಪಮಸಿ ವರ್ಣೋ ನಾಮೇತ್ಯಾಹ

ಪ್ರಜಾಮೇವಾವರುಂಧ

---

ಚಕ್ಷುಃ । ಅಸಿ । ಶ್ರೋತ್ರಮ್ । ನಾಮ । ಇತಿ । ಆಹ । ಆಯುಃ । ಏವ । ಅವೇತಿ । ರುಂಧೇ । ರೂಪಮ್ । ಅಸಿ । ವರ್ಣಃ । ನಾಮ । ಇತಿ । ಆಹ । ಪ್ರಜಾಮಿತಿ ಪ್ರ-ಜಾಮ್ । ಏವ । ಅವೇತಿ । ರುಂಧೇ ।

---

ಎರಡನೆಯ ಮಂತ್ರದ ವ್ಯಾಖ್ಯಾನಬ್ರಾಹ್ಮಣ-ಫಲಶ್ರುತಿ

| | |
|---|---|
| ಚಕ್ಷುಃ ಅಸಿ ಶ್ರೋತ್ರಮ್ ನಾಮ ಇತ್ಯಾಹ | 'ಚಕ್ಷುರಸಿ..ಆಯುರ್ಮೇ ದಾಃ'ಎಂದು ಎರಡನೆಯ ಪೃಶ್ನಿಗ್ರಹಮಂತ್ರವು ಹೇಳುತ್ತದೆ. |
| ಆಯುಃ ಏವ ಅವರುಂಧೇ | ಈ ಮಂತ್ರಪೂರ್ವಕವಾದ ಪೃಶ್ನಿಗ್ರಹಣದಿಂದ ಯಜಮಾನನು ಪೂರ್ಣವಾದ ಆಯುಸ್ಸನ್ನು ಹೊಂದುತ್ತಾನೆ. |

ಮೂರನೆಯ ಪೃಶ್ನಿಮಾನಮಂತ್ರದ ವ್ಯಾಖ್ಯಾನಬ್ರಾಹ್ಮಣ

| | |
|---|---|
| ರೂಪಮ್ ಅಸಿ ವರ್ಣಃ ನಾಮ ಇತ್ಯಾಹ | 'ರೂಪಮಸಿ ವರ್ಣೋ ನಾಮ' ಮೊದಲಾಗಿ ಮಂತ್ರವು ಹೇಳುತ್ತದೆ. |
| ಪ್ರಜಾಮ್ ಏವ ಅವರುಂಧೇ | [ಈ ಮಂತ್ರದಿಂದ ಸೋಮಲತಾಮಾನವನ್ನು ಮಾಡುವುದರಿಂದ] ಅಂಗಸೌಷ್ಠವಕಾಂತಿಯುಕ್ತವಾದ ಪ್ರಜೆಯನ್ನು ಯಜಮಾನನು ಪಡೆಯುತ್ತಾನೆ. |

---

ಸೋಮಲತೆಯನ್ನು ಅಳೆದು ಇಡುವುದಕ್ಕಾಗಿ ಅದನ್ನು ಬೇರೆ ಬೇರೆ ಫಲಗಳಿಗಾಗಿ ಅಳೆಯುತ್ತೇನೆಂದು ಹೇಳಲಾಗಿದೆ.

ಋತಮಸಿ ಸತ್ಯಂ ನಾಮೇತ್ಯಾಹ ಕ್ಷತ್ರಮೇವಾವರುಂಧೇ

ಭೂತಮಸಿ ಭವ್ಯಂ ನಾಮೇತ್ಯಾಹ

---

ಋತಮ್ । ಅಸಿ । ಸತ್ಯಮ್ । ನಾಮ । ಇತಿ । ಆಹ । ಕ್ಷತ್ರಮ್ । ಏವ । ಅವೇತಿ । ರುಂಧೇ । ಭೂತಮ್ । ಅಸಿ । ಭವ್ಯಮ್ । ನಾಮ । ಇತಿ । ಆಹ ।

---

## ನಾಲ್ಕನೆಯ ಪೃಶ್ನಿಮಾನಮಂತ್ರದ ವ್ಯಾಖ್ಯಾನಬ್ರಾಹ್ಮಣ

| | |
|---|---|
| ಋತಮಸಿ ಸತ್ಯಮ್ ನಾಮ ಇತ್ಯಾಹ | 'ಋತಮಸಿ...ಮೇ ದಾಃ' ಎಂಬುದಾಗಿ ನಾಲ್ಕನೆಯ ಪೃಶ್ನಿಮಾನಮಂತ್ರವು ಹೇಳುತ್ತದೆ. |
| ಕ್ಷತ್ರಮ್ ಏವ ಅವರುಂಧೇ | ಈ ಮಂತ್ರಪೂರ್ವಕವಾದ ಪೃಶ್ನಿಮಾನದಿಂದ ಯಜಮಾನನು ಬಲವನ್ನು ಹೊಂದುತ್ತಾನೆ. |

## ಐದನೆಯ ಪೃಶ್ನಿಮಾನಮಂತ್ರದ ವ್ಯಾಖ್ಯಾನಬ್ರಾಹ್ಮಣ

| | |
|---|---|
| ಭೂತಮ್ ಅಸಿ ಭವ್ಯಮ್ ನಾಮ ಇತ್ಯಾಹ | 'ಭೂತಮಸಿ...ಗರ್ಭಂ ಧಾಃ' ಎಂದು ಐದನೆಯ ಪೃಶ್ನಿಮಾನಮಂತ್ರವು ಹೇಳುತ್ತದೆ. |

---

ಪೃಶ್ನಿಮಂತ್ರಗಳೆಂಬ ಹೆಸರನ್ನು ವಿವರಿಸಲು ಉಪಾಖ್ಯಾನವು ಇಲ್ಲಿದೆ. ಪ್ರಜಾಪತಿ ಬ್ರಹ್ಮನು ವಿರಾಟ್ ಛಂದಸ್ಸಿನಿಂದ ಜಗತ್ತನ್ನು ಸೃಷ್ಟಿಸಿದನು. ಅದನ್ನು ಋಷಿಗಳು ಅರಿಯದಂತೆ ಮಾಡಿದಾಗ ಜಮದಗ್ನಿಮುನಿಯು ತಪಸ್ಸನ್ನಾಚರಿಸಿ, ಪ್ರಜಾಪತಿಯನ್ನು ಒಲಿಸಿಕೊಂಡು ಅದನ್ನು ತಿಳಿದನು. ಬಳಿಕ ಅದೇ ಛಂದಸ್ಸಿನಿಂದ ಧೇನುವಿನಂತಿರುವ ಭೋಗಗಳನ್ನು ಸೃಷ್ಟಿಸಿದನು. ಹೀಗಾಗಿ 'ವಾಯುರಸಿ' ಮುಂತಾದ ಧೇನುವಿನಂತೆ ಭೋಗಸಾಧನವಾದ ಹತ್ತು ಮಂತ್ರಗಳಿಗೆ ಭೋಗಸಾಧನವಾದ ಧೇನುವಿನಂತೆ ಇರುವುದರಿಂದ 'ಪೃಶ್ನಿ' ಎಂದು ಹೆಸರಾಯಿತು. ಹೀಗೆ ಆ ಹೆಸರು ಅನ್ವರ್ಥವಾಗಿದೆ. 'ವಾಯುರಸಿ' ಮೊದಲಾದ ಹತ್ತು ಮಂತ್ರಗಳಿಂದ ಸೋಮಲತಾಭಾಗಗಳನ್ನು ಪ್ರತ್ಯೇಕಿಸಿ ಇಡಬೇಕು. ಇದೇ ಪೃಶ್ನಿಗ್ರಹಣ.

ಪಶವೋ ವಾ ಅಪಾಮೋಷಧೀನಾಂ ಗರ್ಭಃ

ಪಶೂನೇವಾ[ನೇವ(೧೩)]ವರುಂಧ ಏತಾವದ್ವೈ ಪುರುಷಂ

ಪರಿತಸ್ತದೇವಾವರುಂಧ

---

ಪಶವಃ । ವೈ । ಅಪಾಮ್ । ಓಷಧೀನಾಮ್ । ಗರ್ಭಃ । ಪಶೂನ್ । ಏವ । (೧೩) । ಆವೇತಿ । ರುಂಧೇ । ಏತಾವತ್ । ವೈ । ಪುರುಷಮ್ । ಪರಿತಃ । ತತ್ । ಏವ । ಅವೇತಿ । ರುಂಧೇ ।

---

| | |
|---|---|
| ಅಪಾಮ್ ಓಷಧೀನಾಮ್ ಗರ್ಭಃ ಪಶವಃ ವೈ | ಪಶುಗಳು ನೀರುಗಳ ಮತ್ತು ಓಷಧಿಗಳ ಗರ್ಭ ಸ್ವರೂಪವಷ್ಟೆ. [ಈ ಮಂತ್ರಪೂರ್ವಕವಾಗಿ ಪೃಶ್ನಿಮಾನ ಮಾಡುವುದರಿಂದ] [ಪಿತೃದೇವತೆಗಳ ಅನುಗ್ರಹವನ್ನು |
| ಪಶೂನ್ ಏವ ಅವರುಂಧೇ | ಪಡೆದು] ಯಜಮಾನನು ಪಶುಸಂಪತ್ತನ್ನು ಪಡೆಯುತ್ತಾನೆ. |

### ಈ ಐದು ಮಂತ್ರಗಳ ಸಮಷ್ಟಿಫಲದ ವಿವರಣೆ

| | |
|---|---|
| ಪುರುಷಮ್ ಪರಿತಃ ಏತಾವತ್ ವೈ | ಮನುಷ್ಯನಿಗೆ ಸಾಮಾನ್ಯವಾಗಿ ಎಲ್ಲೆಡೆಯಲ್ಲಿಯೂ ಇರುವ ಕಾಮನೆಗಳು ಪ್ರಾಣಸ್ವಾಸ್ಥ್ಯಾದಿಗಳು–ಇಷ್ಟೇ ತಾನೇ. |
| ತತ್ ಏವ ಅವರುಂಧೇ | ಈ ಮಂತ್ರಪೂರ್ವಕಸೋಮಮಾನದಿಂದ ಅದೆಲ್ಲವನ್ನೂ/ಭೋಗಗಳನ್ನು ಮನುಷ್ಯನು ಪಡೆಯುತ್ತಾನೆ. |

---

ಶ್ರುತಿಯಲ್ಲಿ 'ಯತ್ ಪೃಶ್ನಯಃ ಗೃಹ್ಯಂತೇ' ಎಂಬುದಾಗಿ ಯತ್ ಎಂಬ ಶಬ್ದವು ಇದೆ. ಯತ್ ಶಬ್ದವು ವಿಧಿಶಕ್ತಿಗೆ ಪ್ರತಿಬಂಧಕವೆಂದು ಮೀಮಾಂಸಾಶಾಸ್ತ್ರದಲ್ಲಿ ಹೇಳಿದೆ. ಆದರೆ 'ಯದಾಗ್ನೇಯೋऽಷ್ಟಾಕಪಾಲಃ' ಮೊದಲಾದ ಕಡೆಗಳಲ್ಲಿ 'ಯತ್' ಶಬ್ದದ

ಋತಸ್ಯ ತ್ವಾ ವ್ಯೋಮನ ಇತ್ಯಾಹೇಯಂ ವಾ ಋತಸ್ಯ

ವ್ಯೋಮೇಮಾಮೇವಾಭಿ ಜಯ-

---

ಋತಸ್ಯ। ತ್ವಾ। ವ್ಯೋಮನ ಇತಿ ವಿ–ಓಮನೇ। ಇತಿ। ಆಹ। ಇಯಮ್। ವೈ।

ಋತಸ್ಯ। ವ್ಯೋಮೇತಿ ವಿ–ಓಮ। ಇಮಾಮ್। ಏವ। ಅಭೀತಿ। ಜಯತಿ।

---

## 'ಋತಸ್ಯ ತ್ವಾ ವ್ಯೋಮನ...'ಮುಂತಾದ ಐದು ಪೃಶ್ನಿಗ್ರಹವಾನ ಮಂತ್ರಗಳ ವ್ಯಾಖ್ಯಾನ; ಪ್ರಶಂಸೆ

| | |
|---|---|
| ಋತಸ್ಯ ತ್ವಾ ವ್ಯೋಮನೇ ಇತ್ಯಾಹ | ಆರನೆಯ ಮಂತ್ರವು 'ಯಜ್ಞದ ಅಥವಾ ಸತ್ಯ ಸ್ವರೂಪನಾದ ಪರಮಾತ್ಮನ ಪ್ರೀತಿಗಾಗಿ ಈ ಸೋಮಮಾನವನ್ನು ಮಾಡುತ್ತೇನೆ' ಎಂದು ಹೇಳುತ್ತದೆ. |
| ಇಯಮ್ ವೈ ಋತಸ್ಯ ವ್ಯೋಮ | ರಕ್ಷಿತವಾದ ಈ ಭೂಲೋಕವು ಯಜ್ಞದ ಆಶ್ರಯ ವಾಗಿದೆ. |
| ಇಮಾಮ್ ಏವ ಅಭಿಜಯತಿ | [ಈ ಮಂತ್ರದಿಂದ ಸೋಮಮಾನವನ್ನು ಮಾಡು ವುದರಿಂದ] ಯಜಮಾನನು ಭೂಲೋಕವನ್ನು ಜಯಿಸುತ್ತಾನೆ. |

---

ಅರ್ಥವು ವಿವಕ್ಷಿತವಲ್ಲವೆಂದು [ಅದರ ಅರ್ಥವನ್ನು ಗಮನಿಸ ಬೇಕಾಗಿಲ್ಲ] ಶಾಸ್ತ್ರಸಿದ್ಧಾಂತವಿದೆ. ಹಾಗೆಯೇ 'ಗೃಹ್ಯಂತೇ' ಎಂದು ವರ್ತಮಾನಾರ್ಥಕಲಕಾರ ವಿದ್ದರೂ 'ಗೃಹ್ಯಂತಾಮ್' ಎಂಬುದಾಗಿ ವಿಧ್ಯರ್ಥಕಲಕಾರವೆಂಬುದಾಗಿ ಗ್ರಹಿಸ ಬೇಕೆಂಬುದೂ ಶಾಸ್ತ್ರಸಿದ್ಧಾಂತವಾಗಿದೆ.

ಪೃಶ್ನಿಮಾನಮಂತ್ರಗಳನ್ನು ಹೇಳಿ ಸೋಮಲತಾಮಾನವನ್ನು ಮಾಡುವುದರಿಂದ ಬೇರೆ ಬೇರೆಯ ಫಲವನ್ನು ಶ್ರುತಿಯು ತಿಳಿಸುತ್ತಿದೆ.

'ವಾಯುರಸಿ ಪ್ರಾಣಃ'ಎಂಬ ಪ್ರಥಮಮಂತ್ರದಿಂದ ಪ್ರಾಣ–ಅಪಾನಾದಿ ವಾಯುಗಳ

ತ್ರ್ಯೃತಸ್ಯ ತ್ವಾ ವಿಭೂಮನ ಇತ್ಯಾಹಾಂತರಿಕ್ಷಂ ವಾ

ಋತಸ್ಯ ವಿಭೂಮಾಂತರಿಕ್ಷಮೇವಾಭಿ ಜಯ-

---

ಋತಸ್ಯ । ತ್ವಾ । ವಿಭೂಮನ ಇತಿ ವಿ-ಭೂಮನೇ । ಇತಿ । ಆಹ । ಅಂತರಿಕ್ಷಮ್ । ವೈ । ಋತಸ್ಯ । ವಿಭೂಮೇತಿ ವಿ-ಭೂಮ । ಅಂತರಿಕ್ಷಮ್ । ಏವ । ಅಭೀತಿ । ಜಯತಿ ।

---

ಏಳನೆಯ ಮಂತ್ರದ ವ್ಯಾಖ್ಯಾನ

| | |
|---|---|
| ಋತಸ್ಯ ತ್ವಾ ವಿಭೂಮನೇ ಇತಿ ಆಹ | ಈ ಮಂತ್ರವು ಯಜ್ಞದ ಬಾಹುಳ್ಯವನ್ನು ಗಳಿಸುವುದಕ್ಕಾಗಿ ಸೋಮನಾದ ನಿನ್ನನ್ನು ಅಳತೆ ಮಾಡುತ್ತೇನೆ. ಎಂದು ಹೇಳುತ್ತದೆ. |
| ಅಂತರಿಕ್ಷಮ್ ವೈ ಋತಸ್ಯ ವಿಭೂಮ | ಅಂತರಿಕ್ಷವೇ ಯಜ್ಞದ ವ್ಯಾಪಕತೆಗೆ ಕಾರಣವಾಗಿದೆ. |
| ಅಂತರಿಕ್ಷಮ್ ಏವ ಅಭಿ ಜಯತಿ | ಯಜಮಾನನು ಈ ಮಂತ್ರಪೂರ್ವಕವಾದ ಸೋಮಲತಾಮಾನದಿಂದ ಅಂತರಿಕ್ಷಲೋಕ ವನ್ನು ಜಯಿಸುವನು. |

---

ಸುಸ್ಥಿತಿಯನ್ನೂ, 'ಚಕ್ಷುರಸಿ' ಎಂಬ ಎರಡನೆಯ ಮಂತ್ರದಿಂದ ಸೋಮಮಾನ ಮಾಡುವುದರಿಂದ ಪೂರ್ಣವಾದ ಆಯುಸ್ಸನ್ನೂ, 'ರೂಪಮಸಿ' ಎಂಬ ತೃತೀಯ ಮಂತ್ರದಿಂದ ಸೋಮಮಾನ ಮಾಡುವುದರಿಂದ ಅಂಗಸೌಷ್ಠವಯುಕ್ತ ಮಕ್ಕಳನ್ನೂ, ಮಾನಸಿಕ-ವಾಚಿಕ-ಸತ್ಯಪಾಲಕನಾದ ಇಂದ್ರನ ಅನುಗ್ರಹದಿಂದ ಸತ್ಯಪಾಲಕವಾದ ಬಲವನ್ನು ಕೊಡು ಎಂಬ ಅರ್ಥದ ಋತಮಸಿ ಎಂಬ ನಾಲ್ಕನೆಯ ಮಂತ್ರದಿಂದ ಯಜಮಾನನು ಬಲವನ್ನು ಹೊಂದುವನು. 'ಭೂತಮಸಿ ಭವ್ಯಮ್' ಎಂಬ ಐದನೆಯ ಮಂತ್ರದಿಂದ ಯಜಮಾನನು ಸೋಮಲತಾಮಾನವನ್ನು ಮಾಡುತ್ತಾನೆ. ಜಲ ಮತ್ತು ಸಸ್ಯಗಳಿಂದಲೇ ಪಶುವೃದ್ಧಿಯಾಗುವುದರಿಂದ ಪಶುಗಳು ನೀರಿನ ಮತ್ತು ಓಷಧಿಗಳ ಗರ್ಭದಂತೆ. ಈ ಮಂತ್ರದಿಂದ ಸೋಮಲತಾಮಾನವನ್ನು ಮಾಡುವುದರಿಂದ ಯಜಮಾನನು ಪಶುಸಂಪತ್ತನ್ನು ಪಡೆಯುತ್ತಾನೆ.

ತ್ಯೃತಸ್ಯ ತ್ವಾ ವಿಧರ್ಮಣ ಇತ್ಯಾಹ ದ್ಯೌರ್ವಾ ಋತಸ್ಯ

ವಿಧರ್ಮ ದಿವಮೇವಾಭಿ ಜಯತ್ಯೃತಸ್ಯ[(೧೪)]ತ್ವಾ

ಸತ್ಯಾಯೇತ್ಯಾಹ ದಿಶೋ ವಾ ಋತಸ್ಯ ಸತ್ಯಂ

---

ಋತಸ್ಯ । ತ್ವಾ । ವಿಧರ್ಮಣ ಇತಿ ವಿ-ಧರ್ಮಣೇ । ಇತಿ । ಆಹ । ದ್ಯೌಃ । ವೈ । ಋತಸ್ಯ । ವಿಧರ್ಮೇತಿ ವಿ-ಧರ್ಮ । ದಿವಮ್ । ಏವ । ಅಭೀತಿ । ಜಯತಿ । ಋತಸ್ಯ । (೧೪)। ತ್ವಾ । ಸತ್ಯಾಯ । ಇತಿ । ಆಹ । ದಿಶಃ । ವೈ । ಋತಸ್ಯ । ಸತ್ಯಮ್ ।

---

## ಎಂಟನೆಯ ಮಂತ್ರದ ವ್ಯಾಖ್ಯಾನ

| | |
|---|---|
| ಋತಸ್ಯ ತ್ವಾ ವಿಧರ್ಮಣೇ ಇತಿ ಆಹ | ಈ ಮಂತ್ರವು 'ಯಜ್ಞದ/ಸತ್ಯದ ವಿಶೇಷಧಾರಣೆಗಾಗಿ ನಿನ್ನನ್ನು ಅಳೆಯುತ್ತೇನೆ' ಎಂದು ಹೇಳುತ್ತದೆ. |
| ದ್ಯೌಃ ವೈ ಋತಸ್ಯ ವಿಧರ್ಮ | ದ್ಯುಲೋಕವೇ ಯಜ್ಞದ ಫಲವನ್ನು ನೀಡಿ ಯಜ್ಞದ ವಿಶೇಷಧಾರಣೆಯನ್ನು ಮಾಡುತ್ತದೆ. |
| ದಿವಮ್ ಏವ ಅಭಿಜಯತಿ | [ಈ ಮಂತ್ರದಿಂದ ಮಾಡುವ ಸೋಮಲತಾಮಾನದಿಂದ ಯಜಮಾನನು] ದ್ಯುಲೋಕವನ್ನೇ ಜಯಿಸುವನು. |

## ಒಂಬತ್ತನೆಯ ಮಂತ್ರದ ವ್ಯಾಖ್ಯಾನ

| | |
|---|---|
| ಋತಸ್ಯ ತ್ವಾ ಸತ್ಯಾಯ ಇತ್ಯಾಹ | 'ಯಜ್ಞದ ಸಂಪೂರ್ಣ ಸತ್ಯತೆಗಾಗಿ ನಿನ್ನನ್ನು ಅಳೆಯುತ್ತೇನೆ' ಎಂದು ಈ ಮಂತ್ರವು ಹೇಳುತ್ತದೆ. |
| ದಿಶಃ ವೈ ಋತಸ್ಯ ಸತ್ಯಮ್ | ದಿಕ್ಕುಗಳೇ/ದಿಗ್ದೇವತೆಗಳಾದ ಅಗ್ನ್ಯಾದಿಗಳೇ ಯಜ್ಞದ ಅವಿನಾಶಿತ್ವಕ್ಕೆ ಕಾರಣರಾಗಿದ್ದಾರೆ. |

ದಿಶ ಏವಾಭಿ ಜಯತ್ಯೃತಸ್ಯ ತ್ವಾ ಜ್ಯೋತಿಷ ಇತ್ಯಾಹ

ಸುವರ್ಗೋ ವೈ ಲೋಕ ಋತಸ್ಯ ಜ್ಯೋತಿಸ್ಸುವರ್ಗಮೇವ

ಲೋಕಮಭಿಜಯ-

---

ದಿಶಃ । ಏವ । ಅಭೀತಿ । ಜಯತಿ । ಋತಸ್ಯ । ತ್ವಾ । ಜ್ಯೋತಿಷೇ । ಇತಿ । ಆಹ ।

ಸುವರ್ಗ ಇತಿ ಸುವಃ-ಗಃ । ವೈ । ಲೋಕಃ । ಋತಸ್ಯ । ಜ್ಯೋತಿಃ । ಸುವರ್ಗಮಿತಿ

ಸುವಃ-ಗಮ್ । ಏವ । ಲೋಕಮ್ । ಅಭೀತಿ । ಜಯತಿ ।

---

| | |
|---|---|
| ದಿಶಃ ಏವ ಅಭಿಜಯತಿ | [ಯಜಮಾನನು ಈ ಮಂತ್ರದಿಂದ ಸೋಮಮಾನವನ್ನು ಮಾಡುವುದರಿಂದ] ದಿಕ್ಕುಗಳನ್ನೇ ಗೆಲ್ಲುತ್ತಾನೆ. |

ಹತ್ತನೆಯ ಮಂತ್ರದ ವ್ಯಾಖ್ಯಾನ

| | |
|---|---|
| ಋತಸ್ಯ ತ್ವಾ ಜ್ಯೋತಿಷೇ ಇತ್ಯಾಹ | ಈ ಮಂತ್ರವು 'ಯಜ್ಞದ ಜ್ಯೋತಿಃಸ್ವರೂಪನಾದ ಪರಮಾತ್ಮನಿಗಾಗಿ ಸೋಮಲತೆಯಾದ ನಿನ್ನನ್ನು ಅಳೆಯುತ್ತೇನೆ' ಎಂದು ಹೇಳುತ್ತದೆ. |
| ಸುವರ್ಗಃ ವೈ ಲೋಕಃ ಋತಸ್ಯ ಜ್ಯೋತಿಃ | ಸರ್ವದಾ ಸುಖಸ್ವರೂಪವಾಗಿಯೇ ಇರುವ ಸ್ವರ್ಗ ಲೋಕವೇ ಯಜ್ಞದ ಫಲಪ್ರಕಾಶಕವಾಗಿದೆ. |
| ಸುವರ್ಗಮ್ ಏವ ಲೋಕಮ್ ಅಭಿಜಯತಿ | [ಈ ಮಂತ್ರದಿಂದ]ಯಜಮಾನನು ಸ್ವರ್ಗಲೋಕವನ್ನೇ ಜಯಿಸುತ್ತಾನೆ. |

---

ಆರನೆಯ ಮಂತ್ರದಿಂದ ಸೋಮಲತಾಮಾನವನ್ನು ಮಾಡುವುದರಿಂದ ಭೂಲೋಕವನ್ನೂ, ಏಳನೆಯ ಮಂತ್ರದಿಂದ ಮಾಡುವ ಸೋಮಲತಾಮಾನದಿಂದ ಅಂತರಿಕ್ಷಲೋಕವನ್ನೂ ಜಯಿಸುತ್ತಾನೆ. ಎಂಟನೆಯ ಮಂತ್ರದಿಂದ ಸೋಮಲತಾಮಾನವನ್ನು ಮಾಡುವುದರಿಂದ ದ್ಯುಲೋಕವನ್ನೂ, ಒಂಬತ್ತನೆಯ ಮಂತ್ರದಿಂದ ಸೋಮಮಾನವನ್ನು ಮಾಡಿ

ತ್ಯೇತಾವಂತೋ ವೈ ದೇವಲೋಕಾಸ್ತಾನೇವಾಭಿ

ಜಯತಿ ದಶ ಸಂಪದ್ಯಂತೇ

---

ಏತಾವಂತಃ । ವೈ । ದೇವಲೋಕಾ ಇತಿ ದೇವ-ಲೋಕಾಃ । ತಾನ್ । ಏವ ।

ಅಭೀತಿ । ಜಯತಿ । ದಶ । ಸಮಿತಿ । ಪದ್ಯಂತೇ ।

---

ಮೊದಲಿನ ಐದು ಮಂತ್ರಗಳ ಪ್ರಶಂಸೆ

| | |
|---|---|
| ಏತಾವಂತಃ ವೈ ದೇವಲೋಕಾಃ | ದೇವಲೋಕಗಳು 'ಋತಸ್ಯ ತ್ವಾ ವ್ಯೋಮನೇ' ಮೊದಲಾದ ಐದು ಮಂತ್ರಗಳಲ್ಲಿ ಹೇಳಿರುವಷ್ಟು ತಾನೇ! |
| ತಾನ್ ಏವ ಅಭಿಜಯತಿ | ಅವುಗಳನ್ನು ಯಜಮಾನನು ಜಯಿಸುತ್ತಾನೆ. |

ದಶಸಂಖ್ಯೆಯ ಪ್ರಶಂಸೆ

| | |
|---|---|
| ದಶ ಸಂಪದ್ಯಂತೇ | ಈ ಸೋಮಮಾನದ ಮಂತ್ರಗಳು ಹತ್ತಾಗಿವೆ. |

---

ದಿಕ್ಕುಗಳನ್ನೇ ಗೆಲ್ಲುವನು. ಕಡೆಯದಾದ ಹತ್ತನೆಯ ಮಂತ್ರದಿಂದ ಸೋಮಮಾನವನ್ನು ಮಾಡಿ ಸ್ವರ್ಗಲೋಕವನ್ನೇ ಜಯಿಸುವನು.

ಈ ಮೇಲಿನ ಹತ್ತು ಮಂತ್ರಗಳ ತಾತ್ಪರ್ಯವು ಮಂತ್ರಗಳ ವ್ಯಾಖ್ಯಾನದಲ್ಲಿಯೇ ಇದೆ. ಇಲ್ಲಿ ಬರುವ ವ್ಯೋಮ, ವಿಭೂಮ, ವಿಧರ್ಮ,ಸತ್ಯ,ಜ್ಯೋತಿ, ಋತ,ಸತ್ಯ ಮುಂತಾದ ಶಬ್ದಗಳಿಗೆ 'ಇಯಂ ವಾ ಋತಸ್ಯ ವ್ಯೋಮ' ಎಂದು ಮೊದಲಾಗಿ ಬ್ರಾಹ್ಮಣವು ವಿವರಿಸಿದೆ. ಈ ವೈದಿಕನಿರುಕ್ತವನ್ನು ಅಥವಾ ನಿರ್ವಚನವನ್ನು ಗಮನಿಸಿ, ಭಾಷ್ಯ ಕಾರರು ಲಾಕ್ಷಣಿಕವಾದ ಅರ್ಥವನ್ನು ನೀಡಿರುತ್ತಾರೆ. ಅದನ್ನೇ ಇಲ್ಲಿ ಅನುಸರಿ ಸಲಾಗಿದೆ.

ಈ ಮಂತ್ರಗಳ ಪ್ರಶಂಸೆ ಮಾಡುವುದೇ ಇಲ್ಲಿನ ಮುಖ್ಯ ತಾತ್ಪರ್ಯ.

'ಋತಸ್ಯ ತ್ವಾ ವ್ಯೋಮನೇ'ಮುಂತಾದ ಮೊದಲಿನ ಐದು ಮಂತ್ರಗಳಿಂದ

ದಶಾಕ್ಷರಾ ವಿರಾಡನ್ನಂ ವಿರಾಡ್ವಿರಾಜ್ಯೇವಾನ್ನಾದ್ಯೇ ಪ್ರತಿತಿಷ್ಠತಿ ॥೧೫-5॥

[ವ್ಯೋಮನ ಋತಸ್ಯ ಪ್ರಾಣಃ ಪಶೂನೇವ ವಿಧರ್ಮ ದಿವಮೇವಾಭಿಜಯತ್ಯೃತಸ್ಯ ಷಟ್ಚತ್ವಾರಿಗ್ಂಶಚ್ಚ ॥]

---

ದಶಾಕ್ಷರೇತಿ ದಶ-ಅಕ್ಷರಾ । ವಿರಾಡಿತಿ ವಿ-ರಾಟ್ । ಅನ್ನಮ್ । ವಿರಾಡಿತಿ ವಿ-ರಾಟ್ । ವಿರಾಜೀತಿ ವಿ-ರಾಜಿ । ಏವ । ಅನ್ನಾದ್ಯ ಇತ್ಯನ್ನ-ಅದ್ಯೇ । ಪ್ರತೀತಿ । ತಿಷ್ಠತಿ ॥೧೫॥

---

| | |
|---|---|
| ದಶಾಕ್ಷರಾ ವಿರಾಟ್ | ವಿರಾಟ್ ಛಂದಸ್ಸು ಹತ್ತು ಅಕ್ಷರಗಳುಳ್ಳದ್ದು ಆಗಿದೆ. |
| ಅನ್ನಮ್ ವಿರಾಟ್ | ವಿರಾಟ್ ಛಂದಸ್ಸು ಅನ್ನಪ್ರಾಪ್ತಿಗೆ ಸಾಧನವಾಗಿದೆ. |
| ವಿರಾಜಿ ಏವ ಅನ್ನಾದ್ಯೇ ಪ್ರತಿತಿಷ್ಠತಿ | [ಈ ಹತ್ತು ಮಂತ್ರಗಳಿಂದ ಸೋಮಮಾನವನ್ನು ಮಾಡುವುದರಿಂದ] ಯಜಮಾನನು ಅನ್ನವನ್ನು ಹೊಂದುತ್ತಾನೆ. ಅನ್ನಭೋಗಸಾಮರ್ಥ್ಯದಲ್ಲಿಯೂ ಸ್ಥಿರನಾಗಿರುತ್ತಾನೆ. |

---

ಹೇಳಿರುವುದಷ್ಟೇ ದೇವಲೋಕಗಳು ತಾನೇ! ಅವುಗಳನ್ನು ಯಜಮಾನನು ಪಡೆಯುವನು. ದಶಸಂಖ್ಯೆಯಿಂದ ಅನ್ನವನ್ನೂ ಅನ್ನಭೋಗಸಾಮರ್ಥ್ಯವನ್ನೂ ಪಡೆಯುವನು. ಇದು ದಶಸಂಖ್ಯೆಯ ಪ್ರಶಂಸೆ.

---

## ವಿನಿಯೋಗಸಂಗ್ರಹ

ವಾಯುರ್ದಶ ದ್ವಾದಶಾಹೇ ಪೃಶ್ನಿಗ್ರಹಣಮಂತ್ರಕಾಃ।

ಅನುವಾಕದಲ್ಲಿರುವ ಮಂತ್ರಸಂಖ್ಯೆ-10

## ॥ ಷಷ್ಠೋಽನುವಾಕಃ ॥

ದೇವಾ ವೈ ಯದ್ಯಜ್ಞೇನ ನಾಽವಾರುಂಧತ

ತತ್ಪರ್ೈರವಾರುಂಧತ

---

ದೇವಾಃ । ವೈ । ಯತ್ । ಯಜ್ಞೇನ । ನ । ಅವಾರುಂಧತೇತ್ಯವ–ಅರುಂಧತ । ತತ್ ।

ಪರ್ೈಃ । ಅವೇತಿ । ಅರುಂಧತ ।

---

ಈ ಆರನೆಯ ಅನುವಾಕದಲ್ಲಿ ಗವಾಮಯನದ ಪರಸ್ಸಾಮಗಳೆಂಬ ವಿಶೇಷಗಳು ಹೇಳಲ್ಪಡುತ್ತವೆ.

ಗವಾಮಯನವೆಂಬ ಸಂವತ್ಸರಸಾಧ್ಯವಾದ ಸತ್ರಯಾಗವಿದೆ. ಇದರಲ್ಲಿ ಆರು ತಿಂಗಳು ಪೂರ್ವಭಾಗ. ಆರು ತಿಂಗಳು ಉತ್ತರಭಾಗ. ಮಧ್ಯದಲ್ಲಿ ವಿಷುವತ್ ಎಂಬ ಮುಖ್ಯಸೋಮಯಾಗ. ಹೀಗೆ 360 ದಿನಗಳ ಸತ್ರಯಾಗವಿದು. ಆರು ತಿಂಗಳುಗಳ ಕೊನೆಯ ಮೂರು ದಿನಗಳಲ್ಲಿ ಪರಃಸಾಮಸಂಜ್ಞಕವಾದ ಅತಿಗ್ರಾಹ್ಯಗಳ ಗ್ರಹಣ. ಎರಡನೆಯ ಆರು ತಿಂಗಳುಗಳ ಮೊದಲನೆಯ ಮೂರು ದಿನಗಳಲ್ಲಿ ಅರ್ವಾಕ್ಸಾಮ ಸಂಜ್ಞಕವಾದ ಮೂರು ಅತಿಗ್ರಾಹ್ಯಗಳ ಗ್ರಹಣ. ಇವುಗಳು ಪರಃಸಾಮಗಳ ಪ್ರತಿ ಲೋಮಕ್ರಮದಲ್ಲಿರಬೇಕು. **'ವಿಷುವತ್'** ದಿನ [ಮಧ್ಯದಿನ] ಆರು ಅತಿಗ್ರಾಹ್ಯಗಳೂ ಉಂಟು. ಇವುಗಳು ಅನುಲೋಮ–ಪ್ರತಿಲೋಮಕ್ರಮದಲ್ಲಿರಬೇಕು.

---

### ಪರಃಸಾಮವಿಧಿಗಾಗಿ ಉಪಾಖ್ಯಾನ

| | |
|---|---|
| ದೇವಾಃ ವೈ ಯತ್ ಯಜ್ಞೇನ ನ ಅವಾರುಂಧತ | ದೇವತೆಗಳು ಯಾವ ಫಲವನ್ನು ಯಜ್ಞದಿಂದ ಪಡೆಯಲಿಲ್ಲವೋ |
| ತತ್ ಪರ್ೈಃ ಅವಾರುಂಧತ | ಆ ಫಲವನ್ನು ಪರಃಸಾಮದ ಅತಿಗ್ರಾಹ್ಯಗಳಿಂದ ಪಡೆದರು. |

ತತ್ಪರಾಣಾಂ ಪರತ್ವಂ ಯತ್ಪರೇ ಗೃಹ್ಯಂತೇ ಯದೇವ

ಯಜ್ಞೇನ ನಾವರುಂಧೇ ತಸ್ಯಾವರುದ್ಧ್ಯೈ ಯಂ ಪ್ರಥಮಂ

ಗೃಹ್ಣಾತೀಮಮೇವ ತೇನ ಲೋಕಮಭಿ ಜಯತಿ

---

ತತ್ । ಪರಾಣಾಮ್ । ಪರತ್ವಮಿತಿ ಪರ-ತ್ವಮ್ । ಯತ್ । ಪರೇ । ಗೃಹ್ಯಂತೇ ।

ಯತ್ । ಏವ । ಯಜ್ಞೇನ । ನ । ಅವರುಂಧ ಇತ್ಯವ-ರುಂಧೇ । ತಸ್ಯ । ಅವರುದ್ಧ್ಯಾ

ಇತ್ಯವ-ರುದ್ಧ್ಯೈ । ಯಮ್ । ಪ್ರಥಮಮ್ । ಗೃಹ್ಣಾತಿ । ಇಮಮ್ । ಏವ । ತೇನ ।

ಲೋಕಮ್ । ಅಭೀತಿ । ಜಯತಿ ।

---

| | |
|---|---|
| ತತ್ ಪರಾಣಾಮ್ ಪರತ್ವಮ್ | ಅದೇ ಪರಗಳ [ಅಭೀಷ್ಟದ ಕೊನೆಯನ್ನು ಹೊಂದಿಸುತ್ತವೆ ಎಂಬರ್ಥದ] ಅನ್ವರ್ಥವಾದ ನಾಮಧೇಯವಾಗಿದೆ. |

ಪರಃಸಾಮವಿಧಿಗಳ ವಿಧಿ; ಪ್ರಶಂಸೆ

| | |
|---|---|
| ಯತ್ ಪರೇ ಗೃಹ್ಯಂತೇ | ಪರಃಸಾಮಗಳು ಗ್ರಹಣ ಮಾಡಲ್ಪಡಬೇಕು.[ವಿಧಿ] |
| ಯತ್ ಏವ ಯಜ್ಞೇನ ನ ಅವರುಂಧೇ | ಯಾವ ಫಲವನ್ನು ಪರಃಸಾಮರಹಿತವಾದ ಯಜ್ಞದಿಂದ ಹೊಂದಲಾಗುವುದಿಲ್ಲವೋ |
| ತಸ್ಯ ಅವರುದ್ಧ್ಯೈ | ಆ ಫಲಪ್ರಾಪ್ತಿಗಾಗಿ ಈ ಪರಸ್ಸಾಮಗಳನ್ನು ಗ್ರಹಣ ಮಾಡಬೇಕು. |

ವಿಶೇಷರೂಪವಾಗಿ ಪರಃಸಾಮಗಳ ಪ್ರಶಂಸೆ

| | |
|---|---|
| ಯಮ್ ಪ್ರಥಮಮ್ ಗೃಹ್ಣಾತಿ | ಪ್ರಥಮಪರಸ್ಸಾಮಾತಿಗ್ರಾಹ್ಯವನ್ನು ಗ್ರಹಣ ಮಾಡುವುದು ಯಾವುದುಂಟೋ |
| ಇಮಮ್ ಲೋಕಮ್ ಏವ ತೇನ ಅಭಿಜಯತಿ | ಅದರಿಂದ ಈ ಭೂಲೋಕವನ್ನು ಯಜಮಾನನು ಜಯಿಸುತ್ತಾನೆ. |

ಯಂ ದ್ವಿತೀಯಮಂತರಿಕ್ಷಂ ತೇನ ಯಂ

ತೃತೀಯಮಮುಮೇವ ತೇನ ಲೋಕಮಭಿ ಜಯತಿ

ಯದೇತೇ ಗೃಹ್ಯಂತ

---

ಯಮ್ । ದ್ವಿತೀಯಮ್ । ಅಂತರಿಕ್ಷಮ್ । ತೇನ । ಯಮ್ । ತೃತೀಯಮ್ ।

ಅಮುಮ್ । ಏವ । ತೇನ । ಲೋಕಮ್ । ಅಭೀತಿ । ಜಯತಿ । ಯತ್ । ಏತೇ ।

ಗೃಹ್ಯಂತೇ ।

---

| | |
|---|---|
| ಯಮ್ ದ್ವಿತೀಯಮ್ [ಗೃಹ್ಣಾತಿ] | ಎರಡನೆಯ ಪರಸ್ಸಾಮಾತಿಗ್ರಾಹ್ಯದ ಯಾವ ಗ್ರಹಣವಿದೆಯೋ |
| ತೇನ ಅಂತರಿಕ್ಷಮ್ [ಲೋಕಮ್ ಅಭಿಜಯತಿ] | ಆದರಿಂದ ಅಂತರಿಕ್ಷಲೋಕವನ್ನು ಯಜಮಾನನು ಜಯಿಸುತ್ತಾನೆ. |
| ಯಮ್ ತೃತೀಯಮ್ [ಗೃಹ್ಣಾತಿ] | ಮೂರನೆಯ ಪರಸ್ಸಾಮಾತಿಗ್ರಾಹ್ಯದ ಗ್ರಹಣವು ಯಾವುದುಂಟೋ |
| ತೇನ ಅಮುಮ್ ಏವ ಲೋಕಮ್ ಅಭಿಜಯತಿ | ಆದರಿಂದ ಸ್ವರ್ಗಲೋಕವನ್ನು ಯಜಮಾನನು ಜಯಿಸುತ್ತಾನೆ. |
| ಯತ್ ಏತೇ ಗೃಹ್ಯಂತೇ | ಈ ಮೂರು ಅತಿಗ್ರಾಹ್ಯಗಳ ಗ್ರಹಣವು ಯಾವುದುಂಟೋ |

---

ಇದು ಉಪಾಖ್ಯಾನವಿದ್ದಂತೆ. ಪರಃಸಾಮ ಮತ್ತು ಅತಿಗ್ರಾಹ್ಯವಿಧಿಗಳಿಗೆ ಪೀಠಿಕೆಯಂತೆ ಇದೆ.

ಪರಃಸಾಮಾತಿಗ್ರಾಹ್ಯವನ್ನು ಗ್ರಹಣ ಮಾಡಬೇಕು. ಪರಸ್ಸಾಮರಹಿತವಾದ ಯಜ್ಞದಿಂದ ಹೊಂದಲಾಗದ ಫಲವನ್ನು ಪಡೆಯುವುದಕ್ಕಾಗಿ ಅದನ್ನು ಗ್ರಹಣ ಮಾಡಿ, ಫಲವನ್ನು ಪಡೆಯಬೇಕು.

ಏಷಾಂ ಲೋಕಾನಾಮಭಿಜಿತ್ಯಾ [ಜಿತ್ಯೈ(೧೬)]

ಉತ್ತರೇಷ್ವಹಸ್ಸ್ವಮುತೋಽರ್ವಾಂಚೋ

ಗೃಹ್ಯಂತೇಽಭಿಜಿತ್ಯೈವೇ-

---

ಏಷಾಮ್ । ಲೋಕಾನಾಮ್ । ಅಭಿಜಿತ್ಯಾ ಇತ್ಯಭಿ-ಜಿತ್ಯೈ ।(೧೬)। ಉತ್ತರೇಷ್ವಿತ್ಯುತ್-ತರೇಷು । ಅಹಸ್ಸ್ವಿತ್ಯಹಃ-ಸು । ಅಮುತಃ । ಅರ್ವಾಂಚಃ । ಗೃಹ್ಯಂತೇ । ಅಭಿಜಿತ್ಯೇತ್ಯಭಿ-ಜಿತ್ಯ । ಏವ ।

---

| | |
|---|---|
| ಏಷಾಮ್ ಲೋಕಾನಾಮ್ ಅಭಿಜಿತ್ಯೈ | ಅದು ಈ ಮೂರು ಲೋಕಗಳ ಜಯಕ್ಕೆ ಕಾರಣ ವಾಗುತ್ತದೆ. |

ವಿಷುವತ್ತಿನ ಮುಂದಿನ ದಿನಗಳಲ್ಲಿ ವಿಪರೀತಕ್ರಮದಿಂದ ಅತಿಗ್ರಾಹ್ಯವಿಧಾನ; ಪ್ರಶಂಸೆ

| | |
|---|---|
| ಉತ್ತರೇಷು ಅಹಸ್ಸು ಅಮುತಃ ಅರ್ವಾಂಚಃ ಗೃಹ್ಯಂತೇ | ವಿಷುವತ್ತಿನ ಮುಂದಿನ ಮೂರು ದಿನಗಳಲ್ಲಿ ಕೊನೆಯ ಪರಸ್ಸಾಮಾತಿಗ್ರಾಹ್ಯದಿಂದ ವಿಪರೀತ ಕ್ರಮದಿಂದ ಗ್ರಹಣ ಮಾಡಲ್ಪಡಬೇಕು. |
| ಇಮಾನ್ ಲೋಕಾನ್ ಅಭಿಜಿತ್ಯ ಏವ | ಈ ಮನುಷ್ಯಲೋಕ, ಅಂತರಿಕ್ಷಲೋಕ, ದ್ಯು ಲೋಕಗಳನ್ನು ಜಯಿಸಿಯೇ |

---

ಪ್ರಥಮ, ದ್ವಿತೀಯ ಹಾಗೂ ತೃತೀಯಪರಸ್ಸಾಮಾತಿಗ್ರಾಹ್ಯದ ಗ್ರಹಣದಿಂದ ಭೂಲೋಕ, ಅಂತರಿಕ್ಷಲೋಕ ಹಾಗೂ ಸ್ವರ್ಗಲೋಕಗಳನ್ನು ಯಜಮಾನನು ಜಯಿಸುತ್ತಾನೆ.

ಈ ರೀತಿ ಪರಸ್ಸಾಮಾತಿಗ್ರಾಹ್ಯಗಳ ಗ್ರಹಣವನ್ನು ಮೊದಲು ಪ್ರತ್ಯೇಕವಾಗಿ ಪ್ರಶಂಸಿಸಿ, ಮತ್ತೆ ಒಟ್ಟಾಗಿ ಪ್ರಶಂಸಿಸಲಾಗಿದೆ.

ಮಾನ್ಲೋಕಾನ್ಪುನರಿಮಂ ಲೋಕಂ ಪ್ರತ್ಯವರೋಹಂತಿ

ಯತ್ಪೂರ್ವೇಷ್ವಹಸ್ಸ್ವಿತಃ ಪರಾಂಚೋ ಗೃಹ್ಯಂತೇ

ತಸ್ಮಾದಿತಃ ಪರಾಂಚ ಇಮೇ ಲೋಕಾ

---

ಇಮಾನ್ । ಲೋಕಾನ್ । ಪುನಃ । ಇಮಮ್ । ಲೋಕಮ್ । ಪ್ರತ್ಯವರೋಹಂತೀತಿ ಪ್ರತಿ–ಅವರೋಹಂತಿ । ಯತ್ । ಪೂರ್ವೇಷು । ಅಹಸ್ಸ್ವಿತ್ಯಹಃ–ಸು । ಇತಃ । ಪರಾಂಚಃ । ಗೃಹ್ಯಂತೇ । ತಸ್ಮಾತ್ । ಇತಃ । ಪರಾಂಚಃ । ಇಮೇ । ಲೋಕಾಃ ।

---

| | |
|---|---|
| ಪುನಃ ಇಮಂ ಲೋಕಮ್ ಪ್ರತ್ಯವರೋಹಂತಿ | ಮತ್ತೆ ಈ ಲೋಕವನ್ನು ಕುರಿತು ಇಳಿದು ಬರುತ್ತಾರೆ. |

### ವಿಷುವತ್ತಿನ ದಿನ ಮಾಡಬೇಕಾದ ಆರು ಪರಸ್ಸಾಮಾತಿಗ್ರಾಹ್ಯಗಳ ಗ್ರಹಣದ ಪ್ರಶಂಸೆ

| | |
|---|---|
| ಯತ್ ಪೂರ್ವೇಷು ಅಹಸ್ಸು ಇತಃ ಪರಾಂಚಃ ಗೃಹ್ಯಂತೇ | ವಿಷುವತ್ತಿನ ಮೊದಲಿನ ಮೂರು ದಿನಗಳಲ್ಲಿ ಅನುಕ್ರಮವಾಗಿ ಮುಂದು ಮುಂದಿನ ಪರಸ್ಸಾಮಗಳು ಗ್ರಹಣ ಮಾಡಲ್ಪಡುತ್ತವೆಯೆಂಬುದು ಏನಿದೆಯೋ |
| ತಸ್ಮಾತ್ ಇತಃ ಪರಾಂಚಃ ಇಮೇ ಲೋಕಾಃ | ಆದುದರಿಂದ ಭೂಲೋಕಾದಿಗಳು ಮೇಲು ಮೇಲಿನ ಕ್ರಮದಲ್ಲಿ ಇವೆ. |

---

ವಿಷುವತ್ತಿನ ಮುಂದಿನ ಮೂರು ದಿನಗಳಲ್ಲಿ ಮೊದಲು ಮೂರನೆಯ ಅತಿಗ್ರಾಹ್ಯ, ಬಳಿಕ ಎರಡನೆಯ ಅತಿಗ್ರಾಹ್ಯ, ಅನಂತರ ಮೊದಲನೆಯ ಅತಿಗ್ರಾಹ್ಯ–ಈ ಕ್ರಮದಲ್ಲಿ ಗ್ರಹಣವನ್ನು ಮಾಡಬೇಕು.

ಯದುತ್ತರೇಷ್ವಹಸ್ಸ್ವಮುತೋಽರ್ವಾಂಚೋ ಗೃಹ್ಯಂತೇ

ತಸ್ಮಾದಮುತೋಽರ್ವಾಂಚ ಇಮೇ ಲೋಕಾಸ್ತಸ್ಮಾದ

ಯಾತಯಾಮ್ನೋ ಲೋಕಾನ್ಮನುಷ್ಯಾ ಉಪಜೀವಂತಿ

---

ಯತ್ । ಉತ್ತರೇಷ್ವಿತ್ಯುತ್-ತರೇಷು । ಅಹಸ್ಸ್ವಿತ್ಯಹಃ-ಸು । ಅಮುತಃ । ಅರ್ವಾಂಚಃ । ಗೃಹ್ಯಂತೇ । ತಸ್ಮಾತ್ । ಅಮುತಃ । ಅರ್ವಾಂಚಃ । ಇಮೇ । ಲೋಕಾಃ । ತಸ್ಮಾತ್ । ಅಯಾತಯಾಮ್ನ ಇತ್ಯಯಾತ-ಯಾಮ್ನಃ । ಲೋಕಾನ್ । ಮನುಷ್ಯಾಃ । ಉಪೇತಿ । ಜೀವಂತಿ ।

---

| | |
|---|---|
| ಯತ್ ಉತ್ತರೇಷು ಅಹಸ್ಸು | ವಿಷುವತ್ತಿನ ಮುಂದಿನ ಮೂರು ದಿನಗಳಲ್ಲಿ |
| ಅಮುತಃ ಅರ್ವಾಂಚಃ | ವಿಪರೀತಕ್ರಮದಿಂದ ಅರ್ವಾಕ್ಸಾಮಾತಿಗ್ರಾಹ್ಯ |
| ಗೃಹ್ಯಂತೇ | ಗಳು ಗ್ರಹಿಸಲ್ಪಡುತ್ತವೆಯೋ |
| ತಸ್ಮಾತ್ ಇಮೇ ಲೋಕಾಃ | ಆದುದರಿಂದ ಈ ಅಂತರಿಕ್ಷ-ಭೂಮ್ಯಾದಿಲೋಕ |
| ಅಮುತಃ ಅರ್ವಾಂಚಃ | ಗಳು ಆ ಸ್ವರ್ಗಲೋಕದಿಂದ ಕೆಳಗಿನವುಗಳಾಗಿವೆ. |
| ತಸ್ಮಾತ್ ಮನುಷ್ಯಾಃ | ಆದುದರಿಂದ ಮಾನವರು ರಸವನ್ನು ಕಳೆದು |
| ಅಯಾತಯಾಮ್ನಃ | ಕೊಳ್ಳದ/ಮೊದಲು ಅನುಭವಿಸಿರದ ಲೋಕಗಳನ್ನು |
| ಲೋಕಾನ್ ಉಪಜೀವಂತಿ | ಅಪೇಕ್ಷಿಸಿ ಬಾಳುತ್ತಾರೆ. |

---

ಮೊದಲಿನ ಪರಃಸಾಮಗಳಿಂದ ಕ್ರಮವಾಗಿ ಭೂಮಿ-ಅಂತರಿಕ್ಷ ಹಾಗೂ ದ್ಯುಲೋಕಗಳನ್ನು ಏರುತ್ತಾರೆ. ವಿಷುವದ ಅನಂತರ ಮೂರು ದಿನಗಳಲ್ಲಿ ವಿಲೋಮ ಕ್ರಮದಲ್ಲಿ ಅರ್ವಾಕ್ಸಾಮಗಳನ್ನು ಗ್ರಹಣ ಮಾಡುವುದರಿಂದ ಅವರೋಹಣ ಕ್ರಮದಲ್ಲಿ ಮತ್ತೆ ಭೂಲೋಕಕ್ಕೆ ಇಳಿದು ಬರುತ್ತಾರೆ.

ವಿಷುವತ್ತಿನ ದಿನ ಅನುಲೋಮ-ವಿಲೋಮಕ್ರಮಗಳೆರಡನ್ನೂ ಅನುಸರಿಸಿ ಆರು

ಬ್ರಹ್ಮವಾದಿನೋ ವದಂತಿ ಕಸ್ಮಾಥ್ಸತ್ಯಾದದ್ಭ್ಯ ಓಷಧಯ ಸ್ಸಂಭವಂತ್ಯೋಷಧಯೋ [ಧಯಃ(೧೭)ಮನುಷ್ಯಾ] ಮನುಷ್ಯಾಣಾಮನ್ನಂ ಪ್ರಜಾಪತಿಂ ಪ್ರಜಾ ಅನು ಪ್ರಜಾಯಂತ

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಕಸ್ಮಾತ್ । ಸತ್ಯಾತ್ । ಅದ್ಭ್ಯ ಇತ್ಯತ್-ಭ್ಯಃ । ಓಷಧಯಃ । ಸಮಿತಿ । ಭವಂತಿ । ಓಷಧಯಃ ।(೧೭)। ಮನುಷ್ಯಾಣಾಮ್ । ಅನ್ನಮ್ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಜಾ ಇತಿ ಪ್ರ-ಜಾಃ। ಅನು। ಪ್ರೇತಿ। ಜಾಯಂತೇ।

---

### ಪರಸ್ಸಾಮಾತಿಗ್ರಾಹ್ಯಮಂತ್ರಗಳ ವಿಧಿಗಾಗಿ ಪೀಠಿಕೆ

| | |
|---|---|
| ಬ್ರಹ್ಮವಾದಿನಃ ಕಸ್ಮಾತ್ ಸತ್ಯಾತ್ ಅದ್ಭ್ಯಃ ಓಷಧಯಃ ಸಂಭವಂತಿ | ವೇದವಿದರು ಯಾವ ಸತ್ಯವಾದ ಕಾರಣದಿಂದ ಸಸ್ಯಗಳು ಹುಟ್ಟುತ್ತವೆ? |
| ಓಷಧಯಃ ಮನುಷ್ಯಾಣಾಮ್ ಅನ್ನಮ್ | [ಯಾವ ಕಾರಣದಿಂದ] ಸಸ್ಯಗಳು ಮನುಷ್ಯರ ಅನ್ನವಾಗಿವೆ? |
| ಪ್ರಜಾಃ ಪ್ರಜಾಪತಿಮ್ ಅನು ಪ್ರಜಾಯಂತೇ ಇತಿ ವದಂತಿ | [ಯಾವ ಕಾರಣದಿಂದ]ಪ್ರಜಾಪತಿಬ್ರಹ್ಮನನ್ನು ಅನುಸರಿಸಿ ಪ್ರಜೆಗಳು ಜನಿಸುತ್ತಾರೆ? ಎಂದು ಚರ್ಚಿಸುತ್ತಾರೆ. |

---

ಪರಸ್ಸಾಮಾತಿಗ್ರಾಹ್ಯಗಳ ಗ್ರಹಣವನ್ನು ಮಾಡಬೇಕು. ವಿಷುವತ್ತಿನ ಮುಂದಿನ ಮೂರು ದಿನಗಳಲ್ಲಿ ಮೊದಲನೆಯ ದಿನ ಮೂರನೆಯದು, ಎರಡನೆಯ ದಿನ ಎರಡನೆಯದು, ಮೂರನೆಯ ದಿನ ಮೊದಲನೆಯದು– ಈ ಕ್ರಮದಲ್ಲಿ ಗ್ರಹಣವನ್ನು ಮಾಡಬೇಕು. ಹೀಗೆ

ಇತಿ ಪರಾನನ್ವಿತಿ ಬ್ರೂಯಾದ್ಯ

ದ್ಗೃಹ್ಣಾತ್ಯದ್ಭ್ಯಸ್ತ್ವೌಷಧೀಭ್ಯೋ ಗೃಹ್ಣಾಮೀತಿ

---

ಇತಿ । ಪರಾನ್ । ಅನ್ವಿತಿ । ಇತಿ । ಬ್ರೂಯಾತ್ । ಯತ್ । ಗೃಹ್ಣಾತಿ । ಅದ್ಭ್ಯ

ಇತ್ಯತ್-ಭ್ಯಃ । ತ್ವಾ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಗೃಹ್ಣಾಮಿ । ಇತಿ ।

---

| | |
|---|---|
| ಪರಾನ್ ಅನು ಇತಿ ಬ್ರೂಯಾತ್ | [ವೇದರಹಸ್ಯವನ್ನು ತಿಳಿದವನು] ಪರಸ್ಸಾಮಾತಿಗ್ರಾಹ್ಯಗಳ ಗ್ರಹಣವನ್ನು ಅನುಸರಿಸಿಯೇ ಹೀಗಾಗಿದೆ ಎಂದು ಉತ್ತರಿಸುವನು. |

---

| ಮಂತ್ರ | ವಿನಿಯೋಗ |
|---|---|
| ಅದ್ಭ್ಯಃ...ಗೃಹ್ಣಾಮಿ ॥ | ಪ್ರಥಮಾತಿಗ್ರಾಹ್ಯದ ಮಂತ್ರ |

✦[ಹೇ ಪ್ರಥಮಾತಿಗ್ರಾಹ್ಯವೇ!]ತ್ವಾ=ನಿನ್ನನ್ನು; ಅದ್ಭ್ಯಃ=ನೀರುಗಳ ದೆಸೆಯಿಂದ; ಓಷಧೀಭ್ಯಃ=ಸಸ್ಯಗಳಿಗಾಗಿ;/ನೀರುಗಳಿಗೂ ಸಸ್ಯಗಳಿಗೂ; ಗೃಹ್ಣಾಮಿ=ಗ್ರಹಣ ಮಾಡುತ್ತೇನೆ.

### ಪ್ರಥಮಾತಿಗ್ರಾಹ್ಯಮಂತ್ರವಿಧಿ; ಬ್ರಾಹ್ಮಣ

| | |
|---|---|
| ಇತಿ ಯತ್ ಗೃಹ್ಣಾತಿ | ಹೀಗೆ ಗ್ರಹಣ ಮಾಡುವುದು ಯಾವುದುಂಟೋ |

---

ಮಾಡುವುದರಿಂದ ಆಮ್ನಾತಕ್ರಮದಿಂದ ಕ್ರಮವಾಗಿ ಪರಸ್ಸಾಮಾತಿಗ್ರಹಣ ಮಾಡಿರುವುದರಿಂದ ಮೇಲು ಮೇಲೆ ಏರಿದಂತಾಯಿತು. ವಿಲೋಮಕ್ರಮದಿಂದ ಗ್ರಹಣ ಮಾಡುವುದರಿಂದ ಕೆಳಕೆಳಕ್ಕೆ ಇಳಿದಂತಾಯಿತು. ಇದರಿಂದ ಅನುಭವಿಸಿದುದನ್ನೇ ಮತ್ತೆ ಅನುಭವಿಸಿದಂತಾಗುವುದಿಲ್ಲ. ಈ ಲೋಕದಿಂದ ಚ್ಯುತಿಯೂ ಆಗುವುದಿಲ್ಲ.

ಬ್ರಹ್ಮವಾದಿಗಳ ಚರ್ಚೆಗೆ ಪರಸ್ಸಾಮಾತಿಗ್ರಾಹ್ಯಗ್ರಹಣವನ್ನು ಅನುಸರಿಸಿಯೇ ಹೀಗಾಗಿದೆ ಎಂದು ಉತ್ತರವನ್ನು ವೇದರಹಸ್ಯವನ್ನು ಬಲ್ಲವರು ನೀಡುತ್ತಾರೆ.

ತಸ್ಮಾದದ್ಭ್ಯ ಓಷಧಯಸ್ಸಂಭವಂತಿ

ಯದ್ಗೃಹ್ಣಾತ್ಯೋಷಧೀಭ್ಯಸ್ತ್ವಾ ಪ್ರಜಾಭ್ಯೋ

ಗೃಹ್ಣಾಮೀತಿ ತಸ್ಮಾದೋಷಧಯೋ ಮನುಷ್ಯಾಣಾಮನ್ನಂ

---

ತಸ್ಮಾತ್ । ಅದ್ಭ್ಯ ಇತ್ಯತ್-ಭ್ಯಃ । ಓಷಧಯಃ । ಸಮಿತಿ । ಭವಂತಿ । ಯತ್ ।

ಗೃಹ್ಣಾತಿ । ಓಷಧೀಭ್ಯ ಇತ್ಯೋಷಧಿ-ಭ್ಯಃ । ತ್ವಾ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ।

ಗೃಹ್ಣಾಮಿ । ಇತಿ । ತಸ್ಮಾತ್ । ಓಷಧಯಃ । ಮನುಷ್ಯಾಣಾಮ್ । ಅನ್ನಮ್ ।

---

| | |
|---|---|
| ತಸ್ಮಾತ್ ಅದ್ಭ್ಯಃ ಓಷಧಯಃ ಸಂಭವಂತಿ | ಆದರಿಂದ ನೀರಿನಿಂದ ಸಸ್ಯಗಳು ಬೆಳೆಯುತ್ತವೆ. |

---

ದ್ವಿತೀಯಪರಸ್ಸಾಮಾತಿಗ್ರಾಹ್ಯಮಂತ್ರವಿಧಿ; ಪ್ರಶಂಸೆ

| ಮಂತ್ರ | ವಿನಿಯೋಗ |
|---|---|
| ಓಷಧೀಭ್ಯಃ...ಗೃಹ್ಣಾಮಿ ॥ | ದ್ವಿತೀಯಾತಿಗ್ರಾಹ್ಯದ ಮಂತ್ರ. |

✦[ಎಲೈ! ದ್ವಿತೀಯಾತಿಗ್ರಾಹ್ಯವೇ!]ತ್ವಾ=ನಿನ್ನನ್ನು; ಓಷಧೀಭ್ಯಃ=ಸಸ್ಯಗಳ ದೆಸೆಯಿಂದ; ಪ್ರಜಾಭ್ಯಃ ಗೃಹ್ಣಾಮಿ=ಪ್ರಜೆಗಳಿಗಾಗಿ [ಪ್ರಜೆಗಳ ಅನ್ನಸಮೃದ್ಧಿಗಾಗಿ] ಗ್ರಹಿಸುತ್ತೇನೆ.

| | |
|---|---|
| ಇತಿ ಯತ್ ಗೃಹ್ಣಾತಿ ತಸ್ಮಾತ್ ಓಷಧಯಃ ಮನುಷ್ಯಾಣಾಮ್ ಅನ್ನಮ್ | ಹೀಗೆ ಗ್ರಹಣ ಮಾಡುವುದು ಯಾವುದುಂಟೋ ಆದರಿಂದ ಸಸ್ಯವರ್ಗವು ಪ್ರಜೆಗಳಿಗೆ ಅನ್ನವಾಗುತ್ತದೆ. |

---

ಇಂತಹ ಬ್ರಹ್ಮವಾದಿಗಳ ಪ್ರಶ್ನೆ-ಉತ್ತರಗಳು ಅಲ್ಲಲ್ಲಿ ಕಂಡುಬರುತ್ತವೆ. ಇದು

ಯದ್ಗೃಹ್ಣಾತಿ ಪ್ರಜಾಭ್ಯಸ್ತ್ವಾ ಪ್ರಜಾಪತಯೇ ಗೃಹ್ಣಾಮೀತಿ

ತಸ್ಮಾತ್ಪ್ರಜಾಪತಿಂ ಪ್ರಜಾ ಅನು ಪ್ರಜಾಯಂತೇ ॥೧೮-6॥

[ಅಭಿಜಿತ್ಯೈ ಭವಂತ್ಯೋಽಷಧಯೋಽಷ್ಟಾಚತ್ವಾರಿಗ್ಂಶಚ್ಚ॥]

---

ಯತ್ । ಗೃಹ್ಣಾತಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ತ್ವಾ । ಪ್ರಜಾಪತಯ ಇತಿ ಪ್ರಜಾ-ಪತಯೇ । ಗೃಹ್ಣಾಮಿ । ಇತಿ । ತಸ್ಮಾತ್ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಜಾ ಇತಿ ಪ್ರ-ಜಾಃ । ಅನು । ಪ್ರೇತಿ । ಜಾಯಂತೇ ॥೧೮॥

---

ಮೂರನೆಯ ಅತಿಗ್ರಾಹ್ಯಮಂತ್ರದ ವಿಧಿ;ಪ್ರಶಂಸೆ

| ಮಂತ್ರ | ವಿನಿಯೋಗ |
|---|---|
| ಪ್ರಜಾಭ್ಯಃ...ಗೃಹ್ಣಾಮಿ ॥ | ತೃತೀಯಾತಿಗ್ರಾಹ್ಯದ ಮಂತ್ರ. |

✦[ಎಲೈ! ತೃತೀಯಾತಿಗ್ರಾಹ್ಯವೇ!] ತ್ವಾ=ನಿನ್ನನ್ನು; ಪ್ರಜಾಭ್ಯಃ=ಪ್ರಜೆಗಳಿಗಾಗಿಯೂ; ಪ್ರಜಾಪತಯೇ=ಪ್ರಜಾಪತಿಬ್ರಹ್ಮನಿಗಾಗಿಯೂ [ಬ್ರಹ್ಮನ ಅನುಗ್ರಹಕ್ಕಾಗಿಯೂ] ಗೃಹ್ಣಾಮಿ=ಗ್ರಹಣ ಮಾಡುತ್ತೇನೆ.

| | |
|---|---|
| ಇತಿ ಯತ್ ಗೃಹ್ಣಾತಿ | ಹೀಗೆ ಗ್ರಹಣ ಮಾಡುವುದು ಯಾವುದುಂಟೋ |
| ತಸ್ಮಾತ್ ಪ್ರಜಾಪತಿಮ್ ಅನು ಪ್ರಜಾಃ ಪ್ರಜಾಯಂತೇ | ಆದರಿಂದ ಪ್ರಜಾಪತಿಬ್ರಹ್ಮನ ಸಂಕಲ್ಪವನ್ನು ಅನುಸರಿಸಿ ಪ್ರಜೆಗಳು ಜನಿಸುತ್ತಾರೆ. |

---

ಪರಸ್ಸಾಮಾತಿಗ್ರಾಹ್ಯಮಂತ್ರವಿಧಿಗಳ ಪೀಠಿಕೆಯಾಗಿದೆ.

ಪ್ರಥಮಾತಿಗ್ರಾಹ್ಯವನ್ನು ನೀರು ಮತ್ತು ಸಸ್ಯಗಳಿಗಾಗಿಯೂ, ಎರಡನೆಯ ಅತಿಗ್ರಾಹ್ಯವನ್ನು ಪ್ರಜೆಗಳ ಅನ್ನಸಮೃದ್ಧಿಗಾಗಿಯೂ,ತೃತೀಯಪರಸ್ಸಾಮಾತಿಗ್ರಾಹ್ಯವನ್ನು ಪ್ರಜೆಗಳಿಗಾಗಿಯೂ, ಪ್ರಜಾಪತಿಬ್ರಹ್ಮನ ಅನುಗ್ರಹಕ್ಕಾಗಿಯೂ ಗ್ರಹಿಸುತ್ತಾನೆ.

ಈ ರೀತಿ ಗ್ರಹಣ ಮಾಡುವುದರಿಂದ ಫಲವನ್ನು ಹೇಳಿ ಈ ವಿಧಿಗಳನ್ನು ಪ್ರಶಂಸಿಸಲಾಗಿದೆ.

---

## ವಿನಿಯೋಗಸಂಗ್ರಹ

ಪರಾಭಿಧಾ ಅತಿಗ್ರಾಹ್ಯಾಸ್ತೇ ಗವಾಮಯನೇ ತ್ರಯಃ ।
ತೇಷ್ವದ್ಭ್ಯ1 ಓಷಧೀಭ್ಯ2ಶ್ಚ ಪ್ರಜಾಭ್ಯ3ಸ್ತ್ವೇತಿ ಮಂತ್ರಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-3.



## ॥ ಸಪ್ತಮೋಽನುವಾಕಃ ॥

ಪ್ರಜಾಪತಿರ್ದೇವಾಸುರಾನಸೃಜತ ತದನು

ಯಜ್ಞೋಽಸೃಜ್ಯತ ಯಜ್ಞಂ ಛಂದಾಗ್ಂಸಿ ತೇ

ವಿಷ್ವಂಚೋ

---

ಪ್ರಜಾಪತಿರಿತಿ ಪ್ರಜಾ–ಪತಿಃ । ದೇವಾಸುರಾನಿತಿ ದೇವ–ಅಸುರಾನ್ । ಅಸೃಜತ ।

ತತ್ । ಅನ್ವಿತಿ । ಯಜ್ಞಃ । ಅಸೃಜ್ಯತ । ಯಜ್ಞಮ್ । ಛಂದಾಗ್ಂಸಿ । ತೇ । ವಿಷ್ವಂಚಃ ।

---

ಈ ಏಳನೆಯ ಅನುವಾಕದಲ್ಲಿ ಸೋಮಾಂಗವಾದ 'ಆಶ್ರಾವಯ' ಮೊದಲಾದ ಮಂತ್ರಗಳು ಹೇಳಲ್ಪಡುತ್ತವೆ. ಅವುಗಳ ವಿಧಿಗಾಗಿ ಮೊದಲು ಉಪಾಖ್ಯಾನವು ಹೇಳಲ್ಪಟ್ಟಿದೆ.

### ಆಶ್ರಾವಯ ಮುಂತಾದ ಮಂತ್ರದ ವಿಧಿಯ ಉಪಾಖ್ಯಾನ

| | |
|---|---|
| ಪ್ರಜಾಪತಿಃ ದೇವಾಸುರಾನ್ ಅಸೃಜತ | ಒಂದು ಕಾಲದಲ್ಲಿ ಪ್ರಜಾಪತಿಬ್ರಹ್ಮನು ದೇವತೆಗಳನ್ನೂ, ಅಸುರರನ್ನೂ ಸೃಷ್ಟಿಸಿದನು. |
| ತತ್ ಅನು ಯಜ್ಞಃ ಅಸೃಜ್ಯತ | ದೇವಾಸುರಸೃಷ್ಟಿಯನ್ನು ಅನುಸರಿಸಿ ಯಜ್ಞವೂ ಪ್ರಜಾಪತಿಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿತು. |
| ಯಜ್ಞಮ್ ಅನು ಛಂದಾಗ್ಂಸಿ ಅಸೃಜ್ಯಂತ | ಯಜ್ಞವನ್ನು ಅನುಸರಿಸಿ, ಛಂದೋರೂಪವಾದ ಮಂತ್ರಗಳೂ ಸೃಜಿಸಲ್ಪಟ್ಟವು. |
| ತೇ ವಿಷ್ವಂಚಃ | ಆ ದೇವತೆಗಳು/ದೇವಾಸುರರು ನಾನಾಗತಿಗಳುಳ್ಳವರಾಗಿ |

ವ್ಯಕ್ರಾಮನ್ನೋಽಸುರಾನನು ಯಜ್ಞೋಽಪಾಕ್ರಾಮದ್ಯಜ್ಞಂ

ಛಂದಾಗ್ಂಸಿ ತೇ ದೇವಾ ಅಮನ್ಯಂತಾಮೀ ವಾ

ಇದಮಭೂವನ್, ಯದ್ವಯಗ್ಗ್ಂ ಸ್ಮ ಇತಿ

---

ವೀತಿ । ಅಕ್ರಾಮನ್ನ್ । ಸಃ । ಅಸುರಾನ್ । ಅನ್ವಿತಿ । ಯಜ್ಞಃ । ಅಪೇತಿ ।

ಅಕ್ರಾಮತ್ । ಯಜ್ಞಮ್ । ಛಂದಾಗ್ಂಸಿ । ತೇ । ದೇವಾಃ । ಅಮನ್ಯಂತ । ಅಮೀ

ಇತಿ । ವೈ । ಇದಮ್ । ಅಭೂವನ್ನ್ । ಯತ್ । ವಯಮ್ । ಸ್ಮಃ । ಇತಿ ।

---

| | |
|---|---|
| ವ್ಯಕ್ರಾಮನ್ | ಬೇರೆ ಬೇರೆ ಕಡೆಗಳಿಗೆ ಚದುರಿ ಹೋದರು. |
| ಸಃ ಯಜ್ಞಃ ಅಸುರಾನ್ ಅನು | [ಆಗ] ಯಜ್ಞವು ಒಟ್ಟಾಗಿರುವ ಅಸುರರನ್ನು ಅನುಸರಿಸಿ |
| ಅಪಾಕ್ರಾಮತ್ | ಹೊರಟುಹೋಯಿತು. |
| ಯಜ್ಞಮ್ ಛಂದಾಗ್ಂಸಿ ಅಪಾಕ್ರಾಮನ್ | ಯಜ್ಞವನ್ನು ಅನುಸರಿಸಿ ಛಂದಸ್ಸುಗಳೂ ಹೊರಟು ಹೋದವು. |
| ತೇ ದೇವಾಃ | ಆಗ [ಒಟ್ಟಾಗಿ ಸೇರಿದ] ದೇವತೆಗಳು |
| ಯತ್ ವಯಮ್ ಸ್ಮಃ | ಯಾವ [ಐಶ್ವರ್ಯವನ್ನು ಪಡೆದು] ನಾವು ಇದ್ದೇವೋ |
| ಅಮೀ ವೈ ಇದಮ್ ಅಭೂವನ್ ಇತಿ ಅಮನ್ಯಂತ | ಆ [ಐಶ್ವರ್ಯವನ್ನು ಪಡೆದು] ಈಗ ಅಸುರರು ಶ್ರೀಮಂತರಾಗಿದ್ದಾರೆಂದು ವಿಚಾರಿಸಿ ತಿಳಿದು ಕೊಂಡರು. |

---

ಪ್ರಜಾಪತಿಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ದೇವಾಸುರರ ಪೈಕಿ ಬ್ರಹ್ಮನಿಂದ ಬಳಿಕ ಸೃಜಿಸಲ್ಪಟ್ಟ ಯಜ್ಞವೂ, ಛಂದಸ್ಸೂ ಅಸುರರನ್ನು ಅನುಸರಿಸಿದವು. ಆಗ ಬ್ರಹ್ಮನ

ತೇ ಪ್ರಜಾಪತಿಮುಪಾಧಾವನ್ಥ್ಸೋಽಬ್ರವೀತ್ಪ್ರಜಾಪತಿ

ಶ್ಛಂದಸಾಂ ವೀರ್ಯಮಾದಾಯ ತದ್ವಃ ಪ್ರದಾಸ್ಯಾಮೀತಿ ಸ

ಛಂದಸಾಂ ವೀರ್ಯಮಾ[ವೀರ್ಯಮ್(೧೯)ಆದಾಯ]

-ದಾಯ ತದೇಭ್ಯಃ ಪ್ರಾಯಚ್ಛ-

---

ತೇ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಉಪೇತಿ । ಅಧಾವನ್ನ್ । ಸಃ । ಅಬ್ರವೀತ್ ।

ಪ್ರಜಾಪತಿರಿತಿ ಪ್ರಜಾ-ಪತಿಃ । ಛಂದಸಾಮ್ । ವೀರ್ಯಮ್ । ಆದಾಯೇತ್ಯಾ-

ದಾಯ । ತತ್ । ವಃ । ಪ್ರೇತಿ । ದಾಸ್ಯಾಮಿ । ಇತಿ । ಸಃ । ಛಂದಸಾಮ್ । ವೀರ್ಯಮ್।

(೧೯)। ಆದಾಯೇತ್ಯಾ-ದಾಯ । ತತ್ । ಏಭ್ಯಃ । ಪ್ರೇತಿ । ಅಯಚ್ಛತ್ ।

---

| | |
|---|---|
| ತೇ ಪ್ರಜಾಪತಿಮ್ ಉಪಾಧಾವನ್ | ಆಗ ದೇವತೆಗಳು ಪ್ರಜಾಪತಿಬ್ರಹ್ಮನನ್ನು ಆಶ್ರಯಿಸಿದರು. |
| ಸಃ ಪ್ರಜಾಪತಿಃ ಛಂದಸಾಮ್ ವೀರ್ಯಮ್ ಆದಾಯ | ಅವರಿಂದ ಆಶ್ರಯಿಸಲ್ಪಟ್ಟ ಆ ಬ್ರಹ್ಮದೇವನು ಮಂತ್ರಗಳ ಸಾರವನ್ನು ತೆಗೆದುಕೊಂಡು |
| ತತ್ ವಃ ಪ್ರದಾಸ್ಯಾಮಿ ಇತಿ ಅಬ್ರವೀತ್ | ಅದನ್ನು ನಿಮಗೆ ಕೊಡುವೆನು ಎಂದು ಹೇಳಿದನು. |
| ಸಃ ಛಂದಸಾಮ್ ವೀರ್ಯಮ್ ಆದಾಯ | ಆ ಬ್ರಹ್ಮನು ಛಂದಸ್ಸುಗಳ ಸಾರವನ್ನು ತೆಗೆದುಕೊಂಡು |
| ತತ್ ಏಭ್ಯಃ ಪ್ರಾಯಚ್ಛತ್ | ಅದನ್ನು ಈ ದೇವತೆಗಳಿಗೆ ಕೊಟ್ಟನು. |

---

ಬಳಿ ಬಂದ ದೇವತೆಗಳಿಗೆ ಬ್ರಹ್ಮನು ಛಂದಸ್ಸಿನ ಸಾರವಾದ ಆಶ್ರಾವಯ ಮುಂತಾದ ಮಂತ್ರಗಳನ್ನಿತ್ತನು.

ತ್ತದನು ಛಂದಾಗ್ಂಸ್ಯಪಾಕ್ರಾಮಞ್ಛಂದಾಗ್ಂಸಿ ಯಜ್ಞ

ಸ್ತತೋ ದೇವಾ ಅಭವನ್ಪರಾಽಸುರಾ ಯ ಏವಂ

ಛಂದಸಾಂ ವೀರ್ಯಂ ವೇದಾಶ್ರಾವಯಾಸ್ತು ಶ್ರೌಷಡ್ಯಜ

ಯೇ ಯಜಾಮಹೇ ವಷಟ್ಕಾರೋ

---

ತತ್ । ಅನ್ವಿತಿ । ಛಂದಾಗ್ಂಸಿ । ಅಪೇತಿ । ಅಕ್ರಾಮನ್ನ್ । ಛಂದಾಗ್ಂಸಿ । ಯಜ್ಞಃ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಃ । ಏವಮ್ । ಛಂದಸಾಮ್ । ವೀರ್ಯಮ್ । ವೇದ । ಏತಿ । ಶ್ರಾವಯ । ಅಸ್ತು । ಶ್ರೌಷಟ್ । ಯಜ । ಯೇ । ಯಜಾಮಹೇ । ವಷಟ್ಕಾರ ಇತಿ ವಷಟ್–ಕಾರಃ ।

---

| | |
|---|---|
| ತತ್ ಅನು ಛಂದಾಗ್ಂಸಿ ಅಪಾಕ್ರಾಮನ್ | ಆ ಛಂದಸ್ಸುಗಳೂ ದೇವತೆಗಳ ಬಳಿಗೆ ಹೋದವು. |
| ಛಂದಾಗ್ಂಸಿ ಯಜ್ಞಃ ಅನು ಅಪಾಕ್ರಾಮತ್ | ಛಂದಸ್ಸುಗಳನ್ನು ಅನುಸರಿಸಿ ಯಜ್ಞವೂ ದೇವತೆಗಳ ಬಳಿಗೆ ಹೋಯಿತು. |
| ತತಃ ದೇವಾಃ ಅಭವನ್ | ಬಳಿಕ ದೇವತೆಗಳು ಯಜ್ಞಬಲದಿಂದ ವಿಜಯಿಗಳಾದರು. |
| ಅಸುರಾಃ ಪರಾ ಅಭವನ್ | ಅಸುರರು ಸೋತುಹೋದರು. |

‘ಆಶ್ರಾವಯ’ ಮುಂತಾದ ಮಂತ್ರಗಳ ವಿಧಿ; ಪ್ರಶಂಸೆ

| | |
|---|---|
| ಯಃ ಏವಮ್ ಛಂದಸಾಮ್ ವೀರ್ಯಮ್ ವೇದ ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇ ಯಜಾಮಹೇ, ವಷಟ್ಕಾರಃ | ಯಾವ ಯಜಮಾನನು ಹೀಗೆ ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇ ಯಜಾಮಹೇ, ವಷಟ್ಕಾರ ಎಂಬ ಛಂದಸ್ಸುಗಳ ಸಾರವನ್ನು ತಿಳಿದಿರುತ್ತಾನೆಯೋ/ತಿಳಿದು ಪ್ರಯೋಗಿಸುತ್ತಾನೆಯೋ |

ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ ಭವತಿ ಬ್ರಹ್ಮ

ವಾದಿನೋ ವದಂತಿ ಕಸ್ಮೈ ಕಮಧ್ವರ್ಯುರಾಶ್ರಾವಯತೀತಿ

---

ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ । ಬ್ರಹ್ಮವಾದಿನ ಇತಿ ಬ್ರಹ್ಮ

–ವಾದಿನಃ । ವದಂತಿ । ಕಸ್ಮೈ । ಕಮ್ । ಅಧ್ವರ್ಯುಃ । ಏತಿ । ಶ್ರಾವಯತಿ । ಇತಿ ।

---

| | |
|---|---|
| ಆತ್ಮನಾ ಭವತಿ | ಅವನು ತಾನು ವಿಜಯಿಯಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಇವನ ಶತ್ರುವು ಸೋತು ಹೋಗುತ್ತಾನೆ. |

ಈ ಮಂತ್ರಗಳ ಪ್ರಶಂಸೆ

| | |
|---|---|
| ಬ್ರಹ್ಮವಾದಿನಃ ಅಧ್ವರ್ಯುಃ ಕಸ್ಮೈ ಕಮ್ ಆಶ್ರಾವಯತಿ ಇತಿ ವದಂತಿ | ವೇದಜ್ಞರು ಅಧ್ವರ್ಯುವೇ ಮೊದಲಾದವರು ಈ ಪ್ರಯೋಜನಕ್ಕಾಗಿಯೇ? ಅಥವಾ ಆ ಪ್ರಯೋಜನಕ್ಕಾಗಿಯೋ? ಯಾವ ಪ್ರಯೋಜನಕ್ಕಾಗಿ **'ಆಶ್ರಾವಯ'** ಮೊದಲಾದ ಮಂತ್ರಗಳ ಪ್ರಯೋಗವನ್ನು ಮಾಡುತ್ತಾರೆಂದು ಚರ್ಚಿಸುತ್ತಾರೆ. |

---

**೧) ಆಶ್ರಾವಯ**= ಅಗ್ನೀಧ್ರನೇ! ದೇವತೆಗಳಿಗೆ ಯಜ್ಞದ ವಿಷಯವನ್ನು ತಿಳಿಸು.
**೨) ಅಸ್ತು ಶ್ರೌಷಟ್**= ಆಗಲಿ! ದೇವತೆಗಳೇ! ನೀವು ಯಾಗವಿಷಯವನ್ನು ಕೇಳಿರಿ.
**೩)ಯಜ**=ಯಾಜ್ಯಾನುವಾಕ್ಯವನ್ನು ಹೋತೃವೇ! ನೀನು ಹೇಳು.
**೪)ಯೇ ಯಜಾಮಹೇ**=ಹೋತೃವಿನ ಯಾಜ್ಯಾಪಾಠದ ಮೊದಲಿನ ಪದಗಳು.
**೫) ವಷಟ್ಕಾರ/ವೌಷಟ್**=ಅಧ್ವರ್ಯುವಿನ ಹವಿಸ್ಸಿನ ತ್ಯಾಗದ ಮಂತ್ರಪಾಠ.

ಈ ಐದು ಮಂತ್ರಗಳನ್ನಿತ್ತನು. ಈ ಮಂತ್ರಗಳನ್ನು ಅರಿತು ಪ್ರಯೋಗಿಸುವವನು ವಿಜಯಿಯಾಗುವನು. ಅವನ ಶತ್ರುವು ಸೋಲನ್ನಪ್ಪುವನು.

ಪ್ರಜಾಪತಿಸಂಜ್ಞಕವಾದ ಸಪ್ತದಶಾಕ್ಷರಾತ್ಮಕವಾದ ಈ ಐದು ಮಂತ್ರಗಳ ಸಮುದಾಯವು ಇಷ್ಟಿಯ ಅಂಗವಾಗಿ ವಿಹಿತವಾಗಿದೆ.

ಛಂದಸಾಂ ವೀರ್ಯಾಯೇತಿ ಬ್ರೂಯಾದೇತದ್ವೈ [(೨೦)]

ಛಂದಸಾಂ ವೀರ್ಯಮಾಶ್ರಾವಯಾಸ್ತು ಶ್ರೌಷಡ್ಯಜ

ಯೇ ಯಜಾಮಹೇ ವಷಟ್ಕಾರೋ ಯ ಏವಂ ವೇದ

---

ಛಂದಸಾಮ್ । ವೀರ್ಯಾಯ । ಇತಿ । ಬ್ರೂಯಾತ್ । ಏತತ್ । ವೈ ।(೨೦)।

ಛಂದಸಾಮ್ । ವೀರ್ಯಮ್ । ಏತಿ । ಶ್ರಾವಯ । ಅಸ್ತು । ಶ್ರೌಷಟ್ । ಯಜ । ಯೇ ।

ಯಜಾಮಹೇ । ವಷಟ್ಕಾರ ಇತಿ ವಷಟ್–ಕಾರಃ । ಯಃ । ಏವಮ್ । ವೇದ ।

---

| | |
|---|---|
| ಛಂದಸಾಮ್ ವೀರ್ಯಾಯ ಇತಿ ಬ್ರೂಯಾತ್ | [ಅದಕ್ಕೆ ಪ್ರಜಾಪತಿಯು ತೆಗೆದುಕೊಂಡಿರುವ] ಮಂತ್ರಸಾರವನ್ನು ಮತ್ತೆ ಪಡೆಯುವುದಕ್ಕಾಗಿ ಎಂದು ಉತ್ತರಿಸಬೇಕು. |
| ಆಶ್ರಾವಯ ಅಸ್ತು ಶ್ರೌಷಟ್ ಯಜ ಯೇ ಯಜಾಮಹೇ ವಷಟ್ಕಾರಃ ಏತತ್ ವೈ ಛಂದಸಾಮ್ ವೀರ್ಯಮ್ | 'ಆಶ್ರಾವಯ, ಅಸ್ತು ಶ್ರೌಷಟ್, ಯಜ, ಯೇ ಯಜಾಮಹೇ, ವೌಷಟ್' ಈ ಐದು ಮಂತ್ರಗಳ ಸಮೂಹವೇ ಛಂದಸ್ಸುಗಳ ಸಾರವಾಗಿದೆ. |

### ಈ ಮಂತ್ರಗಳ ಅರ್ಥಜ್ಞಾನದ ಪ್ರಶಂಸೆ

| | |
|---|---|
| ಯಃ ಏವಮ್ ವೇದ | ಯಾವ ಯಜಮಾನನು ಛಂದಸ್ಸುಗಳ ಸಾರವಾದ ಈ ಮಂತ್ರಗಳ ವಿಷಯವನ್ನು ತಿಳಿದಿರುತ್ತಾನೆಯೋ |

---

ಇದು ಪ್ರಥಮಕಾಂಡದಲ್ಲಿ ಬಂದಿದೆ. ಸೋಮಯಾಗವು ಇಷ್ಟಿಯ ವಿಕೃತಿಯಲ್ಲವಾದುದರಿಂದ ಇಲ್ಲಿ ಸೋಮಾಂಗವಾಗಿ ಛಂದಸ್ಸುಗಳ ಸಾರರೂಪದಲ್ಲಿ ವಿಹಿತವಾಗಿದೆ. ಇದನ್ನು ಹೇಳುವ ಋತ್ವಿಜರು ಹಾಗೂ ಮಂತ್ರಪ್ರಯೋಗದ ಕ್ರಮವು ಹೀಗಿದೆ; **ಅಧ್ವರ್ಯು=ಆಶ್ರಾವಯ, ಆಗ್ನೀಧ್ರ=ಅಸ್ತು ಶ್ರೌಷಟ್, ಅಧ್ವರ್ಯು=ಯಜ, ಹೋತೃ=ಯೇ ಯಜಾಮಹೇ, ಅಧ್ವರ್ಯು=ವಷಟ್ಕಾರ [ವೌಷಟ್]**

ಸವೀರ್ಯೈರೇವ ಛಂದೋಭಿರರ್ಚತಿ ಯತ್ಕಿಂಚಾರ್ಚತಿ

ಯದಿಂದ್ರೋ ವೃತ್ರಮಹನ್ನಮೇಧ್ಯಂ

ತದ್ಯದ್ಯತೀನಪಾವಪದಮೇಧ್ಯಂ

---

ಸವೀರ್ಯೈರಿತಿ ಸ-ವೀರ್ಯೈಃ । ಏವ । ಛಂದೋಭಿರಿತಿ ಛಂದಃ-ಭಿಃ । ಅರ್ಚತಿ । ಯತ್ । ಕಿಮ್ । ಚ । ಅರ್ಚತಿ । ಯತ್ । ಇಂದ್ರಃ । ವೃತ್ರಮ್ । ಅಹನ್ನ್ । ಅಮೇಧ್ಯಮ್ । ತತ್ । ಯತ್ । ಯತೀನ್ । ಅಪಾವಪದಿತ್ಯಪ-ಅವಪತ್ । ಅಮೇಧ್ಯಮ್ ।

---

| | |
|---|---|
| ಯತ್ ಕಿಂಚ ಅರ್ಚತಿ | [ಆತನು] ಯಾವ ದೇವಪೂಜಾ-ಯಾಗಾದಿಗಳನ್ನು ಅನುಷ್ಠಿಸುತ್ತಾನೆಯೋ |
| ಸವೀರ್ಯೈಃ ಏವ ಛಂದೋಭಿಃ ಅರ್ಚತಿ | ಆ ದೇವಪೂಜಾದಿಗಳನ್ನು ಸಾರಭೂತವಾದ ಮಂತ್ರಗಳಿಂದಲೇ ಮಾಡಿದವನಾಗುತ್ತಾನೆ. ಆತನ ಕಾರ್ಯಗಳು ಶಕ್ತಿಯುಕ್ತವಾಗುತ್ತವೆ. |

**ಈ ಮಂತ್ರಗಳಿಂದ ಯುಕ್ತವಾದ ಯಜ್ಞದ ಪ್ರಶಂಸೆ**

| | |
|---|---|
| ಯತ್ ಇಂದ್ರಃ ವೃತ್ರಮ್ ಅಹನ್ನ್ ತತ್ ಅಮೇಧ್ಯಮ್ | ಇಂದ್ರನು ವೃತ್ರಾಸುರನನ್ನು ಕೊಂದನೆಂಬುದು ಹಿಂಸೆಯಾದುದರಿಂದ ಅದು ಅಪವಿತ್ರವಾಗಿದೆ. |
| ಯತ್ ಯತೀನ್ ಅಪಾವಪತ್ ತತ್ ಅಮೇಧ್ಯಮ್ | ಮಾರ್ಗವನ್ನು ಬಿಟ್ಟು ನಡೆದ ಯತಿಗಳನ್ನು ತೋಳಗಳಿಗೆ ಕೊಟ್ಟನೆಂಬುದೂ ಪಾಪರೂಪವಾಗಿ ಯಜ್ಞಾರ್ಹವಲ್ಲದುದಾಗಿದೆ. |

---

ಬ್ರಹ್ಮವಾದಿಗಳು ಪ್ರಜಾಪತಿಯು ತೆಗೆದುಕೊಂಡಿರುವ ಮಂತ್ರಸಾರವನ್ನು ಮತ್ತೆ

ತದಥ ಕಸ್ಮಾದ್ಯೆಂದ್ರೋ ಯಜ್ಞ ಆಸಗ್ಗ್‌ಂಸ್ಥಾತೋ

–ರಿತ್ಯಾಹುರಿಂದ್ರಸ್ಯ ವಾ ಏಷಾ ಯಜ್ಞಿಯಾ

ತನೂರ್ಯದ್ಯಜ್ಞಸ್ತಾಮೇವ ತದ್ಯಜಂತಿ

---

ತತ್ । ಅಥ । ಕಸ್ಮಾತ್ । ಐಂದ್ರಃ । ಯಜ್ಞಃ । ಏತಿ । ಸಗ್ಗ್‌ಂಸ್ಥಾತೋರಿತಿ ಸಂ–ಸ್ಥಾತೋಃ । ಇತಿ । ಆಹುಃ । ಇಂದ್ರಸ್ಯ । ವೈ । ಏಷಾ । ಯಜ್ಞಿಯಾ । ತನೂಃ । ಯತ್ । ಯಜ್ಞಃ । ತಾಮ್ । ಏವ । ತತ್ । ಯಜಂತಿ ।

---

| | |
|---|---|
| ಅಥ ಕಸ್ಮಾತ್ ಆ ಸಗ್ಗ್‌ಂಸ್ಥಾತೋಃ | ಹೀಗಿದ್ದರೂ ಯಾವ ಕಾರಣದಿಂದ ಸಮಾಪ್ತಿ ಪರ್ಯಂತವಾಗಿಯೂ |
| ಐಂದ್ರಃ ಯಜ್ಞಃ ಇತಿ ಆಹುಃ | ಯಜ್ಞವು ಇಂದ್ರದೇವತಾಕವಾದುದು ಎಂದು ವಿತರ್ಕವಾದಿಗಳು ಹೇಳುತ್ತಾರೆ. |
| ಯಜ್ಞಃ ಯತ್ ಏಷಾ ಇಂದ್ರಸ್ಯ ವೈ ಯಜ್ಞಿಯಾ ತನೂಃ | [ಅದಕ್ಕೆ ವೇದಜ್ಞರು] ಯಜ್ಞವೆಂಬುದು ಇಂದ್ರನ ಪವಿತ್ರವಾದ ಯಜ್ಞಾರ್ಹವಾದ ಶರೀರವಾಗಿದೆ. |
| ತತ್ ತಾಮ್ ಏವ ಯಜಂತಿ | ಆದುದರಿಂದ ಆ ಶರೀರವನ್ನೇ ಯಜಮಾನರು ಪೂಜಿಸುತ್ತಾರೆ. |

---

ಪಡೆಯುವುದಕ್ಕಾಗಿ ಈ ಮಂತ್ರಗಳ ಪ್ರಯೋಗವೆಂದು ಹೇಳುತ್ತಾರೆ.

ಈ ಆಶ್ರಾವಯ ಮುಂತಾದ ಐದು ಮಂತ್ರಗಳು ಛಂದಸ್ಸಿನ ಸಾರವಾದುದರಿಂದ ಈ ಮಂತ್ರಗಳ ವಿಷಯವನ್ನು ತಿಳಿದು ದೇವಪೂಜಾ–ಯಾಗಾದಿಗಳನ್ನನುಷ್ಠಿಸುವವನ ಕಾರ್ಯಗಳು ಶಕ್ತಿಯುಕ್ತವಾಗಿರುತ್ತವೆ. ಆತನು ಸಾರಭೂತವಾದ ಮಂತ್ರಗಳಿಂದಲೇ ಅನುಷ್ಠಾನ ಮಾಡಿದವನಾಗುತ್ತಾನೆ.

# ಯ ಏವಂ ವೇದೋಪೈನಂ ಯಜ್ಞೋ ನಮತಿ ॥೨೧-7॥

[ಸ ಛಂದಸಾಂ ವೀರ್ಯಂ ವಾ ಏವ ತದಷ್ಟೌ ಚ ॥]

---

ಯಃ । ಏವಮ್ । ವೇದ । ಉಪೇತಿ । ಏನಮ್ । ಯಜ್ಞಃ । ನಮತಿ ॥೨೧॥

---

### ಈ ವಿಷಯದ ಜ್ಞಾನದ ಪ್ರಶಂಸೆ

| | |
|---|---|
| ಯಃ ಏವಮ್ ವೇದ | ಯಾವನು ಹೀಗೆ ತಿಳಿದಿರುತ್ತಾನೆಯೋ |
| ಏನಮ್ ಯಜ್ಞಃ ಉಪನಮತಿ | ಈ ಯಜಮಾನನನ್ನು ಯಜ್ಞವು ಆಶ್ರಯಿಸುತ್ತದೆ. |

---

ಇಂದ್ರನು ವೃತ್ರಸಂಹಾರವನ್ನು ಮಾಡಿ ಹಿಂಸೆಯನ್ನು ಮಾಡಿದನು. ಮಾರ್ಗಭ್ರಷ್ಟ ಯತಿಗಳನ್ನು ತೋಳಗಳಿಗೆ ಕೊಟ್ಟನು. ಅದು ಪಾಪರೂಪವಾಗಿ ಯಜ್ಞಾರ್ಹವಲ್ಲ ವಾಗಿದೆ. ಹೀಗಾದರೂ ಯಜ್ಞವು ಸಮಾಪ್ತಿಯವರೆಗೂ ಐಂದ್ರವೆನ್ನಿಸಿಕೊಳ್ಳುವುದು ಹೇಗೆ? ಎಂದು ವಿತರ್ಕವಾದಿಗಳ ಪ್ರಶ್ನೆ.

ಇದಕ್ಕೆ ವೇದಜ್ಞರು ಹೀಗೆ ಉತ್ತರಿಸುತ್ತಾರೆ; ಇಂದ್ರನಿಗೆ ರಾಜಸ-ಸಾತ್ತ್ವಿಕಗಳೆಂಬ ಎರಡು ಶರೀರಗಳು ಇವೆ. ತ್ರೈಲೋಕ್ಯಾಧಿಪತಿಯಾಗಿ ದುಷ್ಟನಿಗ್ರಹವನ್ನು ಮಾಡುವ ಸಮಯದಲ್ಲಿ ರಾಜಸತನುವನ್ನು ಹೊಂದುತ್ತಾನೆ. ಯಜ್ಞದೇವತೆಯಾಗಿ ಯಾಗವನ್ನು ನಿರ್ವ ಹಿಸುವ ಸಮಯದಲ್ಲಿ ಪವಿತ್ರವಾದ ಸಾತ್ತ್ವಿಕವಾದ ಯಜ್ಞವೆಂಬ ಶರೀರವನ್ನು ಹೊಂದು ತ್ತಾನೆ. ಇದರಿಂದ ಯಜ್ಞವು ಅಂತ್ಯದವರೆಗೂ ಇಂದ್ರಸಂಬಂಧಿಯಾಗಿಯೇ ಇದೆ.

ಯಾರು ಈ ವಿಷಯವನ್ನು ತಿಳಿದಿರುತ್ತಾನೆಯೋ ಆ ಯಜಮಾನನನ್ನು ಯಜ್ಞವು ಆಶ್ರಯಿಸುತ್ತದೆ. ಇದು ಈ ವಿಷಯದ ಜ್ಞಾನದ ಪ್ರಶಂಸೆಯಾಗಿದೆ.

---

## ವಿನಿಯೋಗಸಂಗ್ರಹ

1-5ಆ ಶ್ರಾವಯೇತ್ಯಾದಯೋಽತ್ರ ಪಂಚ ಮಂತ್ರಾ ಉದೀರಿತಾಃ ।
ಆಶ್ರಾವಣಾದಿ ಸೋಮಾರ್ಥಮತ್ರ ಪ್ರಾಕ್ತನಮಿಷ್ಟಿಗಮ್ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-5

---

## ॥ ಅಷ್ಟಮೋಽನುವಾಕಃ ॥

ಆಯುರ್ದಾ ಅಗ್ನೇ ಹವಿಷೋ ಜುಷಾಣೋ
ಘೃತಪ್ರತೀಕೋ ಘೃತಯೋನಿರೇಧಿ ।

---

ಆಯುರ್ದಾ ಇತ್ಯಾಯುಃ–ದಾಃ । ಅಗ್ನೇ । ಹವಿಷಃ । ಜುಷಾಣಃ । ಘೃತಪ್ರತೀಕ ಇತಿ ಘೃತ–ಪ್ರತೀಕಃ । ಘೃತಯೋನಿರಿತಿ ಘೃತ–ಯೋನಿಃ । ಏಧಿ ॥

---

ಈ ಎಂಟನೆಯ ಅನುವಾಕದಲ್ಲಿ ಅವಭೃಥಾಂಗಾದಿಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಆಯುರ್ದಾಃ...ಇಮಮ್ ॥ | ಅವಭೃಥಕ್ಕೆ ಹೊರಡುವಾಗ ಹೋಮವನ್ನು ಅನುಷ್ಠಿಸಲು |

---

✦**ಅಗ್ನೇ**=ಅಗ್ನಿದೇವನೇ! **ಹವಿಷಃ ಜುಷಾಣಃ**=[ನೀನು] ಹವಿಸ್ಸನ್ನು ಸೇವಿಸತಕ್ಕವನು; **ಘೃತಪ್ರತೀಕಃ**=ಪ್ರಾರಂಭದಲ್ಲಿ ಪ್ರಯಾಜಾದಿ ಘೃತಾಹುತಿಗಳಿಂದ [ನೀನು] ವೃದ್ಧಿ ಹೊಂದಿದ ಅವಯವಗಳನ್ನು ಹೊಂದಿದವನು. **ಘೃತಯೋನಿಃ**=ಕೊನೆಯಲ್ಲಿ ಅನೂಯಾಜಾದಿಹೋಮಗಳಿಗೆ ಜ್ವಾಲಾಸಾಧನವಾಗಿ ಇರುವವನು ನೀನು/ನೀರಿನ ಉತ್ಪತ್ತಿಗೆ ಕಾರಣನು ನೀನು; **ಆಯುರ್ದಾಃ ಏಧಿ**=[ನೀನು] ಯಜಮಾನನಿಗೆ ಪೂರ್ಣಾಯುಸ್ಸನ್ನು ಕೊಡು.

ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಮಭಿ ರಕ್ಷತಾದಿಮಮ್ ॥ ಆವೃಶ್ಚ್ಯತೇ ವಾ ಏತದ್ಯಜಮಾನೋಽಗ್ನಿಭ್ಯಾಂ ಯದೇನಯೋಶ್ಶೃತಂಕೃತ್ಯಾಥಾನ್ಯತ್ರಾವಭೃಥಮವೈ

---

ಘೃತಮ್ । ಪೀತ್ವಾ । ಮಧು । ಚಾರು । ಗವ್ಯಮ್ । ಪಿತಾ । ಇವ । ಪುತ್ರಮ್ । ಅಭೀತಿ। ರಕ್ಷತಾತ್ । ಇಮಮ್ ॥ ಏತಿ । ವೃಶ್ಚ್ಯತೇ । ವೈ । ಏತತ್ । ಯಜಮಾನಃ । ಅಗ್ನಿಭ್ಯಾಮಿತ್ಯಗ್ನಿ-ಭ್ಯಾಮ್ । ಯತ್ । ಏನಯೋಃ । ಶೃತಂಕೃತ್ಯೇತಿ ಶೃತಂ-ಕೃತ್ಯ । ಅಥ । ಅನ್ಯತ್ರ । ಅವಭೃಥಮಿತ್ಯವ-ಭೃಥಮ್ । ಅವೈತೀತ್ಯವ-ಏತಿ ।

---

ಮಧು=ಮಧುರವಾಗಿಯೂ; ಚಾರು=ನಿರ್ಮಲವಾಗಿಯೂ ಇರುವ; ಗವ್ಯಮ್ ಘೃತಮ್=ಹಸುವಿನ ತುಪ್ಪವನ್ನು; ಪೀತ್ವಾ=ಸೇವಿಸಿ; ಇಮಮ್=ಈ ಯಜಮಾನನನ್ನು; ಪಿತಾ ಪುತ್ರಮ್ ಇವ=ತಂದೆಯು ಮಗನನ್ನು ಹೇಗೋ ಹಾಗೆ; ಅಭಿ ರಕ್ಷತಾತ್=ಸುತ್ತಲೂ/ಎಲ್ಲ ಕಡೆಗಳಿಂದಲೂ ರಕ್ಷಿಸು.

---

## ಹೋಮವಿಧಿ; ಅದರ ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಏನಯೋಃ ಶೃತಂಕೃತ್ಯ | ಈ ಗಾರ್ಹಪತ್ಯ-ಆಹವನೀಯಗಳಲ್ಲಿ ಹವಿಸ್ಸನ್ನು ಪಕ್ವ ಮಾಡಿ |
| ಅಥ ಅನ್ಯತ್ರ ಅವಭೃಥಮ್ ಅವೈತಿ [ಇತಿ] ಯತ್ | ಬಳಿಕ ಬೇರೆಡೆಯಲ್ಲಿ/ಜಲಸಮೀಪದಲ್ಲಿ ಅವಭೃಥವನ್ನು ಅನುಷ್ಠಿಸುವುದಕ್ಕಾಗಿ ಹೋಗುತ್ತಾನೆಂಬುದು ಯಾವುದುಂಟೋ |
| ಏತತ್ ಯಜಮಾನಃ ಅಗ್ನಿಭ್ಯಾಮ್ ಆವೃಶ್ಚ್ಯತೇ ವೈ | ಈ ಅಪರಾಧದಿಂದ ಯಜಮಾನನು ಗಾರ್ಹಪತ್ಯ-ಆಹವನೀಯಾಗ್ನಿಗಳಿಂದ ವಿಚ್ಛಿನ್ನನಾಗುವನಷ್ಟೆ. |

ತ್ಯಾಯುರ್ದಾ ಅಗ್ನೇ ಹವಿಷೋ ಜುಷಾಣ

ಇತ್ಯವಭೃಥಮವ್ಯೈಷ್ಯಞ್ಜುಹುಯಾದಾಹುತ್ಯೈವೈನೌ

ಶಮಯತಿ ನಾರ್ತಿಮಾರ್ಛತಿ ಯಜಮಾನೋ

---

ಆಯುರ್ದಾ ಇತ್ಯಾಯುಃ–ದಾಃ । ಅಗ್ನೇ । ಹವಿಷಃ । ಜುಷಾಣಃ । ಇತಿ । ಅವಭೃಥಮಿತ್ಯವ–ಭೃಥಮ್ । ಅವ್ಯೈಷ್ಯನ್ನಿತ್ಯವ–ಏಷ್ಯನ್ । ಜುಹುಯಾತ್ । ಆಹುತ್ಯೇತ್ಯಾ–ಹುತ್ಯಾ । ಏವ । ಏನೌ । ಶಮಯತಿ । ನ । ಆರ್ತಿಮ್ । ಆ । ಋಚ್ಛತಿ । ಯಜಮಾನಃ ।

---

| | |
|---|---|
| ಆಯುರ್ದಾಃ ಅಗ್ನೇ ಹವಿಷಃ ಜುಷಾಣಃ ಇತಿ | ಈ ಅಪರಾಧಶಾಂತಿಗಾಗಿ 'ಆಯುರ್ದಾ ಅಗ್ನೇ' ಎಂಬ ಮಂತ್ರದಿಂದ |
| ಅವಭೃಥಮ್ ಅವ್ಯೈಷ್ಯನ್ ಜುಹುಯಾತ್ | ಅವಭೃಥಹೋಮಕ್ಕೆ ಹೋಗುವವನಾಗಿ ಆಜ್ಯದಿಂದ ಹೋಮವನ್ನು ಮಾಡಬೇಕು. |
| ಆಹುತ್ಯಾ ಏವ ಏನೌ ಶಮಯತಿ | ಆಹುತಿಯಿಂದಲೇ ಈ ಇಬ್ಬರು ಅಗ್ನಿಗಳನ್ನೂ ಶಾಂತರನ್ನಾಗಿ ಮಾಡುತ್ತಾನೆ. |
| ಯಜಮಾನಃ ಆರ್ತಿಮ್ ನ ಆ ಋಚ್ಛತಿ | ಇದರಿಂದ ಯಜಮಾನನು ಪೀಡೆಯನ್ನು ಹೊಂದುವುದಿಲ್ಲ. |

---

ಮೊದಲಿನಲ್ಲಿಯೂ, ಕೊನೆಯಲ್ಲಿಯೂ ಘೃತಾಹುತಿಗಳಿಂದ ಸೇವಿಸಲ್ಪಡುವ ಅಗ್ನಿದೇವನೇ! ನೀನು ಯಜಮಾನನಿಗೆ ಪೂರ್ಣಾಯುಸ್ಸನ್ನು ಕೊಡು. ತಂದೆಯು ಮಗನನ್ನು ರಕ್ಷಿಸುವಂತೆ ಎಲ್ಲ ವಿಧವಾದ ಆಪತ್ತುಗಳಿಂದಲೂ ಕಾಪಾಡು.

ಗಾರ್ಹಪತ್ಯ–ಆಹವನೀಯಗಳಲ್ಲಿ ಹವಿಸ್ಸನ್ನು ಪಕ್ವವನ್ನಾಗಿ ಮಾಡಿ, ಬೇರೆಡೆ ಅವಭೃಥವನ್ನು ಮಾಡುವುದೆಂದರೆ ಅದು ಅಪರಾಧವೇ ಸರಿ. ಹೀಗಾಗಿ 'ಆಯುರ್ದಾ ಅಗ್ನೇ' ಎಂಬ ಮಂತ್ರದಿಂದ ಆಜ್ಯಹೋಮವನ್ನು ಅನುಷ್ಠಿಸಬೇಕು. ಇದು ಹೋಮ

ಯತ್ಕುಸೀದ[...ಸೀದಮ್(೨೨)ಅಪ್ರತೀ]ಮಪ್ರತೀತ್ತಂ

ಮಯಿ ಯೇನ ಯಮಸ್ಯ ಬಲಿನಾ ಚರಾಮಿ । ಇಹೈವ

ಸನ್ನಿರವದಯೇ ತದೇತತ್ತದಗ್ನೇ ಅನೃಣೋ ಭವಾಮಿ ॥

---

ಯತ್ । ಕುಸೀದಮ್ ।(೨೨)। ಅಪ್ರತೀತ್ತಮಿತ್ಯಪ್ರತಿ-ಇತ್ತಮ್ । ಮಯಿ ।

ಯೇನ । ಯಮಸ್ಯ । ಬಲಿನಾ । ಚರಾಮಿ ॥ ಇಹ । ಏವ । ಸನ್ । ನಿರವದಯ

ಇತಿ ನಿಃ-ಅವದಯೇ । ತತ್ । ಏತತ್ । ತತ್ । ಅಗ್ನೇ । ಅನೃಣಃ । ಭವಾಮಿ ॥

---

| ಮಂತ್ರ | ವಿನಿಯೋಗ |
| --- | --- |
| ಯತ್ಕುಸೀದಮ...ಭವಾಮಿ ॥ | ಆಹವನೀಯಾಗ್ನಿಯಿಂದ ತೆಗೆದ ಕೊಳ್ಳಿಯಿಂದ ವೇದಿಯನ್ನು ದಹಿಸಲು |

---

✦**ಅಗ್ನೇ!**=ಯಮರೂಪನಾದ ಅಗ್ನಿದೇವನೇ! **ಯತ್ ಕುಸೀದಮ್**=ಯಾವ ಸಾಲವು; **ಅಪ್ರತೀತ್ತಮ್**=ಹಿಂದಿರುಗಿ ಕೊಟ್ಟು ತೀರಿಸದೇ; **ಮಯಿ**=ನನ್ನಲ್ಲಿ ಇದೆಯೋ; **ಯಮಸ್ಯ**=ಸಾಹುಕಾರನಾದ ಯಮನ; **ಯೇನ ಬಲಿನಾ**=ಬಲಿಷ್ಠವಾದ ಯಾವಸಾಲದಿಂದ ಕೂಡಿ/ಪಾಪದಿಂದ ಕೂಡಿ; **ಚರಾಮಿ**=ಸಂಚರಿಸುತ್ತಿದ್ದೇನೆಯೋ; **ಏತತ್ ತತ್**=ಆ ಈ ಸಾಲವನ್ನು; **ಇಹ ಏವ ಸನ್**=ಈ ಜನ್ಮದಲ್ಲಿಯೇ/ಯಜ್ಞ ಪ್ರದೇಶದಲ್ಲಿ ಇದ್ದವನಾಗಿಯೇ; **ನಿರವದಯೇ**=ಈ ವೇದಿದಾಹದಿಂದ ತೀರಿಸುತ್ತೇನೆ. **ಅಗ್ನೇ!**=ಅಗ್ನಿಯೇ! **ತತ್ ಅನೃಣಃ ಭವಾಮಿ**=ಅದರಿಂದ ಸಾಲವಿಲ್ಲದವನಾಗುತ್ತೇನೆ.

---

ವಿಧಿ ಹಾಗೂ ಅದರ ಪ್ರಶಂಸಾರ್ಥವಾದ ಬ್ರಾಹ್ಮಣವಾಗಿದೆ.

ಅವಭೃಥ-ಉದಯನೀಯ-ಅನೂಬಂಧ್ಯಾಕರ್ಮಗಳ ಅನಂತರ ಮಾಡುವ ವೇದಿದಾಹಮಂತ್ರವಿದು. ವೇದಿಸ್ತರಣಕ್ಕಾಗಿ ದರ್ಭೆಯನ್ನು ತಂದಿರುವುದರಿಂದ ಸಾಲವು

ವಿಶ್ವಲೋಪ ವಿಶ್ವದಾವಸ್ಯ ತ್ವಾಽಽಸಞ್ಜುಹೋಮ್ಯಗ್ಧಾ

ದೇಕೋಽಹುತಾದೇಕಸ್ಸಮಸನಾದೇಕಃ । ತೇ ನಃ ಕೃಣ್ವಂತು

ಭೇಷಜಗ್ಂ ಸದಸ್ಸಹೋ ವರೇಣ್ಯಮ್ ॥

---

ವಿಶ್ವಲೋಪೇತಿ ವಿಶ್ವ-ಲೋಪ । ವಿಶ್ವದಾವಸ್ಯೇತಿ ವಿಶ್ವ-ದಾವಸ್ಯ । ತ್ವಾ । ಆಸನ್ । ಜುಹೋಮಿ । ಅಗ್ಧಾದಿತ್ಯಗ್ಧ-ಅತ್ । ಏಕಃ । ಅಹುತಾದಿತ್ಯಹುತ-ಅತ್ । ಏಕಃ । ಸಮಸನಾದಿತಿ ಸಮಸನ-ಅತ್ । ಏಕಃ ॥ ತೇ । ನಃ । ಕೃಣ್ವಂತು । ಭೇಷಜಮ್ । ಸದಃ । ಸಹಃ । ವರೇಣ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| ವಿಶ್ವಲೋಪ...ವರೇಣ್ಯಮ್ ॥ | ವೇದಿದಾಹಾಗ್ನಿಯಲ್ಲಿ ಬೊಗಸೆಯಿಂದ ಹಿಟ್ಟನ್ನು ಹೋಮ ಮಾಡಲು [ಕಾಡುಗಿಚ್ಚಿನಲ್ಲಿ-ಭ.ಭಾ.ಭಾ] |

---

✦**ವಿಶ್ವಲೋಪ**=ಎಲ್ಲ ಪಾಪಗಳನ್ನೂ ನಾಶಪಡಿಸುವ [ಸಕ್ತುಗಳಿಂದ ತುಂಬಿರುವ ಅಂಜಲಿಯೇ!] **ತ್ವಾ**=ನಿನ್ನನ್ನು; **ವಿಶ್ವದಾವಸ್ಯ**=ಎಲ್ಲ ಪಾಪಗಳನ್ನೂ ಸುಡಬಲ್ಲ ವೇದಿ ದಾಹಾಗ್ನಿಯ/ಕಾಡುಗಿಚ್ಚಿನ; **ಆಸನ್**=ಮುಖದಲ್ಲಿ; **ಜುಹೋಮಿ**=ಹೋಮ ಮಾಡುತ್ತೇನೆ; [ಇದರಿಂದ] **ಅಗ್ಧಾತ್ ಏಕಃ**=ಹೋಮಮಾಡಿದುದನ್ನು ಸ್ವೀಕರಿಸುವ ಅಗ್ನಿಯು ಒಬ್ಬನು; **ಅಹುತಾತ್ ಏಕಃ**=ಹೋಮ ಮಾಡದೇ ಇರುವುದನ್ನು ಭಕ್ಷಿಸುವ ಅಗ್ನಿಯು ಒಬ್ಬನು; **ಸಮಸನಾತ್ ಏಕಃ**=ಸಮಸ್ತವನ್ನೂ ಸುಟ್ಟು ಬಿಡುವ ಅಗ್ನಿಯು ಒಬ್ಬನು [ಹೀಗೆ] **ತೇ**=ಆ ಮೂವರೂ ಪ್ರಸನ್ನರಾಗಿ; **ನಃ ಭೇಷಜಮ್ ಕೃಣ್ವಂತು**= ನಮ್ಮ ಉಪದ್ರವಪರಿಹಾರವನ್ನು ಮಾಡಲಿ; **ಸದಃ**=ಒಳ್ಳೆಯ ನಿವಾಸಸ್ಥಾನವನ್ನು [ಅನುಗ್ರಹಿಸಲಿ] **ಸಹಃ**=ನಮಗೆ ಬಲವನ್ನೂ [ಉಂಟುಮಾಡಲಿ]; **ವರೇಣ್ಯಮ್**= ಅಪೇಕ್ಷಿತಕ್ಕ ಧನಾದಿಯಾದ ಉತ್ತಮದ್ರವ್ಯವನ್ನು [ಕೊಡಲಿ].

ಅಯಂ ನೋ ನಭಸಾ ಪುರಸ್ಸಗ್ಂಸ್ಫಾನೋ ಅಭಿ ರಕ್ಷತು ।
ಗೃಹಾಣಾಮಸಮರ್ತ್ಯೈ ಬಹವೋ ನೋ ಗೃಹಾ ಅಸನ್ ॥

---

ಅಯಮ್ । ನಃ । ನಭಸಾ । ಪುರಃ । ಸಗ್ಂಸ್ಫಾನ ಇತಿ ಸಂ-ಸ್ಫಾನಃ । ಅಭೀತಿ । ರಕ್ಷತು ॥ ಗೃಹಾಣಾಮ್ । ಅಸಮರ್ತ್ಯಾ ಇತ್ಯಸಂ-ಋತ್ಯೈ । ಬಹವಃ । ನಃ । ಗೃಹಾಃ । ಅಸನ್ ॥

---

| ಮಂತ್ರ | ವಿನಿಯೋಗ |
|---|---|
| ಅಯಂ ನೋ...ಅಸನ್ ॥ | ಅಗ್ನಿಯ ಉಪಸ್ಥಾನವನ್ನು ಮಾಡಲು |

✦**ಅಯಮ್ ನಃ ಪುರಃ**[ವರ್ತಮಾನಃ]=ನಮ್ಮ ಮುಂದೆ ಇರುವ ಈ ಅಗ್ನಿಯು; **ನಭಸಾ ಸಗ್ಂಸ್ಫಾನಃ**=ತೇಜಸ್ಸಿನಿಂದ ವೃದ್ಧಿ ಹೊಂದಿದವನಾಗಿ; **ಅಭಿರಕ್ಷತು**= ನಮ್ಮನ್ನು ಕಾಪಾಡಲಿ; **ಗೃಹಾಣಾಮ್ ಅಸಮರ್ತ್ಯೈ**=ಮನೆಗಳು ನಾಶವಿಲ್ಲದೆ ಚೆನ್ನಾಗಿ ಇರುವುದಕ್ಕಾಗಿ; **ನಃ**=ನಮಗೆ; **ಬಹವಃ ಗೃಹಾಃ**=ಹಲವು ಮನೆಗಳು; **ಅಸನ್**=ಆಗಲಿ.

---

ಪ್ರಾಪ್ತವಾದಂತೆ. ಈ ವೇದಿದಾಹದಿಂದ ಆ ಸಾಲವನ್ನು ಈ ಜನ್ಮದಲ್ಲಿಯೇ ತೀರಿಸಿ ಋಣಮುಕ್ತನಾಗುತ್ತೇನೆ.

ನಮ್ಮ ಮುಂದಿರುವ ಅಗ್ನಿಯು ತೇಜಸ್ಸಿನಿಂದ ವೃದ್ಧಿ ಹೊಂದಲಿ. ನಮ್ಮ ಮನೆಗಳು ನಾಶವಾಗದಿರುವಂತೆ ಅನುಗ್ರಹಿಸಿ ನಮ್ಮನ್ನು ಅವನು ರಕ್ಷಿಸಲಿ. ಆತನ ಅನುಗ್ರಹದಿಂದ ನಮಗೆ ಹಲವು ಮನೆಗಳು ಉಂಟಾಗಲಿ.

ಸ ತ್ವಂ ನೋ [ನಃ(೨೩)ನಭಸಸ್ಪತ]ನಭಸಸ್ಪತ ಊರ್ಜಂ ನೋ ಧೇಹಿ ಭದ್ರಯಾ । ಪುನರ್ನೋ ನಷ್ಟಮಾ ಕೃಧಿ ಪುನರ್ನೋ ರಯಿಮಾ ಕೃಧಿ ॥

---

ಸಃ । ತ್ವಮ್ । ನಃ ।(೨೩)। ನಭಸಃ । ಪತೇ । ಊರ್ಜಮ್ । ನಃ । ಧೇಹಿ । ಭದ್ರಯಾ ॥ ಪುನಃ । ನಃ । ನಷ್ಟಮ್ । ಆ । ಕೃಧಿ । ಪುನಃ । ನಃ । ರಯಿಮ್ । ಆ । ಕೃಧಿ ॥

---

| ಮಂತ್ರ | ವಿನಿಯೋಗ |
|---|---|
| ಸಃ ತ್ವಂ...ಕೃಧಿ ॥ | ವಾಯುವಿನ ಉಪಸ್ಥಾನವನ್ನು ಮಾಡಲು |

---

✦**ನಭಸಃ ಪತೇ**=ಆಕಾಶಕ್ಕೆ ಒಡೆಯನಾದ ಎಲೈ! ವಾಯುವೇ! **ನಃ ಭದ್ರಯಾ** =ಮಂಗಲಕರವಾದ ನಮ್ಮ ಸ್ತೋತ್ರರೂಪವಾದ ಮಾತಿನಿಂದ [ಸುಪ್ರೀತನಾದ]; **ಸಃ ತ್ವಮ್**=ಆ ನೀನು; **ನಃ**=ನಮಗೆ; **ಊರ್ಜಮ್ ಧೇಹಿ**=ಅನ್ನಾದಿರಸಗಳನ್ನು ಕೊಡು; **ಪುನಃ**=ಮತ್ತೆ ಮತ್ತೆ; **ನಃ ನಷ್ಟಮ್ ಆ ಕೃಧಿ**=ನಮ್ಮ ನಷ್ಟವಾದ ಅನ್ನಾದಿರಸವನ್ನು ಉಂಟು ಮಾಡು; **ಪುನಃ**=ಮತ್ತೆ ಮತ್ತೆ; **ನಃ**=ನಮಗೆ; **ರಯಿಮ್ ಆ ಕೃಧಿ**=ಅಪೇಕ್ಷಿತವಾದ ಧನಾದಿಗಳನ್ನು ಅನುಗ್ರಹಿಸಿ ಉಂಟುಮಾಡು.

---

ವಾಯುವೇ! ನೀನು ಆಕಾಶಕ್ಕೆ ಒಡೆಯನು. ನಮ್ಮ ಮಂಗಳಕರವಾದ ಸ್ತುತಿಯಿಂದ ಪ್ರಸನ್ನನಾಗು. ಅನ್ನಾದಿರಸಗಳನ್ನು ನಮಗೆ ಕೊಡು. ಕಳೆದುಹೋದುದನ್ನು ಮತ್ತೆ ಮತ್ತೆ ಕೊಡು. ಬೇಕಾದ ಧನಾದಿಗಳನ್ನು ನಮಗೆ ಮತ್ತೆ ಮತ್ತೆ ಅನುಗ್ರಹಿಸು.

ದೇವ ಸಗ್ಗ್‌ಂಸ್ಥಾನ ಸಹಸ್ರಪೋಷಸ್ಯೇಶಿಷೇ ಸ ನೋ

ರಾಸ್ವಾಜ್ಯಾನಿಗ್‌ಂ ರಾಯಸ್ಪೋಷಗ್‌ಂ ಸುವೀರ್ಯಗ್‌ಂ

ಸಂವತ್ಸರೀಣಾಗ್‌ಂ ಸ್ವಸ್ತಿಮ್ ॥ ಅಗ್ನಿರ್ವಾವ ಯಮ

---

ದೇವ । ಸಗ್ಗ್‌ಂಸ್ಥಾನೇತಿ ಸಂ-ಸ್ಥಾನ । ಸಹಸ್ರಪೋಷಸ್ಯೇತಿ ಸಹಸ್ರ-ಪೋಷಸ್ಯ । ಈಶಿಷೇ । ಸಃ । ನಃ । ರಾಸ್ವ । ಅಜ್ಯಾನಿಮ್ । ರಾಯಃ । ಪೋಷಮ್ । ಸುವೀರ್ಯಮಿತಿ ಸು-ವೀರ್ಯಮ್ । ಸಂವತ್ಸರೀಣಾಮಿತಿ ಸಂ-ವತ್ಸರೀಣಾಮ್ । ಸ್ವಸ್ತಿಮ್ ॥ ಅಗ್ನಿಃ । ವಾವ । ಯಮಃ ।

---

| ಮಂತ್ರ | ವಿನಿಯೋಗ |
|---|---|
| ದೇವ ಸಗ್ಗ್‌ಂಸ್ಥಾನ...ಸ್ವಸ್ತಿಮ್ ॥ | ಆದಿತ್ಯೋಪಸ್ಥಾನವನ್ನು ಮಾಡಲು. |

---

✦ಸಗ್ಗ್‌ಂಸ್ಥಾನ ದೇವ=ಯಾವಾಗಲೂ ಚೆನ್ನಾಗಿ ಅಭಿವೃದ್ಧಿ ಹೊಂದುವ/ಪ್ರಕಾಶಿಸುವ ಓ! ಆದಿತ್ಯದೇವನೇ! **ಸಹಸ್ರಪೋಷಸ್ಯ ಈಶಿಷೇ**=ಸಹಸ್ರಸಂಖ್ಯಾಕವಾದ ಧನ ಪಶ್ವಾದಿಪುಷ್ಟಿಗೆ ನೀನು ಪ್ರಭುವಾಗಿರುವೆ; **ಸಃ**=ಅಂತಹ [ನೀನು] **ನಃ**=ನಮಗೆ; **ಅಜ್ಯಾನಿಮ್**=ಬಡತನವಿಲ್ಲದಿರುವಿಕೆಯನ್ನೂ; **ರಾಯಃ ಪೋಷಮ್**=ಧನಸಮೃದ್ಧಿಯನ್ನೂ; **ಸುವೀರ್ಯಮ್**=ಒಳ್ಳೆಯ ಪುತ್ರಸಂಪತ್ತಿಯನ್ನೂ; **ಸಂವತ್ಸರೀಣಾಮ್ ಸ್ವಸ್ತಿಮ್**=ಆಯಾ ಸಂವತ್ಸರಕ್ಕೆ ತಕ್ಕುದಾದ ಮಂಗಲವನ್ನೂ; **ರಾಸ್ವ**=ಕೊಡು.

---

## ವೇದಿದಾಹಕ್ಕೆ ಸಂಬಂಧಿಸಿದ ಪ್ರಸ್ತಾವನೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಗ್ನಿಃ ವಾವ ಯಮಃ | ['ಯತ್ಕುಸೀದಮ್' ಎಂಬ ಮಂತ್ರದಿಂದ ಹೇಳಲ್ಪಡುವ] ಯಮನು ಅಗ್ನಿಯಷ್ಟೆ. |

ಇಯಂ ಯಮೀ ಕುಸೀದಂ ವಾ ಏತದ್ಯಮಸ್ಯ
ಯಜಮಾನ ಆದತ್ತೇ ಯದೋಷಧೀಭಿರ್ವೇದಿಗ್ಗ್ಂ
ಸ್ತೃಣಾತಿ ಯದನುಪೌಷ್ಯ ಪ್ರಯಾಯಾ-

---

ಇಯಮ್ । ಯಮೀ । ಕುಸೀದಮ್ । ವೈ । ಏತತ್ । ಯಮಸ್ಯ । ಯಜಮಾನಃ ।
ಏತಿ । ದತ್ತೇ । ಯತ್ । ಓಷಧೀಭಿರಿತ್ಯೋಷಧಿ-ಭಿಃ । ವೇದಿಮ್ । ಸ್ತೃಣಾತಿ ।
ಯತ್ । ಅನುಪೌಷ್ಯೇತ್ಯನುಪ-ಓಷ್ಯ । ಪ್ರಯಾಯಾದಿತಿ ಪ್ರ-ಯಾಯಾತ್ ।

---

| | |
|---|---|
| ಇಯಮ್ ಯಮೀ | ಈ ವೇದಿರೂಪವಾದ ಭೂಮಿಯು ಯಮನ ಪತ್ನಿಯಾಗಿದ್ದಾಳೆ. |
| ಯತ್ ಓಷಧೀಭಿಃ ವೇದಿಮ್ ಸ್ತೃಣಾತಿ | [ಅಗ್ನಿಯ ಸಾಹಾಯ್ಯದಿಂದ ಭೂಮಿಯಲ್ಲಿ ಬೆಳೆದ] ದರ್ಭರೂಪವಾದ ಓಷಧಿಗಳಿಂದ ವೇದಿಯನ್ನು ಆಚ್ಛಾದಿಸುವನೆಂಬುದು |
| ಏತತ್ ಯಜಮಾನಃ ಕುಸೀದಮ್ ಯಮಸ್ಯ ಆದತ್ತೇ ವೈ | ಈ ಓಷಧೀರೂಪವಾದ ಸಾಲವನ್ನು ಯಜಮಾನನು [ಅಗ್ನಿರೂಪನಾದ ಯಮನಿಂದಲೂ, ಪೃಥಿವೀರೂಪಳಾದ ಯಮಿಯಿಂದಲೂ ತೆಗೆದು ಕೊಂಡಿರುತ್ತಾನೆ.] |
| ಯತ್ ಅನುಪೌಷ್ಯ ಪ್ರಯಾಯಾತ್ | ಯಜಮಾನನು ಅಧ್ವರ್ಯುವಿನಿಂದ ವೇದಿದಾಹವನ್ನು ಮಾಡಿಸದೆ ಯಜ್ಞಭೂಮಿಯಿಂದ ಹೊರಟು ಹೋದರೆ |

---

ಪ್ರಕಾಶಮಾನನಾದ ಸೂರ್ಯದೇವನೇ! ನೀನು ಎಲ್ಲವನ್ನೂ ಪುಷ್ಟಿಗೊಳಿಸುವವನು. ನೀನು ನಮ್ಮ ಬಡತನವನ್ನು ಹೋಗಲಾಡಿಸು. ಧನಸಮೃದ್ಧಿಯನ್ನೂ, ಪುತ್ರ ಸಂಪತ್ತನ್ನೂ/**ಶಕ್ತಿಯನ್ನೂ** ಸಂವತ್ಸರಗಳಿಗೆ ತಕ್ಕ ಮಂಗಳಗಳನ್ನೂ ಕೊಡು.

ದ್ಗ್ರೀವಬದ್ಧಮೇನ [ಮೇನಮ್(೨೪)ಅಮುಷ್ಮಿ]

ಮಮುಷ್ಮಿಲ್ಲೋಕೇ ನೇನೀಯೇರನ್

ಯತ್ಕುಸೀದಮಪ್ರತೀತ್ತಂ ಮಯೀತ್ಯುಪೌಷತೀಹೈವ ಸನ್

---

ಗ್ರೀವಬದ್ಧಮಿತಿ ಗ್ರೀವ-ಬದ್ಧಮ್ । ಏನಮ್ ।(೨೪)। ಅಮುಷ್ಮಿನ್ನ್ । ಲೋಕೇ । ನೇನೀಯೇರನ್ನ್। ಯತ್ । ಕುಸೀದಮ್ । ಅಪ್ರತೀತ್ತಮಿತ್ಯಪ್ರತಿ-ಇತ್ತಮ್ । ಮಯಿ । ಇತಿ । ಉಪೇತಿ । ಓಷತಿ । ಇಹ । ಏವ । ಸನ್ನ್।

---

| | |
|---|---|
| ಏನಮ್ ಗ್ರೀವಬದ್ಧಮ್ ಅಮುಷ್ಮಿನ್ ಲೋಕೇ ನೇನೀಯೇರನ್ | ಈ ಯಜಮಾನನನ್ನು ಕುತ್ತಿಗೆಯಲ್ಲಿ ಬದ್ಧನನ್ನಾಗಿ ಮಾಡಿ ಪರಲೋಕದಲ್ಲಿ ಒಯ್ಯುವರು. |

### ವೇದಿದಾಹವಿಧಿ; ಪ್ರಶಂಸೆ

| | |
|---|---|
| ಯತ್ ಕುಸೀದಮ್ ಅಪ್ರತೀತ್ತಮ್ ಮಯಿ ಇತಿ ಉಪೌಷತಿ | 'ಯತ್ ಕುಸೀದಮ್' ಎಂದು ಪ್ರಾರಂಭವಾಗುವ ಮಂತ್ರದಿಂದ ವೇದಿದಾಹವನ್ನು ಮಾಡಬೇಕು/ ಮಾಡಿಸಬೇಕು. [ವಿಧಿ] |
| ಇಹ ಏವ ಸನ್ | ಈ ಯಾಗಭೂಮಿಯಲ್ಲಿಯೇ ಇದ್ದುಕೊಂಡು |

---

ಯಜಮಾನನು ದರ್ಭೆಗಳಿಂದ ವೇದಿಯನ್ನು ಆಚ್ಛಾದಿಸುವುದರಿಂದ ಆ ದರ್ಭೆಗಳೆಂಬ ಓಷಧಿಯನ್ನು ಯಮ-ಯಮಿಯರಿಂದ ಪಡೆದಿರುವನು. ಅಗ್ನಿ-ಪೃಥಿವಿಯರೇ ಯಮ-ಯಮಿಯರು. ಹೀಗಾಗಿ ವೇದಿದಾಹವನ್ನು ಮಾಡಿಸದ ಯಜಮಾನನು ಸಾಲ ತೀರಿಸದವನಾಗುತ್ತಾನೆ. ಸಾಲವನ್ನು ತೀರಿಸದವನನ್ನು ಪರಲೋಕದಲ್ಲಿ ಹಗ್ಗದಿಂದ ಕುತ್ತಿಗೆಯಲ್ಲಿ ಕಟ್ಟಿ ಎಳೆದಾಡುತ್ತಾರೆ ಎಂದು ಪುರಾಣಗಳಲ್ಲಿ ಇದೆ. ಹಾಗಾಗದಿರಲು ವೇದಿದಾಹವನ್ನು ಅನುಷ್ಠಿಸುತ್ತಾರೆ.

ಯಮಂ ಕುಸೀದಂ ನಿರವದಾಯಾನೃಣಸ್ಸುವರ್ಗಲ್ಲೋಕ

ಮೇತಿ ಯದಿ ಮಿಶ್ರಮಿವ ಚರೇದಞ್ಜಲಿನಾ

ಸಕ್ತೂನ್ಪ್ರದಾವ್ಯೇ ಜುಹುಯಾ-

---

ಯಮಮ್ । ಕುಸೀದಮ್ । ನಿರವದಾಯೇತಿ ನಿಃ-ಅವದಾಯ । ಅನೃಣಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ । ಯದಿ । ಮಿಶ್ರಮ್ । ಇವ । ಚರೇತ್ । ಅಞ್ಜಲಿನಾ । ಸಕ್ತೂನ್ । ಪ್ರದಾವ್ಯ ಇತಿ ಪ್ರ-ದಾವ್ಯೇ । ಜುಹುಯಾತ್ ।

---

| | |
|---|---|
| ಯಮಮ್ ಕುಸೀದಮ್ ನಿರವದಾಯ | ಯಮನಿಗೆ ಕೊಡಬೇಕಾದ ಸಾಲವನ್ನು ತೀರಿಸಿ |
| ಅನೃಣಃ ಸುವರ್ಗಮ್ ಲೋಕಮ್ ಏತಿ | ಋಣಮುಕ್ತನಾಗಿ ಸ್ವರ್ಗಲೋಕಕ್ಕೆ ಹೋಗುತ್ತಾನೆ. |

ಸಕ್ತುಹೋಮವಿಧಿ;ಬ್ರಾಹ್ಮಣ

| | |
|---|---|
| ಯದಿ ಮಿಶ್ರಮ್ ಇವ ಚರೇತ್ | ಅಂಗಗಳನ್ನು ಸೇರಿದಂತೆ ಅನುಷ್ಠಾನವನ್ನು ಮಾಡಿದರೆ/ಭೋಜನನಿಯಮಗಳನ್ನು ಮೀರಿ ಭುಜಿಸಿದರೆ |
| ಅಞ್ಜಲಿನಾ ಸಕ್ತೂನ್ ಪ್ರದಾವ್ಯೇ ಜುಹುಯಾತ್ | ವೇದಿದಾಹಾಗ್ನಿಯಲ್ಲಿ ಬೊಗಸೆಯಿಂದ ಸಕ್ತುಗಳ-'ವಿಶ್ವಲೋಪ' ಎಂಬ ಮಂತ್ರದಿಂದ-ಹೋಮವನ್ನು ಅನುಷ್ಠಿಸಬೇಕು. |

---

ಹೀಗೆ ಹಿಂದೆ ಹೇಳಿರುವ 'ಯತ್ ಕುಸೀದಮ್' ಎಂಬ ಮಂತ್ರದಿಂದ ವೇದಿದಾಹವನ್ನು ಅನುಷ್ಠಿಸಬೇಕೆಂಬ ವಿಧಿಯು ಇದೆ. ಹೀಗೆ ಅನುಷ್ಠಿಸುವುದರಿಂದ ಈ ಯಾಗಭೂಮಿಯಲ್ಲಿಯೇ ಇದ್ದುಕೊಂಡು ಯಮನ ಸಾಲವನ್ನು ತೀರಿಸಿ, ಋಣಮುಕ್ತನಾಗಿ

ದೇಷ ವಾ ಅಗ್ನಿರ್ವೈಶ್ವಾನರೋ ಯತ್ಪ್ರದಾವ್ಯಸ್ಸ

ಏವೈನಗ್ಗ್ಂ ಸ್ವದಯತ್ಯಹ್ನಾಂ ವಿಧಾನ್ಯಾಮೇಕಾಷ್ಟಕಾಯಾ-

---

ಏಷಃ । ವೈ । ಅಗ್ನಿಃ । ವೈಶ್ವಾನರಃ । ಯತ್ । ಪ್ರದಾವ್ಯ ಇತಿ ಪ್ರ-ದಾವ್ಯಃ । ಸಃ । ಏವ ।

ಏನಮ್ । ಸ್ವದಯತಿ । ಅಹ್ನಾಮ್ । ವಿಧಾನ್ಯಾಮಿತಿ ವಿ-ಧಾನ್ಯಾಮ್ ।

ಏಕಾಷ್ಟಕಾಯಾಮಿತ್ಯೇಕ-ಅಷ್ಟಕಾಯಾಮ್ ।

---

| | |
|---|---|
| ಯತ್ ಪ್ರದಾವ್ಯಃ ಏಷಃ ವೈ ಅಗ್ನಿಃ ವೈಶ್ವಾನರಃ | ಪ್ರದಾವ್ಯ[ವೇದಿದಾಹಾಗ್ನಿ]ವೆಂಬ ಅಗ್ನಿಯು ಯಾವುದುಂಟೋ ಈ ಅಗ್ನಿಯೇ ವೈಶ್ವಾನರಾಗ್ನಿಯಾಗಿದೆ. |
| ಸಃ ಏವ ಏನಮ್ ಸ್ವದಯತಿ | ಆ ಅಗ್ನಿಯೇ ಈ ಯಜಮಾನನನ್ನು ಮಿಶ್ರಾಚರಣ ದೋಷದಿಂದ ವಿಮುಕ್ತನನ್ನಾಗಿ ಮಾಡುತ್ತಾನೆ. |

### ಪ್ರಾಸಂಗಿಕವಾದ ದಾಹವಿಧಿ; ಪ್ರಶಂಸೆ

| | |
|---|---|
| ಅಹ್ನಾಮ್ ವಿಧಾನ್ಯಾಮ್ | ಗವಾಮಯನಾದಿ ಸಂವತ್ಸರಾದಿಸತ್ರಗಳ ದೀಕ್ಷೆಯ ದಿನವನ್ನು ತಿಳಿಸುವ |
| ಏಕಾಷ್ಟಕಾಯಾಮ್ | ಜ್ಯೇಷ್ಠಾನಕ್ಷತ್ರಯುಕ್ತವಾದ ಮಾಘ ಕೃಷ್ಣ ಅಷ್ಟಮಿಯಲ್ಲಿ |

---

ಸ್ವರ್ಗಲೋಕಕ್ಕೆ ಹೋಗುವನು. ಈ ವೇದಿದಾಹದ ವಿಧಿಯು ಪ್ರಶಸ್ತ ಎಂದು ತಾತ್ಪರ್ಯ.

ಕೆಲವು ವೇಳೆ ತಿಳಿದೋ ತಿಳಿಯದೆಯೋ ಯಾಗದ ಅಂಗಗಳ ವಿಷಯದಲ್ಲಿಯೂ, ಆಹಾರವಿಷಯದಲ್ಲಿಯೂ, ನಿಯಮಗಳನ್ನು ಮೀರಿ ನಡೆದಿರಬಹುದು. ಅದರ ಪ್ರಾಯಶ್ಚಿತ್ತವಿದು. ವೈಶ್ವಾನರಾಗ್ನಿಯು ಎಲ್ಲ ಮಾನವರಿಗೂ ಬೇಕಾದವನು.

ಮಪೂಪಂ ಚತುಶ್ಶರಾವಂ ಪಕ್ತ್ವಾ ಪ್ರಾತರೇತೇನ ಕಕ್ಷಮುಪೌಷೇದ್ಯದಿ [ದ್ಯದಿ(೨೫)]ದಹತಿ ಪುಣ್ಯಸಮಂ ಭವತಿ

---

ಅಪೂಪಮ್ । ಚತುಶ್ಶರಾವಮಿತಿ ಚತುಃ-ಶರಾವಮ್ । ಪಕ್ತ್ವಾ । ಪ್ರಾತಃ । ಏತೇನ । ಕಕ್ಷಮ್ । ಉಪೇತಿ । ಓಷೇತ್ । ಯದಿ ।(೨೫)। ದಹತಿ । ಪುಣ್ಯಸಮಮಿತಿ ಪುಣ್ಯ-ಸಮಮ್ । ಭವತಿ ।

---

| | |
|---|---|
| ಚತುಶ್ಶರಾವಮ್ | *ಎಂಟು ಪ್ರಸ್ಥಗಳ/ಸೇರುಗಳ ಹಿಟ್ಟಿನಿಂದ ಮಾಡಿದ |
| ಅಪೂಪಮ್ ಪಕ್ತ್ವಾ | ಅಪೂಪವನ್ನು ಚೆನ್ನಾಗಿ ಬೇಯಿಸಿ |
| ಪ್ರಾತಃ ಏತೇನ ಕಕ್ಷಮ್ ಉಪೌಷೇತ್ | ಮಾರನೆಯ ದಿನ ಪ್ರಾತಃಕಾಲದಲ್ಲಿ ಈ ಅಪೂಪದಿಂದ ಕಾಡಿನ ಪೊದೆಯನ್ನು ಸುಡಬೇಕು. [ವಿಧಿ] |
| ಯದಿ ದಹತಿ ಪುಣ್ಯಸಮಮ್ ಭವತಿ | ಅಗ್ನಿಯು ಪೊದೆಯನ್ನು ಸುಟ್ಟರೆ ಪುಣ್ಯಕ್ಕೆ ಸಮನಾಗುತ್ತದೆ/ಯಾಗವು ನಿರ್ವಿಘ್ನವಾಗಿ ನಡೆಯುವುದೆಂದು ಸೂಚಿಸುವ ಪುಣ್ಯಕಾರ್ಯವಾಗುತ್ತದೆ. |

---

ಪರಮಾತ್ಮಸ್ವರೂಪನು. ಗೀತೆಯಲ್ಲಿ 'ಅಹಂ ವೈಶ್ವಾನರೋ ಭೂತ್ವಾ' ಎಂಬ ಕೃಷ್ಣ ಪರಮಾತ್ಮನ ಮಾತನ್ನು ಗಮನಿಸಬಹುದು. ಈ ಪ್ರದಾವ್ಯಾಗ್ನಿಯು ವೈಶ್ವಾನರಾಗ್ನಿಯೇ. ಅವನು ಯಜಮಾನನ ದೋಷಗಳನ್ನು ಪರಿಹರಿಸಲಿ.

ದಾಹಪ್ರಸಂಗವಿರುವುದರಿಂದ ಶ್ರುತಿಯು ತಿಳಿಸುತ್ತಿರುವ ಪ್ರಯೋಗವಿಶೇಷ ಇದು. ಸಂವತ್ಸರಸಾಧ್ಯವಾದ ಸತ್ರಾದಿಗಳನ್ನು ಅನುಷ್ಠಿಸುವಾಗ ಅವು ನಿರ್ವಿಘ್ನವಾಗಿ ನಡೆಯುತ್ತ

---

* ಎರಡು ಪ್ರಸ್ಥಗಳಿಗೆ ಒಂದು ಶರಾವವಾಗುತ್ತದೆ.

# ಯದಿ ನ ದಹತಿ ಪಾಪಸಮಮೇತೇನ ಹ ಸ್ಮ ವಾ ಋಷಯಃ ಪುರಾ ವಿಜ್ಞಾನೇನ ದೀರ್ಘಸತ್ರಮುಪಯಂತಿ

---

ಯದಿ । ನ । ದಹತಿ । ಪಾಪಸಮಮಿತಿ ಪಾಪ-ಸಮಮ್ । ಏತೇನ । ಹ । ಸ್ಮ । ವೈ । ಋಷಯಃ । ಪುರಾ । ವಿಜ್ಞಾನೇನೇತಿ ವಿ-ಜ್ಞಾನೇನ । ದೀರ್ಘಸತ್ರಮಿತಿ ದೀರ್ಘ-ಸತ್ರಮ್ । ಉಪೇತಿ । ಯಂತಿ ।

---

| | |
|---|---|
| ಯದಿ ನ ದಹತಿ | ಸುಡದೆ ಇದ್ದರೆ ಪಾಪಕ್ಕೆ ಸಮನಾಗುತ್ತದೆ. |
| ಪಾಪಸಮಮ್ ಭವತಿ | ಯಜ್ಞವಿಘ್ನವು ಒದಗಬಹುದೆಂದು ಸೂಚಿಸುತ್ತದೆ. |
| ಪುರಾ ಋಷಯಃ ವೈ ಏತೇನ | ಪ್ರಾಚೀನರಾದ ಋಷಿಗಳು ಈ ವಿಧವಾದ ದಾಹ |
| ವಿಜ್ಞಾನೇನ | ಜ್ಞಾನದಿಂದಲೇ |
| ಪುರಾ | ಹಿಂದೆ |
| ದೀರ್ಘಸತ್ರಮ್ ಉಪಯಂತಿ | ಸಂವತ್ಸರಸಾಧ್ಯವಾದ/ಬಹುದಿನಗಳು ಮಾಡಬೇಕಾದ ಸತ್ರಯಾಗಗಳನ್ನು ಆರಂಭಿಸುತ್ತಿದ್ದರು. |
| ಸ್ಮ ಹ | [ಅಂತಹ ಯಾಗಗಳನ್ನು ಆರಂಭಿಸುವವರು ಹೀಗೆ ಮಾಡಬೇಕು.] |

---

ವೆಯೋ ಇಲ್ಲವೋ ಎಂಬುದನ್ನು ತಿಳಿಯಲು ಪುರಾತನಮಹರ್ಷಿಗಳು ಕೈಗೊಳ್ಳುತ್ತಿದ್ದ ಪ್ರಯೋಗವಿಶೇಷ.'ಸಂವತ್ಸರಾಯ ದೀಕ್ಷಿಷ್ಯಮಾಣಾ ಏಕಾಷ್ಟಕಾಯಾಂ ದೀಕ್ಷೇರನ್' ಎಂದು ಹೇಳಲ್ಪಟ್ಟಿರುವ ಮಾಘ ಕೃಷ್ಣಾಷ್ಟಮಿ ದಿನವಾದ ಏಕಾಷ್ಟಕೆಯೆಂದು ಮಾಡುವ ಕಾರ್ಯವಿದು.

ಎಂಟು ಸೇರುಗಳ ಹಿಟ್ಟಿನಿಂದ ಅಪೂಪವನ್ನು ಮಾಡಿ ಚೆನ್ನಾಗಿ ಬೇಯಿಸಬೇಕು. ಮಾರನೆಯ ದಿನ ಬೆಳಗಿನ ಹೊತ್ತು ಕಾಡಿನ ಪೊದೆಯಲ್ಲಿ ಆ ಅಪೂಪದ ಮೇಲೆ ಕೆಂಡಗಳನ್ನೂ, ಒಣಗಿದ ಹುಲ್ಲುಗಳನ್ನೂ ಹಾಕಿ ಹೊತ್ತಿಸಬೇಕು. ಅದೆಲ್ಲವೂ ಚೆನ್ನಾಗಿ

# ಯೋ ವಾ ಉಪದ್ರಷ್ಟಾರಮುಪಶ್ರೋತಾರಮನುಖ್ಯಾತಾರಂ ವಿದ್ವಾನ್ ಯಜತೇ ಸಮಮುಷ್ಮಿಲ್ಲೋಕ ಇಷ್ಟಾಪೂರ್ತೇನ ಗಚ್ಛತೇಽಗ್ನಿರ್ವಾ ಉಪದ್ರಷ್ಟಾ

---

ಯಃ । ವೈ । ಉಪದ್ರಷ್ಟಾರಮಿತ್ಯುಪ-ದ್ರಷ್ಟಾರಮ್ । ಉಪಶ್ರೋತಾರಮಿತ್ಯುಪ - ಶ್ರೋತಾರಮ್ । ಅನುಖ್ಯಾತಾರಮಿತ್ಯನು-ಖ್ಯಾತಾರಮ್ । ವಿದ್ವಾನ್ । ಯಜತೇ । ಸಮಿತಿ । ಅಮುಷ್ಮಿನ್ನ್ । ಲೋಕೇ । ಇಷ್ಟಾಪೂರ್ತೇನೇತೀಷ್ಟ-ಪೂರ್ತೇನ । ಗಚ್ಛತೇ । ಅಗ್ನಿಃ । ವೈ । ಉಪದ್ರಷ್ಟೇತ್ಯುಪ-ದ್ರಷ್ಟಾ ।

---

ಉಪಸ್ಥಾನವಿಧಿ; ಪ್ರಶಂಸೆ

| | |
|---|---|
| ಯಃ ವೈ ವಿದ್ವಾನ್ | ಯಾವ ವಿದ್ವಾಂಸನಾದ ಯಜಮಾನನು |
| ಉಪದ್ರಷ್ಟಾರಮ್ | ಉಪದ್ರಷ್ಟಾರನನ್ನು/ಎಲ್ಲವನ್ನೂ ಚೆನ್ನಾಗಿ ನೋಡಿ ಕೊಳ್ಳುವವನನ್ನು |
| ಉಪಶ್ರೋತಾರಮ್ | ಉಪಶ್ರೋತಾರನನ್ನು/ಎಲ್ಲವನ್ನೂ ಚೆನ್ನಾಗಿ ಕೇಳಿಸಿ ಕೊಂಡು ಸರಿಪಡಿಸುವವನನ್ನೂ |
| ಅನುಖ್ಯಾತಾರಮ್ | ಅನುಖ್ಯಾತನನ್ನು/ಕಾರ್ಯವನ್ನು ವಿಸ್ತರಿಸುವವನನ್ನೂ |
| ಯಜತೇ | ಪೂಜಿಸುತ್ತಾನೆಯೋ [ಅವನು] |
| ಅಮುಷ್ಮಿನ್ ಲೋಕೇ | ಸ್ವರ್ಗಲೋಕದಲ್ಲಿ |
| ಇಷ್ಟಾಪೂರ್ತೇನ | ಶ್ರೌತಸ್ಮಾರ್ತಕರ್ಮಫಲಗಳಿಂದ |
| ಸಂಗಚ್ಛತೇ | ಚೆನ್ನಾಗಿ ಯುಕ್ತನಾಗುತ್ತಾನೆ. |
| ಅಗ್ನಿಃ ವೈ ಉಪದ್ರಷ್ಟಾ | ಅಗ್ನಿಯೇ ಉಪದ್ರಷ್ಟನು. |

---

ಸುಟ್ಟುಹೋದರೆ ಪುಣ್ಯಸಮವೆಂದೂ ಸತ್ರವು ನಿರ್ವಿಘ್ನವಾಗಿ ಮುಗಿಯುವುದೆಂದು ತಿಳಿದು ಆರಂಭಿಸಬೇಕು. ಸುಟ್ಟು ಹೋಗದಿದ್ದರೆ ಪಾಪಸಮವೆಂದು ಭಾವಿಸಿ ಆರಂಭಿಸದೇ

ವಾಯುರುಪಶ್ರೋತಾಽಽದಿತ್ಯೋಽನುಖ್ಯಾತಾ ತಾನ್ ಯ

ಏವಂ ವಿದ್ವಾನ್ ಯಜತೇ ಸಮಮುಷ್ಮಿಲ್ಲೋಕ

ಇಷ್ಟಾಪೂರ್ತೇನ ಗಚ್ಛತೇ—

---

ವಾಯುಃ। ಉಪಶ್ರೋತೇತ್ಯುಪ-ಶ್ರೋತಾ। ಆದಿತ್ಯಃ। ಅನುಖ್ಯಾತೇತ್ಯನು-ಖ್ಯಾತಾ।

ತಾನ್। ಯಃ। ಏವಮ್। ವಿದ್ವಾನ್। ಯಜತೇ। ಸಮಿತಿ। ಅಮುಷ್ಮಿನ್ನ್। ಲೋಕೇ।

ಇಷ್ಟಾಪೂರ್ತೇನೇತೀಷ್ಟ-ಪೂರ್ತೇನ। ಗಚ್ಛತೇ।

---

| | |
|---|---|
| ವಾಯುಃ ಉಪಶ್ರೋತಾ | ವಾಯುವು ಉಪಶ್ರೋತನು. |
| ಆದಿತ್ಯಃ ಅನುಖ್ಯಾತಾ | ಆದಿತ್ಯದೇವನು ಅನುಖ್ಯಾತನು. |
| ಯಃ ಏವಮ್ ವಿದ್ವಾನ್ ತಾನ್ ಯಜತೇ | ಅವರನ್ನು ಹೀಗೆಂದು ತಿಳಿದು ಯಾವ ಯಜಮಾನನು ಆರಾಧಿಸುತ್ತಾನೆಯೋ, |
| [ಸಃ] ಅಮುಷ್ಮಿನ್ ಲೋಕೇ ಇಷ್ಟಾಪೂರ್ತೇನ ಸಂಗಚ್ಛತೇ | ಆ ಯಜಮಾನನು ಇಷ್ಟಾಪೂರ್ತಗಳ ಫಲವನ್ನು ಪಡೆದು ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸುತ್ತಾನೆ. |

---

ಇರಬೇಕು. ಹೀಗೆ ಪುರಾತನರು ಮಾಡುತ್ತಿದ್ದರು. ಈಗಲೂ ಹಾಗೆಯೇ ಮಾಡಬಹುದು. ಇಲ್ಲಿ 'ಯತ್ಕುಸೀದಮ್' ಎಂದು ವೇದಿದಾಹಮಂತ್ರವಿದೆ. ಈ ಕಕ್ಷದಾಹಕ್ಕೆ ಕೇವಲ ದಾಹವು ವಿಹಿತವಾಗಿದೆ. ಮಂತ್ರವು ಇಲ್ಲ. ಇದು ಪ್ರಾಸಂಗಿಕವಿಧಿ.

ಯಾವ ವಿದ್ವಾಂಸನಾದ ಯಜಮಾನನು ಉಪದ್ರಷ್ಟಾರ, ಉಪಶ್ರೋತಾರ, ಅನುಖ್ಯಾತಾರರನ್ನು ಪೂಜಿಸುವನೋ ಅವನು ಸ್ವರ್ಗಲೋಕದಲ್ಲಿ ಶ್ರೌತ-ಸ್ಮಾರ್ತ ಕರ್ಮಗಳ ಫಲವನ್ನು ಅನುಭವಿಸುತ್ತಾ ಸುಖವಾಗಿರುತ್ತಾನೆ. ಇಲ್ಲಿ ಅಗ್ನಿಯೇ ಉಪದ್ರಷ್ಟನು. ವಾಯುವೇ ಉಪಶ್ರೋತನು. ಆದಿತ್ಯದೇವನು ಅನುಖ್ಯಾತನು.

–ಽಯಂ ನೋ ನಭಸಾ ಪುರ [ಪುರಃ(೨೬)] ಇತ್ಯಾಹಾಗ್ನಿ

ರ್ವೈ ನಭಸಾ ಪುರೋಽಗ್ನಿಮೇವ ತದಾಹೈತನ್ಮೇ

ಗೋಪಾಯೇತಿ ಸ ತ್ವಂ ನೋ ನಭಸಸ್ಪತ ಇತ್ಯಾಹ

---

ಅಯಮ್ । ನಃ । ನಭಸಾ । ಪುರಃ ।(೨೬)। ಇತಿ । ಆಹ । ಅಗ್ನಿಃ । ವೈ । ನಭಸಾ ।

ಪುರಃ । ಅಗ್ನಿಮ್ । ಏವ । ತತ್ । ಆಹ । ಏತತ್ । ಮೇ । ಗೋಪಾಯ । ಇತಿ ।

ಸಃ । ತ್ವಮ್ । ನಃ । ನಭಸಃ । ಪತೇ । ಇತಿ । ಆಹ ।

---

## ಉಪಸ್ಥಾನಮಂತ್ರಗಳ ವಿವರಣೆ

| | |
|---|---|
| ಅಯಮ್ ನಃ ನಭಸಾ ಪುರಃ ಇತಿ ಆಹ | ಮೊದಲನೆಯ ಉಪಸ್ಥಾನಮಂತ್ರದಲ್ಲಿ 'ಅಯಂ ನೋ ನಭಸಾ ಪುರಃ' ಎಂದು ಹೇಳಿದೆ. |
| ಅಗ್ನಿಃ ವೈ ನಭಸಾ ಪುರಃ | ತೇಜಸ್ಸಿನಿಂದ ಎಲ್ಲರ ಅಗ್ರಭಾಗದಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿಯೇ 'ನಭಸಾ ಪುರಃ' ಎಂದು ಹೇಳಲ್ಪಡುತ್ತಾನೆ. |
| ಏತತ್ ಮೇ ಗೋಪಾಯ ಇತಿ ತತ್ ಅಗ್ನಿಮ್ ಏವ ಆಹ | ಈ ನನ್ನ ಕರ್ಮಫಲವನ್ನು ರಕ್ಷಿಸು ಎಂಬುದಾಗಿ ಆ ಮಂತ್ರವು ಅಗ್ನಿಯನ್ನು ಕುರಿತು ಹೇಳುತ್ತದೆ. |
| ಸಃ ತ್ವಮ್ ನಃ ನಭಸಸ್ಪತ ಇತಿ ಆಹ | ಎರಡನೆಯ ಮಂತ್ರದಲ್ಲಿ 'ಸ ತ್ವಂ ನೋ ನಭಸಸ್ಪತೇ' ಎಂದು ಹೇಳಿದೆ. |

---

ಅವರನ್ನು ಹೀಗೆ ತಿಳಿದು ಯಾವ ಯಜಮಾನನು ಪೂಜಿಸುವನೋ ಅವನು ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾನೆ. 'ಯಜತೇ' ಎಂಬ ಕ್ರಿಯಾಪದ ದಲ್ಲಿರುವ 'ಯಜ' ಧಾತುವಿಗೆ 'ದೇವಪೂಜಾ, ಸಂಗತಿಕರಣ, ದಾನ' ಎಂಬ ಅನೇಕ ಅರ್ಥಗಳಲ್ಲಿ ಇಲ್ಲಿ ದೇವಪೂಜಾ ಎಂಬ ಅರ್ಥವನ್ನು ಇಟ್ಟುಕೊಳ್ಳಲಾಗಿದೆ.

ವಾಯುರ್ವೈ ನಭಸಸ್ಪತಿರ್ವಾಯುಮೇವ ತದಾಹೈತನ್ಮೇ

ಗೋಪಾಯೇತಿ ದೇವ ಸಗ್ಂಸ್ಥಾನೇತ್ಯಾಹಾಸೌ ವಾ

ಆದಿತ್ಯೋ ದೇವಸ್ಸಗ್ಂಸ್ಥಾನ

---

ವಾಯುಃ । ವೈ । ನಭಸಃ । ಪತಿಃ । ವಾಯುಮ್ । ಏವ । ತತ್ । ಆಹ । ಏತತ್ । ಮೇ । ಗೋಪಾಯ । ಇತಿ । ದೇವ । ಸಗ್ಂಸ್ಥಾನೇತಿ ಸಂ-ಸ್ಥಾನ । ಇತಿ । ಆಹ । ಅಸೌ । ವೈ । ಆದಿತ್ಯಃ । ದೇವಃ । ಸಗ್ಂಸ್ಥಾನ ಇತಿ ಸಂ-ಸ್ಥಾನಃ ।

---

| | |
|---|---|
| ವಾಯುಃ ವೈ ನಭಸಃ ಪತಿಃ | ಅಂತರಿಕ್ಷದಲ್ಲಿ ಎಲ್ಲೆಡೆ ಸಂಚರಿಸುವ ವಾಯುವೇ ಅಂತರಿಕ್ಷದ ಒಡೆಯನು. |
| ತತ್ ಏತತ್ ಮೇ ಗೋಪಾಯ ಇತಿ ವಾಯುಮ್ ಏವ ಆಹ | ವಾಯುವನ್ನು ಕುರಿತು ಈ ಮಂತ್ರವು 'ಈ ನನ್ನ **ಕರ್ಮಫಲವನ್ನು ರಕ್ಷಿಸು'** ಎಂದು ಹೇಳುತ್ತದೆ. |
| ದೇವ ಸಗ್ಂಸ್ಥಾನ ಇತಿ ಆಹ | ಮೂರನೆಯ ಮಂತ್ರದಲ್ಲಿ 'ದೇವ ಸಗ್ಂಸ್ಥಾನ' ಎಂದು ಹೇಳಿದೆ. |
| ಅಸೌ ವೈ ಆದಿತ್ಯಃ ದೇವಃ ಸಗ್ಂಸ್ಥಾನಃ | ಕಿರಣಗಳಿಂದ ಎಲ್ಲೆಡೆ ಅಭಿವೃದ್ಧಿ ಹೊಂದುವ ಈ ಆದಿತ್ಯದೇವನೇ ಸಂಸ್ಥಾನನಾದ ದೇವನಾಗಿರುತ್ತಾನೆ. |

---

ಅಗ್ನಿ-ವಾಯು-ಸೂರ್ಯರ ಉಪಸ್ಥಾನಮಂತ್ರಗಳ ವಿವರಣೆಯು ಇಲ್ಲಿದೆ. ಮಂತ್ರಗಳ ವ್ಯುತ್ಪತ್ತಿಯನ್ನು ನಿರೂಪಿಸುವ ಬ್ರಾಹ್ಮಣಭಾಗಗಳು ಅಲ್ಲಲ್ಲಿ ವೇದದಲ್ಲಿ ಇವೆ.

ಅಗ್ನಿ-ವಾಯು-ಸೂರ್ಯರು ನಮ್ಮ ಉಪಸ್ಥಾನದಿಂದ ಪ್ರಸನ್ನರಾಗಿ ಈ ಯಜ್ಞಫಲವನ್ನು ರಕ್ಷಿಸಿ ನಮಗೆ ಸಿಕ್ಕುವಂತೆ ಅನುಗ್ರಹಿಸಲಿ ಎಂದು ತಾತ್ಪರ್ಯ.

ಆದಿತ್ಯಮೇವ ತದಾಹೈತನ್ಮೇ ಗೋಪಾಯೇತಿ ॥೨೭-8॥

[ಕುಸೀದಂ ತ್ವಂ ನ ಏನಮೋಷೇದ್ಯದಿ ಪುರ ಆದಿತ್ಯಮೇವ ತದಾಹೈತನ್ಮೇ

ಗೋಪಾಯೇತಿ ॥]

---

ಆದಿತ್ಯಮ್ । ಏವ । ತತ್ । ಆಹ । ಏತತ್ । ಮೇ । ಗೋಪಾಯ । ಇತಿ ॥೨೭॥

---

| | |
|---|---|
| ತತ್ ಏತತ್ ಮೇ ಗೋಪಾಯ ಇತಿ ಆದಿತ್ಯಮ್ ಏವ ಆಹ | ಈ ಸೂರ್ಯದೇವನನ್ನು ಉದ್ದೇಶಿಸಿಯೇ ಆ ಮಂತ್ರಭಾಗವು 'ಈ ಕರ್ಮದ ಫಲವನ್ನು ರಕ್ಷಿಸಿ, ನಮಗೆ ನೀಡು' ಎಂದು ಹೇಳುತ್ತದೆ. |

---

## ವಿನಿಯೋಗಸಂಗ್ರಹ

1ಆಯುಸ್ತ್ವವಭೃಥಪ್ರೇಪ್ಸೋರ್ಹೋಮ ಆಹವನೀಯಕೇ ।
2ಯತ್ಕು ವೇದಿಂ ದಹೇತ್ತತ್ರ 3ವಿಶ್ವ ಸಕ್ತ್ವಾಹುತಿರ್ಭವೇತ್ ।
4-6ಅಯಂ ತ್ರಿಭಿರುಪಸ್ಥಾನಂ ಷಣ್ಮಂತ್ರಾ ಅಷ್ಟಮೇ ಸ್ಥಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-6

## ॥ ನವಮೋಽನುವಾಕಃ ॥

ಏತಂ ಯುವಾನಂ ಪರಿ ವೋ ದದಾಮಿ ತೇನ

ಕ್ರೀಡಂತೀಶ್ಚರತ ಪ್ರಿಯೇಣ ।

---

ಏತಮ್ । ಯುವಾನಮ್ । ಪರೀತಿ । ವಃ । ದದಾಮಿ । ತೇನ । ಕ್ರೀಡಂತೀಃ । ಚರತ । ಪ್ರಿಯೇಣ ॥

---

ಈ ಒಂಭತ್ತನೆಯ ಅನುವಾಕದಲ್ಲಿ ಜೀರ್ಣವೃಷಭಾಲಂಭನವು ಹೇಳಲ್ಪಟ್ಟಿದೆ. ಅದರಲ್ಲಿ ಮೊದಲು ತರುಣವೃಷಭದ ಕಿವಿಯಲ್ಲಿ 'ಪಿಶಂಗರೂಪಃ' 'ತನ್ನಸ್ತುರೀಪಮ್' ಎಂಬ ಮಂತ್ರಗಳನ್ನು ಹೇಳಬೇಕು.

---

| ಮಂತ್ರ | ವಿನಿಯೋಗ |
|---|---|
| ಏತಂ ಯುವಾನಂ...ಮದೇಮ ॥ | ತರುಣವೃಷಭವನ್ನು ಹಸುಗಳ ಮಂದೆಯಲ್ಲಿ ಬಿಡಲು |

---

✦[ಎಲೈ! ಗೋವುಗಳೇ!]**ಏತಮ್ ಯುವಾನಮ್**=ಈ ಪ್ರಾಯದ ಹೋರಿಯನ್ನು; **ಪರಿ ವಃ ದದಾಮಿ**=ನಿಮಗೆ ಕೊಡುತ್ತೇನೆ; **ತೇನ ಪ್ರಿಯೇಣ ಕ್ರೀಡಂತೀಃ**=ನಿಮಗೆ ಪ್ರಿಯನಾದ ಈ ತರುಣವೃಷಭದೊಡನೆ ವಿಹರಿಸುತ್ತಾ; **ಚರತ**=ಹುಲ್ಲುಗಾವಲುಗಳಲ್ಲಿ ಸಂಚರಿಸಿರಿ.

---

ಎಲೈ! ಗೋವುಗಳೇ! ಮುದಿಯಾದ ವೃಷಭದ ಸ್ಥಾನದಲ್ಲಿ ತರುಣನಾದ ವೃಷಭವನ್ನು ನಿಮಗೆ ಕೊಡುತ್ತಿದ್ದೇನೆ. ಪ್ರಿಯವಾದ ಅದರೊಡನೆ ನೀವು ಕ್ರೀಡಿಸುತ್ತಾ,

ಮಾ ನಶ್ಶಾಪ್ತ ಜನುಷಾ ಸುಭಾಗಾ ರಾಯಸ್ಪೋಷೇಣ ಸಮಿಷಾ ಮದೇಮ ॥ ನಮೋ ಮಹಿಮ್ನ ಉತ ಚಕ್ಷುಷೇ ತೇ ಮರುತಾಂ ಪಿತಸ್ತದಹಂ ಗೃಣಾಮಿ ।

---

ಮಾ । ನಃ । ಶಾಪ್ತ । ಜನುಷಾ । ಸುಭಾಗಾ ಇತಿ ಸು–ಭಾಗಾಃ । ರಾಯಃ । ಪೋಷೇಣ । ಸಮಿತಿ । ಇಷಾ । ಮದೇಮ ॥ ನಮಃ । ಮಹಿಮ್ನೇ । ಉತ । ಚಕ್ಷುಷೇ । ತೇ । ಮರುತಾಮ್ । ಪಿತಃ । ತತ್ । ಅಹಮ್ । ಗೃಣಾಮಿ ॥

---

| ಮಂತ್ರ | ವಿನಿಯೋಗ |
|---|---|
| ನಮೋ ಮಹಿಮ್ನ...ಹವ್ಯಮ್ ॥ | ಜೀರ್ಣವೃಷಭದ ಉಪಾಕರಣಕ್ಕಾಗಿ |

---

**ಜನುಷಾ**=ಹುಟ್ಟಿನಿಂದಲೇ; **ಸುಭಾಗಾಃ**=ಭಾಗ್ಯವತಿಯರಾದ ಗೋವುಗಳೇ! **ನಃ ಮಾ ಶಾಪ್ತ**=ನಮ್ಮನ್ನು ಶಪಿಸದಿರಿ; **ರಾಯಃ ಪೋಷೇಣ**=[ನಾವು ನಿಮ್ಮ ಅನುಗ್ರಹದಿಂದ] ಧನಸಂಪತ್ತಿನಿಂದಲೂ; **ಇಷಾ**=ಅನ್ನದ ಸಮೃದ್ಧಿಯಿಂದಲೂ ತುಂಬಿದವರಾಗಿ; **ಸಮ್ ಮದೇಮ**=ಚೆನ್ನಾಗಿ ಸಂತೋಷಪಡೋಣ. ✦**ಮರುತಾಮ್ ಪಿತಃ**=ದೇವತೆಗಳ ಜನಕನಾದ ಪ್ರಜಾಪತಿದೇವನೇ! **ತೇ**=ನಿನ್ನ; **ಮಹಿಮ್ನೇ**=ಸೃಷ್ಟ್ಯಾದಿಗಳನ್ನು ಮಾಡುವ ಮಹಿಮೆಗೂ; **ಉತ**=ಮತ್ತು; **ಚಕ್ಷುಷೇ**=ಎಲ್ಲವನ್ನೂ ತಿಳಿಯುವ ಕಣ್ಣಿಗೂ; **ನಮಃ**=ನಮಸ್ಕರಿಸುತ್ತೇನೆ; **ಅಹಮ್**=ನಾನು; **ತತ್**=ಆ ನನ್ನ ಆಶಯವನ್ನು; **ಗೃಣಾಮಿ**=ನಿನಗೆ ಹೇಳುತ್ತೇನೆ;

---

ಮೈದಾನದಲ್ಲಿ ಸಂಚರಿಸಿರಿ. ಜೀರ್ಣವಾದ ವೃಷಭವನ್ನು ಬೇರ್ಪಡಿಸಿದ್ದಕ್ಕಾಗಿ ನಮ್ಮನ್ನು ಶಪಿಸದಿರಿ. ನಮ್ಮನ್ನು ಅನುಗ್ರಹಿಸಿರಿ. ನಿಮ್ಮ ಅನುಗ್ರಹದಿಂದ ನಾವು ಧನಸಮೃದ್ಧಿಯನ್ನೂ, ಅನ್ನಸಮೃದ್ಧಿಯನ್ನೂ ಹೊಂದುವಂತಾಗಲಿ.

ಅನುಮನ್ಯಸ್ವ ಸುಯಜಾ ಯಜಾಮ ಜುಷ್ಟಂ ದೇವಾನಾಮಿದಮಸ್ತು ಹವ್ಯಮ್ ॥ ದೇವಾನಾಮೇಷ ಉಪನಾಹ ಆಸೀದಪಾಂ ಗರ್ಭ ಓಷಧೀಷು ನ್ಯಕ್ತಃ ।

---

ಅನ್ವಿತಿ । ಮನ್ಯಸ್ವ । ಸುಯಜೇತಿ ಸು-ಯಜಾ । ಯಜಾಮ । ಜುಷ್ಟಮ್ । ದೇವಾನಾಮ್ । ಇದಮ್ । ಅಸ್ತು । ಹವ್ಯಮ್ ॥ ದೇವಾನಾಮ್ । ಏಷಃ । ಉಪನಾಹ ಇತ್ಯುಪ-ನಾಹಃ । ಆಸೀತ್ । ಅಪಾಮ್ । ಗರ್ಭಃ । ಓಷಧೀಷು । ನ್ಯಕ್ತ ಇತಿ ನಿ-ಅಕ್ತಃ ॥

---

| ಮಂತ್ರ | ವಿನಿಯೋಗ |
|---|---|
| ದೇವಾನಾಂ...ತದೇಷಾಮ್ ॥ | ವಪಾಹೋಮವನ್ನು ಅನುಷ್ಠಿಸಲು |

---

**ಅನುಮನ್ಯಸ್ವ**=ಅದಕ್ಕೆ ನೀನು ಅನುಮತಿಯನ್ನು ಕೊಡು. **ಸುಯಜಾ ಯಜಾಮ**= ಒಳ್ಳೆಯ ಯಾಗಸಾಧನವಾದ ಈ ವೃಷಭದಿಂದ ಯಾಗವನ್ನು ಮಾಡುವೆವು; **ಇದಮ್**=ಈ ವೃಷಭವು; **ದೇವಾನಾಮ್**=ದೇವತೆಗಳಿಗೆ; **ಜುಷ್ಟಮ್**=ಪ್ರಿಯ ವಾದ; **ಹವ್ಯಮ್ ಅಸ್ತು**=ಹವಿಸ್ಸಾಗಲಿ. ✦**ಏಷಃ**=ಈ ವೃಷಭವು; **ದೇವಾನಾಮ್ ಉಪನಾಹಃ**=ಪಶುಗಳಿಗೆ ಹಗ್ಗವು ಬಂಧನಕ್ಕೆ ಕಾರಣವಾಗುವಂತೆ ಪ್ರೀತಿಯಿಂದ ಬಂಧಕಾರಣವಾಗಿ/ಉಪಕಾರಕವಾಗಿ; **ಆಸೀತ್**=ಆಯಿತು; **ಅಪಾಮ್ ಗರ್ಭಃ**= [ಆಹುತಿರೂಪವಾಗಿ ಸೂರ್ಯನನ್ನು ಸೇರಿ] ನೀರುಗಳ ಗರ್ಭರೂಪವಾಯಿತು; **ಓಷಧೀಷು ನ್ಯಕ್ತಃ**=ಬಳಿಕ ಮಳೆಯ ರೂಪದಿಂದ ಸಸ್ಯಗಳಲ್ಲಿ ಬಿದ್ದಿತು;

---

ಇದು ವೃಷಭೋಪಾಕರಣಮಂತ್ರ. ಹವ್ಯವನ್ನು ದೇವತೆಗಳಿಗಾಗಿ ಉದ್ದೇಶಿಸುವುದು ಉಪಾಕರಣ. ಸ್ತೋತ್ರ-ಶಸ್ತ್ರಾದಿಗಳ ಆರಂಭಕ್ಕೆ ಅನುಮತಿಯನ್ನು ನೀಡುವುದೂ ಉಪಾಕರಣವೇ. ಈ ಜೀರ್ಣವೃಷಭಕ್ಕೆ ಪ್ರಜಾಪತಿ ಅಥವಾ ಇಂದ್ರ ಅಥವಾ ತ್ವಷ್ಟೃ -ಇವರು ದೇವತೆಗಳು. ಈ ಮಂತ್ರವನ್ನು ಪ್ರಜಾಪತಿದೇವತಾಕವಾಗಿ ವಿವರಿಸಲಾಗಿದೆ.

ಸೋಮಸ್ಯ ದ್ರಪ್ಸಮವೃಣೀತ ಪೂಷಾ [(೨೮)] ಬೃಹನ್ನದ್ರಿರಭವತ್ತದೇಷಾಮ್ ॥ ಪಿತಾ ವಥ್ಸಾನಾಂ ಪತಿರಘ್ನಿಯಾನಾಮಥೋ ಪಿತಾ ಮಹತಾಂ ಗರ್ಗರಾಣಾಮ್ ।

---

ಸೋಮಸ್ಯ । ದ್ರಪ್ಸಮ್ । ಅವೃಣೀತ । ಪೂಷಾ ।(೨೮)। ಬೃಹನ್ನ್ । ಅದ್ರಿಃ । ಅಭವತ್ । ತತ್ । ಏಷಾಮ್ ॥ ಪಿತಾ । ವಥ್ಸಾನಾಮ್ । ಪತಿಃ । ಅಘ್ನಿಯಾನಾಮ್ । ಅಥೋ ಇತಿ । ಪಿತಾ । ಮಹತಾಮ್ । ಗರ್ಗರಾಣಾಮ್ ॥

---

| ಮಂತ್ರ | ವಿನಿಯೋಗ |
| --- | --- |
| ಪಿತಾ ವಥ್ಸಾನಾಂ...ರೇತಃ ॥ | ಹೃದಯಾದ್ಯಂಗಹೋಮವನ್ನು ಮಾಡಲು |

---

**ಪೂಷಾ**=[ಇದು ಹೇಗಾಯಿತೆಂದರೆ] ಪೋಷಕನಾದ ಸೂರ್ಯದೇವನು; **ಸೋಮಸ್ಯ ದ್ರಪ್ಸಮ್**=ಜಲರೂಪನಾದ ಸೋಮನ ಜಲಬಿಂದುಗಳನ್ನು; **ಅವೃಣೀತ**=ಸಂಗ್ರಹಿಸಿದನು; **ತತ್ ಏಷಾಮ್**=ಆ ಹನಿಗಳು ಒಗ್ಗೂಡಿ [ಹನಿಗಳ]; **ಬೃಹನ್ ಅದ್ರಿಃ ಅಭವತ್**=ದೊಡ್ಡದಾದ ಬೆಟ್ಟದಂತಹ ಮೇಘವಾಗಿ ಪರಿಣಮಿಸಿತು;✦[ಈ ವೃಷಭವು] **ವತ್ಸಾನಾಮ್ ಪಿತಾ**=ಹಲವು ಕರುಗಳಿಗೆ ತಂದೆಯಾಗಿದೆ. **ಅಘ್ನಿಯಾನಾಮ್ ಪತಿಃ**=ಧೇನುಗಳಿಗೆ ಪತಿಯಾಗಿದೆ; **ಅಥೋ**=ಮತ್ತು; **ಮಹತಾಮ್ ಗರ್ಗರಾಣಾಮ್**=ಪುಷ್ಟವಾಗಿ ಬೆಳೆದು ಗುಟುರು ಹಾಕುವ ಹೋರಿಗಳಿಗೆ; **ಪಿತಾ**=ತಂದೆಯಾಗಿದೆ.

---

'ಚಕ್ಷುಷೇ' ಎಂಬ ಪದವನ್ನು ಗಮನಿಸಿ ಸೂರ್ಯನಿಗೆ ಅನ್ವಯಿಸುತ್ತದೆಯೆಂದು ಭಟ್ಟಭಾಸ್ಕರರ ಮತ.

ಈ ಹವ್ಯರೂಪವಾದ ಪಶುವು ದೇವತೆಗಳಿಗೆ ಇಷ್ಟವಾಗಲಿ. ಪ್ರಜಾಪತಿದೇವನೇ! ನೀನು ಇದಕ್ಕೆ ಅನುಮತಿಸು.

ವಥ್ಸೋ ಜರಾಯು ಪ್ರತಿಧುಕ್ಪೀಯೂಷ ಆಮಿಕ್ಷಾ ಮಸ್ತು ಘೃತಮಸ್ಯ ರೇತಃ ॥ ತ್ವಾಂ ಗಾವೋಽವೃಣತ ರಾಜ್ಯಾಯ ತ್ವಾಗ್ಂ ಹವಂತ ಮರುತಸ್ಸ್ವರ್ಕಾಃ ।

---

ವಥ್ಸಃ । ಜರಾಯು । ಪ್ರತಿಧುಗಿತಿ ಪ್ರತಿ-ಧುಕ್ । ಪೀಯೂಷಃ । ಆಮಿಕ್ಷಾ । ಮಸ್ತು । ಘೃತಮ್ । ಅಸ್ಯ । ರೇತಃ ॥ ತ್ವಾಮ್ । ಗಾವಃ । ಅವೃಣತ । ರಾಜ್ಯಾಯ । ತ್ವಾಮ್ । ಹವಂತ । ಮರುತಃ । ಸ್ವರ್ಕಾ ಇತಿ ಸು-ಅರ್ಕಾಃ ।

---

| ಮಂತ್ರ | ವಿನಿಯೋಗ |
|---|---|
| ತ್ವಾಂ ಗಾವೋ...ವಸೂನಿ ॥ | ಸ್ವಿಷ್ಟಕೃತ್ ಹೋಮದ ಅನುಷ್ಠಾನಕ್ಕಾಗಿ/ಮಂದೆಯಲ್ಲಿ ಬಿಟ್ಟ ವೃಷಭದ ಅನುಮಂತ್ರಣ -ಭ.ಭಾ.ಭಾ |

---

**ವತ್ಸಃ**=ಗರ್ಭದಲ್ಲಿರುವ ಕರುವೂ; **ಜರಾಯು**=ಗರ್ಭದ ಆವರಣವೂ; **ಪ್ರತಿಧುಕ್**=ಪಾತ್ರದಲ್ಲಿ ಕರೆದಿಟ್ಟಿರುವ ಹಾಲೂ; **ಪೀಯೂಷಃ**=ಮೊಲೆಗಳಲ್ಲಿರುವ ಅಮೃತಸಮವಾದ ಹಾಲೂ; **ಆಮಿಕ್ಷಾ**=[ಬಿಸಿಹಾಲಿನಲ್ಲಿ ಮೊಸರನ್ನು ಹಾಕುವುದರಿಂದ ಉಂಟಾದ] ಒಡೆದ ಹಾಲಿನ ಗಟ್ಟಿಯಾದ ಭಾಗವೂ; **ಮಸ್ತು**=ಬೆಣ್ಣೆಯೂ; **ಘೃತಮ್**=ತುಪ್ಪವೂ; **ಅಸ್ಯ**=ಈ ವೃಷಭದ; **ರೇತಃ**=ದೇಹಸಾರವೇ ಆಗಿದೆ. ✦[ಎಲೈ! ವೃಷಭವೇ!]**ತ್ವಾಮ್**=ನಿನ್ನನ್ನು; **ಗಾವಃ**=ಗೋವುಗಳು; **ರಾಜ್ಯಾಯ**=ತಮ್ಮ ರಾಜ್ಯದ ಆಧಿಪತ್ಯಕ್ಕಾಗಿ; **ಅವೃಣತ**=ಆರಿಸಿಕೊಂಡವು; **ಸ್ವರ್ಕಾಃ**=ಚೆನ್ನಾಗಿ ಪೂಜಿಸಬೇಕಾದ **ಮರುತಃ**=ದೇವತೆಗಳು; **ತ್ವಾಮ್**=ನಿನ್ನನ್ನು; **ಹವಂತ**=ಹವಿಃಸ್ವರೂಪವಾಗಿ ಆಹ್ವಾನಿಸಿದವು;

---

ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥ ಎಂಬ ವಾಕ್ಯಗಳ ತಾತ್ಪರ್ಯವು ಈ ಮಂತ್ರದಲ್ಲಿ ಅಡಕವಾಗಿದೆ.

ವರ್ಷ್ಮನ್ಕ್ಷತ್ರಸ್ಯ ಕಕುಭಿ ಶಿಶ್ರಿಯಾಣಸ್ತತೋ ನ

ಉಗ್ರೋ ವಿಭಜಾ ವಸೂನಿ ॥ ವ್ಯೃದ್ಧೇನ ವಾ ಏಷ

ಪಶುನಾ ಯಜತೇ ಯಸ್ಯೈತಾನಿ ನ ಕ್ರಿಯಂತ ಏಷ

---

ವರ್ಷ್ಮನ್ । ಕ್ಷತ್ರಸ್ಯ । ಕಕುಭಿ । ಶಿಶ್ರಿಯಾಣಃ । ತತಃ । ನಃ । ಉಗ್ರಃ । ವೀತಿ । ಭಜ । ವಸೂನಿ ॥ ವ್ಯೃದ್ಧೇನೇತಿ ವಿ-ಋದ್ಧೇನ । ವೈ । ಏಷಃ । ಪಶುನಾ । ಯಜತೇ । ಯಸ್ಯ । ಏತಾನಿ । ನ । ಕ್ರಿಯಂತೇ । ಏಷಃ ।

---

[ನೀನು] **ಕ್ಷತ್ರಸ್ಯ ಕಕುಭಿ**=ಕ್ಷತ್ರಿಯಜಾತಿಗೆ [ಪ್ರಧಾನವಾದ] ಹಿಣಿಲಿನಂತಿರುವ; **ವರ್ಷ್ಮನ್ ಶಿಶ್ರಿಯಾಣಃ**=ಶರೀರದಲ್ಲಿ ಆಶ್ರಿತನಾಗಿರು; **ತತಃ**=ಬಳಿಕ; **ಉಗ್ರಃ**=ನಮ್ಮ ಶತ್ರುಗಳ ಮೇಲೆ ಕೋಪದಿಂದ ಉಗ್ರನಾಗಿ; **ನಃ**=ನಮಗೆ; **ವಸೂನಿ ವಿಭಜ**=ಹಗೆಗಳ ಧನಗಳನ್ನು ವಿಭಾಜಿಸಿ ಕೊಡು.

---

### ಈ ಅನುವಾಕದ ಮಂತ್ರವಿಧಿಗಳು; ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
| --- | --- |
| ಯಸ್ಯ ಏತಾನಿ ನ ಕ್ರಿಯಂತೇ | ಯಾವ ಯಜಮಾನನ ಯಾಗದಲ್ಲಿ ಇಲ್ಲಿ ಹೇಳಿರುವ ಕಾರ್ಯಗಳು ಮಾಡಲ್ಪಡುವುದಿಲ್ಲವೋ |
| ಏಷಃ ವ್ಯೃದ್ಧೇನ ಪಶುನಾ ಯಜತೇ ವೈ | ಈ ಯಜಮಾನನು ಅಂಗವೈಕಲ್ಯವುಳ್ಳ ಪಶು ಯಜ್ಞವನ್ನು ಮಾಡಿದವನಾಗುತ್ತಾನೆ. |

---

ಈ ವೃಷಭಯಾಗದಿಂದ ಸುಪ್ರೀತರಾದ ದೇವತೆಗಳು ನಮಗೆ ಕಾಲಕಾಲಕ್ಕೆ ಮಳೆಯನ್ನು ಸುರಿಸಿ ಸಸ್ಯಗಳ ಅಭಿವೃದ್ಧಿಗೆ ಕಾರಣರಾಗಲಿ. ಆದರ ಮೂಲಕ ಸುಭಿಕ್ಷವು ಉಂಟಾಗಲಿ. ಅಂತಹ ವೃಷ್ಟಿಯು ನಮಗೆ ಈ ಯಾಗದಿಂದ ಲಭಿಸಲಿ.

ಹ ತ್ವೈಲ ಸಮ್ಮೃದ್ಧೇನ ಯಜತೇ ಯಸ್ಯೈಲತಾನಿ ಕ್ರಿಯಂತೇ

॥೨೯-೧॥

[ಪ್ರೂಷಾ ಕ್ರಿಯಂತ ಏಷೋಽಷ್ಟೌ ಚ ॥]

---

ಹ । ತು । ವೈ । ಸಮ್ಮೃದ್ಧೇನೇತಿ ಸಂ-ಋದ್ಧೇನ । ಯಜತೇ । ಯಸ್ಯ । ಏತಾನಿ ।

ಕ್ರಿಯಂತೇ ॥೨೯॥

---

| | |
|---|---|
| ಯಸ್ಯ ಏತಾನಿ | ಯಾವ ಯಜಮಾನನ ಯಾಗದಲ್ಲಿ ಈ |
| ಕ್ರಿಯಂತೇ | ಕಾರ್ಯಗಳು ಮಾಡಲ್ಪಡುತ್ತವೆಯೋ |
| ಏಷಃ ಹ ತು ವೈ | ಈ ಯಜಮಾನನು ಸರ್ವಾಂಗಸಮ್ಮೃದ್ಧವಾದ |
| ಸಮ್ಮೃದ್ಧೇನ ಯಜತೇ | ಯಾಗವನ್ನು ಮಾಡಿದವನಾಗುತ್ತಾನೆ. |

---

ವೃಷಭದ ಹೃದಯಾದಿ ಅಂಗಹೋಮದ ಅನುಷ್ಠಾನದ ಈ ಮಂತ್ರವು ವೃಷಭವನ್ನು ಪ್ರಶಂಸಿಸುತ್ತಿದೆ. ಈ ವೃಷಭದ ಅಂಗಹೋಮಗಳಿಂದ ತೃಪ್ತರಾದ ದೇವತೆಗಳು ನಮ್ಮ ಇಷ್ಟಾರ್ಥಗಳನ್ನು ಅನುಗ್ರಹಿಸಲಿ. ಈ ವೃಷಭವು ದೇವತೆಗಳಿಗೆ ಪ್ರಿಯವಾಗಲಿ.

ಈ ಮಂತ್ರಕ್ಕೆ ಸ್ವಿಷ್ಟಕೃದ್ಧೋಮದಲ್ಲಿ ವಿನಿಯೋಗವನ್ನು ಆಪಸ್ತಂಬರು ಹೇಳಿರುತ್ತಾರೆ. ಎಲೈ! ವೃಷಭವೇ! ನೀನು ಗೋವುಗಳ ಅಧಿಪತಿಯಾಗಿರುವೆ. ದೇವತೆಗಳ ಹವಿಃ ಸ್ವರೂಪನಾಗಿ ಇರುವೆ. ನೀನು ಬಲಶಾಲಿಯಾಗಿ ಕ್ಷತ್ರಿಯಜಾತಿಗೆ ಪ್ರಧಾನವಾದ ಹಿಣಿಲಿನಂತೆ ಇರುವೆ. ಸ್ವಿಷ್ಟಕೃದಗ್ನಿಯಾದ ನಿನ್ನ ಅನುಗ್ರಹದಿಂದ ಶತ್ರುಗಳ ಧನವೆಲ್ಲವೂ ನಮಗೆ ದೊರಕಲಿ.

ಯಾವ ಯಜಮಾನನ ಯಾಗದಲ್ಲಿ ಈ ಅನುವಾಕದಲ್ಲಿ ಹೇಳಿದ ವಿಧಿಗಳು ಅನುಷ್ಠಿಸಲ್ಪಡುತ್ತವೆಯೋ, ಆ ಅನುಷ್ಠಾನಗಳಿಂದ ಆತನ ಯಾಗವು ಸರ್ವಾಂಗಸಮ್ಮೃದ್ಧವಾಗುತ್ತದೆ. ಈ ಬ್ರಾಹ್ಮಣಭಾಗದಿಂದ ವಿಹಿತವಾದ ಎಲ್ಲ ಮಂತ್ರಗಳಿಂದಲೂ ಅನುಷ್ಠಿಸಲ್ಪಡಬೇಕಾಗಿರುವ ಕಾರ್ಯಗಳ ಪ್ರಶಂಸೆಯು ಇದೆ.

# ವಿನಿಯೋಗಸಂಗ್ರಹ

ಗೋಯೂಥೇ ಜೀರ್ಣವೃಷಭಸ್ಯಾಲಂಭಂ ಯದಿ ವಾಂಛತಿ ।
ತದಾ ಯುವಾನಂ ವೃಷಭಂ [1]ತತ್ರೈತಮಿತಿ ಯೋಜಯೇತ್ ॥
[2]ನಮೋ ಜೀರ್ಣಮುಪಾಕುರ್ಯಾದ್ದೇವಾನಾಂ[3] ತದ್ವಪಾಹುತಿಃ ।
[4]ಪಿತಾಽಂಗಹೋಮಸ್ತ್ವಾಂ ಗಾವಃ[5] ಸ್ವಿಷ್ಟಕೃತ್ ಪಂಚ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-5

## ಅನುವಾಕದ ವಿಶೇಷವಿಷಯಗಳು

ಈ ಅನುವಾಕದಲ್ಲಿ ಹೇಳಿರುವ ಕರ್ಮಗಳು ಸ್ಮಾರ್ತಕರ್ಮಗಳಲ್ಲಿ ಹೇಳಿರುವ ವೃಷೋತ್ಸರ್ಗದಂತೆ ಅಥವಾ ಮಧುಪರ್ಕದಂತೆ ತೋರುತ್ತದೆ.

ಹಿಂದೆ ರಾಜರು ಗೋವುಗಳನ್ನು ಹುಲ್ಲುಗಾವಲುಗಳಲ್ಲಿ ಸಾಕುತ್ತಿದ್ದರು. ಅಲ್ಲಿಗೆ ಬೇಕಾದ ಹೋರಿಗಳನ್ನು ಬಿಡುವ ವಿಧಿಯಂತೆಯೂ ಇಲ್ಲಿಯ ವಿಧಿಯು ತೋರುತ್ತದೆ.

ಸ್ಮಾರ್ತಕರ್ಮವಾದ ಮಧುಪರ್ಕದಲ್ಲಿ ವಪಾಹೋಮಾದಿಗಳು ಇವೆ. ಉತ್ಸರ್ಜನ ಪಕ್ಷವೂ ಇದೆ. ಹೀಗಾಗಿ ಇದು ವೈಕಲ್ಪಿಕವೆಂದು ಭಾವಿಸಿ ವಿನಿಯೋಗಸಂಗ್ರಹಕಾರರು 'ಯದಿ ವಾಂಛತಿ' ಎಂದು ಹೇಳಿರಬಹುದು.

## ॥ ದಶಮೋಽನುವಾಕಃ ॥

ಸೂರ್ಯೋ᳚ ದೇ॒ವೋ ದಿ॑ವಿ॒ಷದ್ಭ್ಯೋ᳚ ಧಾ॒ತಾ ಕ್ಷ॒ತ್ರಾಯ॑

ವಾ॒ಯುಃ ಪ್ರ॒ಜಾಭ್ಯಃ॑ ।

---

ಸೂರ್ಯ॑ಃ । ದೇ॒ವಃ । ದಿ॒ವಿ॒ಷದ್ಭ್ಯ॒ ಇತಿ॑ ದಿ॒ವಿ॒ಷತ್-ಭ್ಯಃ॒ । ಧಾ॒ತಾ । ಕ್ಷ॒ತ್ರಾಯ॑ ।

ವಾ॒ಯುಃ । ಪ್ರ॒ಜಾಭ್ಯ॒ ಇತಿ॑ ಪ್ರ-ಜಾಭ್ಯಃ॑ ।

---

ಈ ಹತ್ತನೆಯ ಅನುವಾಕದಲ್ಲಿ ಯಾಗಕ್ಕಾಗಿ ಉಪಾಕರಣವನ್ನು ಮಾಡಿದ ಬಳಿಕ ಹೆಣ್ಣು ಮೇಕೆಯನ್ನು ಗರ್ಭಿಣಿ ಎಂದು ತಿಳಿದರೆ ಮಾಡಬೇಕಾದ ಕಾರ್ಯಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಸೂರ್ಯೋ᳚...ಜುಹೋತು ॥ | ಮೇಕೆಯನ್ನು ಗರ್ಭಿಣಿಯೆಂದು ತಿಳಿದಾಗ ಹೋಮವನ್ನು ಮಾಡಲು* |

---

✦[ಎಲ್ಬೆ! ವಶೆಯೇ!]**ಸೂರ್ಯಃ ದೇವಃ**=ಸೂರ್ಯದೇವನು; **ದಿವಿಷದ್ಭ್ಯಃ**=ಸ್ವರ್ಗದಲ್ಲಿರುವ ದೇವತೆಗಳಿಗೆ; **ತ್ವಾ**=ನಿನ್ನನ್ನು; **ಜುಹೋತು**=ಹೋಮಮಾಡಲಿ; **ಧಾತಾ**=ಎಲ್ಲವನ್ನೂ ಸೃಷ್ಟಿಸುವ ಬ್ರಹ್ಮದೇವನು; **ಕ್ಷತ್ರಾಯ**=ರಾಜಾಭಿವೃದ್ಧಿಗಾಗಿ; **ತ್ವಾ ಜುಹೋತು**=ನಿನ್ನನ್ನು ಹೋಮ ಮಾಡಲಿ; **ವಾಯುಃ ಪ್ರಜಾಭ್ಯಃ**=ವಾಯುದೇವನು ಪ್ರಜೆಗಳ ಅಭಿವೃದ್ಧಿಗಾಗಿ; **ತ್ವಾ ಜುಹೋತು**=ನಿನ್ನನ್ನು ಹೋಮಮಾಡಲಿ;

---

*ಧಾತಾ ರಾತಿಃ...ದಧಾತು । ಎಂಬ ಇನ್ನೊಂದು ಮಂತ್ರದಿಂದಲೂ ಹವನವನ್ನು ಮಾಡಬೇಕು. ಇದು ಪ್ರಥಮಕಾಂಡದಲ್ಲಿ ಇದೆ.

ಬೃಹಸ್ಪತಿಸ್ತ್ವಾ ಪ್ರಜಾಪತಯೇ ಜ್ಯೋತಿಷ್ಮತೀಂ ಜುಹೋತು ॥

ಯಸ್ಯಾಸ್ತೇ ಹರಿತೋ ಗರ್ಭೋಽಥೋ ಯೋನಿರ್

ಹಿರಣ್ಯಯೀ । ಅಂಗಾನ್ಯಹ್ರುತಾ ಯಸ್ಯೈ ತಾಂ ದೇವೈ

ಸ್ಸಮಜೀಗಮಮ್ ॥

---

ಬೃಹಸ್ಪತಿಃ । ತ್ವಾ । ಪ್ರಜಾಪತಯ ಇತಿ ಪ್ರಜಾ-ಪತಯೇ । ಜ್ಯೋತಿಷ್ಮತೀಮ್ ।

ಜುಹೋತು ॥ ಯಸ್ಯಾಃ । ತೇ । ಹರಿತಃ । ಗರ್ಭಃ । ಅಥೋ ಇತಿ । ಯೋನಿಃ ।

ಹಿರಣ್ಯಯೀ ॥ ಅಂಗಾನಿ । ಅಹ್ರುತಾ । ಯಸ್ಯೈ । ತಾಮ್ । ದೇವೈಃ । ಸಮಿತಿ ।

ಅಜೀಗಮಮ್ ॥

---

| ಮಂತ್ರ | ವಿನಿಯೋಗ |
|---|---|
| **ಯಸ್ಯಾಸ್ತೇ...ಸಮಜೀಗಮಮ್ ॥** | ಅಧ್ವರ್ಯುವು ಆ ವಶೆಯನ್ನು ಅಭಿಮಂತ್ರಿಸಲು |

---

**ಬೃಹಸ್ಪತಿಃ**=ಬೃಹಸ್ಪತಿಯು; **ಪ್ರಜಾಪತಯೇ**=ಪ್ರಜಾಪತಿಬ್ರಹ್ಮನಿಗಾಗಿ; **ಜ್ಯೋತಿಷ್ಮತೀಮ್**=ಕಾಂತಿಮತಿಯಾದ; ತ್ವಾ ಜುಹೋತು=ನಿನ್ನನ್ನು ಹೋಮ ಮಾಡಲಿ; ✦[ಎಲೈ! ಗರ್ಭಿಣಿಯಾದ ಮೇಕೆಯೇ!] **ಯಸ್ಯಾಃ ತೇ ಗರ್ಭಃ ಹರಿತಃ**=ಯಾವ ನಿನ್ನ [ಗರ್ಭವು] ನಿಸ್ಸಾರವಾಗಿ ಹಸಿರು ಬಣ್ಣವಾಗಿದೆಯೋ; **ಅಥೋ**=ಮತ್ತು; **ತೇ ಯೋನಿಃ**=ನಿನ್ನ ಯೋನಿಯು; **ಹಿರಣ್ಯಯೀ**=ರಸಹೀನವಾಗಿ ಹೊಂಬಣ್ಣವಾಗಿದೆಯೋ; **ಯಸ್ಯೈ ತೇ ಅಂಗಾನಿ**=ಯಾವ ನಿನ್ನ ಅಂಗಗಳು; **ಅಹ್ರುತಾ**=ನಿಶ್ಚೇಷ್ಟವಾಗಿ ನೆಲದ ಮೇಲೆ ಬಿದ್ದಿವೆಯೋ; **ತಾಮ್**=ಅಂತಹ (ನಿನ್ನನ್ನು); **ದೇವೈಃ**=ದೇವತೆಗಳೊಡನೆ; **ಸಮಜೀಗಮಮ್**=ಸೇರಿಸುವೆನು.

---

ಯಾಗಕ್ಕಾಗಿ ಉಪಾಕೃತವಾಗಿರುವ ಮೇಕೆಯು ಗರ್ಭಿಣಿ ಎಂದು ತಿಳಿದ ಮೇಲೆ ಈ

ಆ ವರ್ತನ ವರ್ತಯ ನಿ ನಿವರ್ತನ ವರ್ತಯೇಂದ್ರ ನರ್ದಬುದ ।

ಭೂಮ್ಯಾಶ್ಚತಸ್ರಃ ಪ್ರದಿಶಸ್ತಾಭಿರಾವರ್ತಯಾ ಪುನಃ ॥

---

ಏತಿ । ವರ್ತನ । ವರ್ತಯ । ನೀತಿ । ನಿವರ್ತನೇತಿ ನಿ-ವರ್ತನ । ವರ್ತಯ ।

ಇಂದ್ರ । ನರ್ದಬುದ ॥ ಭೂಮ್ಯಾಃ । ಚತಸ್ರಃ । ಪ್ರದಿಶ ಇತಿ ಪ್ರ-ದಿಶಃ । ತಾಭಿಃ ।

ಏತಿ । ವರ್ತಯ । ಪುನಃ ॥

---

| ಮಂತ್ರ | ವಿನಿಯೋಗ |
|---|---|
| ಆವರ್ತನ...ಪುನಃ ॥ | ಪ್ರದಕ್ಷಿಣಾಕಾರವಾಗಿ ಗರ್ಭವನ್ನು ಸುತ್ತಿಸಲು |

---

✦ವರ್ತನ ಇಂದ್ರ=ಗರ್ಭವನ್ನು ಸುತ್ತುವಂತೆ ಮಾಡಲು ಸಮರ್ಥನಾದ ಇಂದ್ರನೇ! ಆ ವರ್ತಯ=ಈ ಗರ್ಭವನ್ನು ಸುತ್ತಾಡಿಸು; ನಿವರ್ತನ=ಗರ್ಭವನ್ನು ಹೊರತರಲು ಸಮರ್ಥನಾದ ಇಂದ್ರನೇ! ನಿ ವರ್ತಯ=ಗರ್ಭವು ಹೊರಬರುವಂತೆ ಮಾಡು; ನರ್ದಬುದ=ಗುಡುಗುಗಳಿಂದ ಶಬ್ದವನ್ನು ಮಾಡುವ, ಮತ್ತು ನೊರೆಗಳಿಂದ ಕೂಡಿ ರುವ ಮಳೆಯನ್ನು ತರುವ ಇಂದ್ರನೇ! ಭೂಮ್ಯಾಃ=ಭೂಮಿಯ; ಚತಸ್ರಃ ಪ್ರದಿಶಃ= ಯಾವ ಮುಖ್ಯವಾದ ನಾಲ್ಕು ದಿಕ್ಕುಗಳು ಇವೆಯೋ; ತಾಭಿಃ=ಆ ದಿಕ್ಕುಗಳಲ್ಲಿ; ಪುನಃ ಆ ವರ್ತಯ=ಮತ್ತೆ ಮತ್ತೆ ಈ ಗರ್ಭವನ್ನು ಸುತ್ತಾಡಿಸು.

---

ಹೋಮವನ್ನು ಮಾಡಬೇಕು.

ಸೂರ್ಯದೇವನೂ, ಬ್ರಹ್ಮದೇವನೂ, ವಾಯುದೇವನೂ, ಬೃಹಸ್ಪತ್ಯಾಚಾರ್ಯನೂ ನಿನ್ನನ್ನು ಹವನ ಮಾಡಿದಂತಾಗಲಿ.

ಪಶುಸಂಜ್ಞಪನವಾದ ಮೇಲೆ ಆ ಮೇಕೆಯನ್ನು ಅಭಿಮಂತ್ರಿಸುವ ಮಂತ್ರವಿದಾಗಿದೆ. ಎಲೈ! ಮೇಕೆಯೇ! ನಿನ್ನ ಗರ್ಭವು ನಿಸ್ಸಾರವಾಗಿ ಹಸಿರು ಬಣ್ಣದಿಂದ ಕೂಡಿದೆ. ನಿನ್ನ ಯೋನಿಯು ರಸಹೀನವಾಗಿದೆ. ನಿನ್ನ ಅಂಗಗಳು ನಿಶ್ಚೇಷ್ಟವಾಗಿವೆ. ನಿನ್ನನ್ನು ದೇವತೆಗ ಳೊಡನೆ ಸೇರಿಸುವೆನು.

ವಿ ತೇ ಭಿನದ್ಮಿ ತಕರೀಂ ವಿ ಯೋನಿಂ ವಿ ಗವೀನ್ಯೌ ।
ವಿ[(೩೦)] ಮಾತರಂ ಚ ಪುತ್ರಂ ಚ ವಿ ಗರ್ಭಂ ಚ
ಜರಾಯು ಚ ॥ ಬಹಿಸ್ತೇ ಅಸ್ತು ಬಾಲಿತಿ ॥

---

ವೀತಿ । ತೇ । ಭಿನದ್ಮಿ । ತಕರೀಮ್ । ವೀತಿ । ಯೋನಿಮ್ । ವೀತಿ । ಗವೀನ್ಯೌ ॥
ವೀತಿ ।(೩೦)। ಮಾತರಮ್ । ಚ । ಪುತ್ರಮ್ । ಚ । ವೀತಿ । ಗರ್ಭಮ್ । ಚ ।
ಜರಾಯು । ಚ ॥ ಬಹಿಃ । ತೇ । ಅಸ್ತು । ಬಾಲ್ । ಇತಿ ॥

---

| ಮಂತ್ರ | ವಿನಿಯೋಗ |
|---|---|
| ವಿ ತೇ...ಜರಾಯು ಚ ॥ | *ತಕರ್ಯಾದಿಗಳನ್ನು ಭೇದಿಸಲು |
| ಬಹಿಸ್ತೇ...ಬಾಲಿತಿ ॥ | *ತೊಡೆಗಳ ನಡುವೆ ಗರ್ಭವನ್ನು ಹೊರ ಹಾಕಲು |

---

✦[ಎಲೈ! ಗರ್ಭಿಣಿಯಾದ ಮೇಕೆಯೇ!] **ತೇ**=ನಿನ್ನ; **ತಕರೀಮ್**=ಗರ್ಭದ ಹೊರ ವೇಷ್ಟನವನ್ನು; **ವಿ ಭಿನದ್ಮಿ**=ವಿಶೇಷವಾಗಿ ಭೇದಿಸುತ್ತೇನೆ. **ಯೋನಿಮ್ ವಿ ಭಿನದ್ಮಿ**=[ಗರ್ಭವನ್ನು ಹೊರತರುವುದಕ್ಕಾಗಿ] ಯೋನಿಯನ್ನೂ ಕತ್ತರಿಸುತ್ತೇನೆ; **ಗವೀನ್ಯೌ**=[ಗರ್ಭವನ್ನು ಹೊರಬರದಂತೆ ಮಾಡುವ] ಎರಡು ಕಡೆಗಳಲ್ಲಿಯೂ ಇರುವ ಮಾಂಸ ಖಂಡವನ್ನು; **ವಿ ಭಿನದ್ಮಿ**=ವಿಶೇಷವಾಗಿ ಕೊಯ್ಯುತ್ತೇನೆ; **ಮಾತರಮ್ ಚ ಪುತ್ರಮ್ ಚ**=ತಾಯಿಯನ್ನೂ ಮಗನನ್ನೂ; **ವಿ ಭಿನದ್ಮಿ**=ಬೇರ್ಪಡಿಸುತ್ತೇನೆ; **ಗರ್ಭಮ್ ಚ ಜರಾಯು ಚ**=ಕೋಶಾವೃತವಾದ ಗರ್ಭವನ್ನೂ, ಗರ್ಭಕೋಶವನ್ನೂ; **ವಿ ಭಿನದ್ಮಿ**=ಕತ್ತರಿಸಿ ಬೇರ್ಪಡಿಸುತ್ತೇನೆ.✦[ಎಲೈ! ವಶೆಯೇ!]**ತೇ ಬಾಲ್**=ನಿನ್ನ ಕರುವು;**ಇತಿ**=ಈ ಪ್ರಕಾರದಿಂದ; **ಬಹಿಃ ಅಸ್ತು**=ಹೊರಬರಲಿ.

---

*ಈ ಮಂತ್ರಗಳ ವಿನಿಯೋಗವು ಜಾರುತ್ತಿರುವ ಗರ್ಭದ ಅಭಿಮಂತ್ರಣಕ್ಕೆ ಎಂದು ಮಿಶ್ರರ ಮತ.

# ಉರುದ್ರಪ್ಸೋ ವಿಶ್ವರೂಪ ಇಂದುಃ ಪವಮಾನೋ ಧೀರ ಆನಂಜ ಗರ್ಭಮ್ ।

ಉರುದ್ರಪ್ಸ ಇತ್ಯುರು-ದ್ರಪ್ಸಃ । ವಿಶ್ವರೂಪ ಇತಿ ವಿಶ್ವ-ರೂಪಃ । ಇಂದುಃ । ಪವಮಾನಃ । ಧೀರಃ । ಆನಂಜ । ಗರ್ಭಮ್ ॥

| ಮಂತ್ರ | ವಿನಿಯೋಗ |
| --- | --- |
| ಉರುದ್ರಪ್ಸೋ...ಗರ್ಭಮ್ ॥ | ಶಾಮಿತ್ರಾಗ್ನಿಯಲ್ಲಿ ಶ್ರಪಣ ಮಾಡುವಾಗ ಪಶು ರಸವನ್ನು ಸಂಗ್ರಹಿಸಲು ಪಾತ್ರವನ್ನು ಇಡಲು/ ಹೋಮವನ್ನು ಅನುಷ್ಠಿಸಲು. ಭ.ಭಾ.ಭಾ |

✦ಉರುದ್ರಪ್ಸಃ=ಹಲವು ಪಶುರಸಬಿಂದುಗಳುಳ್ಳ; ವಿಶ್ವರೂಪಃ=ನಾನಾರೂಪವಾಗಿರುವ; ಇಂದುಃ=ಚಂದ್ರನಂತೆ ನಿರ್ಮಲವಾಗಿರುವ; ಪವಮಾನಃ=ದೇವತೆಗಳಿಗೆ ಪ್ರಿಯವಾಗಿ ಶುದ್ಧವಾಗಿ ಇರುವ; ಧೀರಃ=ಗಟ್ಟಿಯಾಗಿರುವ [ಅವಯವಸಮೂಹವು] ಗರ್ಭಮ್=ಕರುವಿನ ಆಕಾರವನ್ನು; ಆನಂಜ=ವ್ಯಕ್ತಪಡಿಸಿತು.

ಗರ್ಭವನ್ನು ಪುನಃ ಪುನಃ ಸುತ್ತಾಡಿಸಿ ಹೊರತರಬೇಕು. ಆದಕ್ಕಾಗಿ ಇಂದ್ರನ ಪ್ರಾರ್ಥನೆಯಿದು. ಹೇ! ಇಂದ್ರನೇ! ನೀನು ಗರ್ಭವನ್ನು ಸುತ್ತಿಸಲು ಮತ್ತು ಹೊರತರಲು ಸಮರ್ಥನು. ವೃಷ್ಟಿಯ ಒಡೆಯನು. ನೀನು ಈ ಗರ್ಭವನ್ನು ಸುತ್ತಿಸಿ ಹೊರಬರುವಂತೆ ಮಾಡು.

ಎಲೈ ಗರ್ಭಿಣಿಯಾದ ವಶೆಯೇ! ನಿನ್ನ ತಕರೀ ಮುಂತಾದವುಗಳನ್ನು ಭೇದಿಸುತ್ತೇನೆ.

ನಿನ್ನ ಆತ್ಮವು ಸರ್ವವ್ಯಾಪಕವಾಗಲಿ ಎಂದು ಮಿಶ್ರರು ತಾತ್ಪರ್ಯವನ್ನು ವಿವರಿಸಿದ್ದಾರೆ.

ಪಶುರಸಬಿಂದುಗಳಿಂದ ಕೂಡಿರುವ ಗಟ್ಟಿಯಾದ ಅವಯವಸಮೂಹವು ಕರುವಿನ ಆಕಾರವನ್ನು ವ್ಯಕ್ತಪಡಿಸಿತು. ಪಶುರಸಬಿಂದುವಿನ ಸಮೂಹವು ಕರುವನ್ನು ಮೃದು ಮಾಡಿತು.

ಏಕಪದೀ ದ್ವಿಪದೀ ತ್ರಿಪದೀ ಚತುಷ್ಪದೀ ಪಂಚಪದೀ ಷಟ್ಪದೀ

ಸಪ್ತಪದ್ಯಷ್ಟಾಪದೀ ಭುವನಾನು ಪ್ರಥತಾಗ್‌ಂ ಸ್ವಾಹಾ ॥

---

ಏಕಪದೀತ್ಯೇಕ-ಪದೀ । ದ್ವಿಪದೀತಿ ದ್ವಿ-ಪದೀ । ತ್ರಿಪದೀತಿ ತ್ರಿ-ಪದೀ । ಚತುಷ್ಪದೀತಿ ಚತುಃ-ಪದೀ । ಪಂಚಪದೀತಿ ಪಂಚ-ಪದೀ । ಷಟ್ಪದೀತಿ ಷಟ್-ಪದೀ । ಸಪ್ತಪದೀತಿ ಸಪ್ತ-ಪದೀ । ಅಷ್ಟಾಪದೀತ್ಯಷ್ಟಾ-ಪದೀ । ಭುವನಾ । ಅನ್ವಿತಿ । ಪ್ರಥತಾಮ್ । ಸ್ವಾಹಾ ।

---

| ಮಂತ್ರ | ವಿನಿಯೋಗ |
| --- | --- |
| ಏಕಪದೀ...ಸ್ವಾಹಾ ॥ | ಸ್ವಿಷ್ಟಕೃದ್ಧೋಮಕ್ಕೆ ಮೊದಲಿನ ಹೋಮವನ್ನು ಅನುಷ್ಠಿಸಲು |

---

✦ಏಕಪದೀ=ಒಂದು ಪಾದವುಳ್ಳ* ದ್ವಿಪದೀ=ಎರಡು ಕಾಲುಳ್ಳ; ತ್ರಿಪದೀ=ಮೂರು ಪಾದಗಳುಳ್ಳ; ಚತುಷ್ಪದೀ=ನಾಲ್ಕು ಕಾಲುಗಳುಳ್ಳ; ಪಂಚಪದೀ=ಐದು ಪಾದಗಳುಳ್ಳ; ಷಟ್ಪದೀ=ಆರು ಕಾಲುಗಳುಳ್ಳ; ಸಪ್ತಪದೀ=ಏಳು ಕಾಲುಗಳುಳ್ಳ; ಅಷ್ಟಾಪದೀ= ಎಂಟು ಪಾದಗಳುಳ್ಳ; [ವಶೆಯು ಇದಾಗಿದೆ]. [ಇದು] ಭುವನಾ=ಸ್ವರ್ಗಾದಿಲೋಕಗಳಲ್ಲಿ; ಅನು ಪ್ರಥತಾಮ್=ಕ್ರಮವಾಗಿ ಪ್ರಸಿದ್ಧವಾಗಲಿ; [ಇದು] [ರಸರೂಪವಾದ ಹವಿಸ್ಸು] ಸ್ವಾಹಾ=ಚೆನ್ನಾಗಿ ಹುತವಾಗಲಿ.

---

ಈ ವಶೆಯು ಏಕಪದಿಯಿಂದ ಅಷ್ಟಾಪದೀ ಎಂಬುದಾಗಿ ಹೇಳಲ್ಪಡುತ್ತದೆ. ಇದು ಸ್ವರ್ಗಾದಿಗಳಲ್ಲಿ ಪ್ರಸಿದ್ಧವಾಗಲಿ.

---

*ತಾಯಿಹಸುವಿನ ಗರ್ಭದಲ್ಲಿ ಕರುವು ಇದೆ. ಎರಡರ ಪಾದಗಳೂ ಸೇರಿ ಎಂಟು ಪಾದಗಳಿವೆ. ಎಂಟುಪಾದಗಳುಳ್ಳವುಗಳನ್ನು ಏಕಪದೀ ಎಂದೂ ಹೇಳಬಹುದು. 'ಶತೇ ಪಂಚಾಶನ್ನ್ಯಾಯ'ದಂತೆ ಎಂದು ತಿಳಿಯಬಹುದು. ನೂರು ರೂಗಳುಳ್ಳವನನ್ನು ಐವತ್ತು ರೂಗಳುಳ್ಳವನು ಎಂದೂ ಹೇಳಬಹುದಷ್ಟೆ. ಹೀಗೆ ದ್ವಿಪದೀ ಮುಂತಾದ ಹೆಸರುಗಳು. ಅಷ್ಟಾಪದೀ ಎಂಬುದು ಮುಖ್ಯವಾದ ವ್ಯಪದೇಶ.

ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್ ।

ಪಿಪೃತಾಂ ನೋ ಭರೀಮಭಿಃ ॥೩೧–10॥

[ಗವೀನ್ತ್ಯೈ ವಿ ಚತುಶ್ಚತ್ವಾರಿಗ್‌ಂಶಚ್ಚ ॥]

---

ಮಹೀ । ದ್ಯೌಃ । ಪೃಥಿವೀ । ಚ । ನಃ । ಇಮಮ್ । ಯಜ್ಞಮ್ । ಮಿಮಿಕ್ಷತಾಮ್ ॥

ಪಿಪೃತಾಮ್ । ನಃ । ಭರೀಮಭಿರಿತಿ ಭರೀಮ-ಭಿಃ ॥೩೧॥

---

| ಮಂತ್ರ | ವಿನಿಯೋಗ |
|---|---|
| ಮಹೀ ದ್ಯೌಃ...ಭರೀಮಭಿಃ ॥ | ಗರ್ಭವನ್ನು ಭಸ್ಮದಿಂದ ಆಚ್ಛಾದಿಸಲು |

✦ಮಹೀ=ಮಹತ್ತಾಗಿರುವ; ದ್ಯೌಃ=ಅಂತರಿಕ್ಷವೂ; ಪೃಥಿವೀ ಚ=[ಮಹತ್ತಾದ] ಭೂಮಿಯೂ; ನಃ=ನಮ್ಮ; ಇಮಮ್ ಯಜ್ಞಮ್=ಈ ಯಜ್ಞವನ್ನು; ಮಿಮಿಕ್ಷತಾಮ್=ರಸಭರಿತವನ್ನಾಗಿ ಮಾಡಲಿ; ನಃ=ನಮ್ಮನ್ನು; ಭರೀಮಭಿಃ= ಪೋಷಣ-ಧಾರಣ ಪ್ರಕಾರಗಳಿಂದ; ಪಿಪೃತಾಮ್=ರಕ್ಷಿಸಲಿ.

---

ಭೂಮಿ-ಅಂತರಿಕ್ಷಗಳು ನಮ್ಮ ಈ ಯಜ್ಞವನ್ನು ರಸಭರಿತವನ್ನಾಗಿಸಲಿ. ನಮ್ಮನ್ನು ಪೋಷಿಸಲಿ. ರಕ್ಷಿಸಲಿ.

---

## ವಿನಿಯೋಗಸಂಗ್ರಹ

ಉಪಾಕೃತವಶಾಯಾಂ ಚೇದ್ಗರ್ಭೋ ಮಂತ್ರಾಸ್ತದಾ ಅಮೀ ।
1ಸೂರ್ಯೋ ಜುಹೋತಿ 2ಯಸ್ಯಾಸ್ತೇ ಜಪಿತ್ವಾ 3ವರ್ತನೇತ್ಯತಃ ॥
ಗರ್ಭಂ ಪರ್ಯಾವರ್ತ್ಯ ವಿ ತೇ4 ಮಿತ್ಯೋಲ್ಬಂ 5ಬಹಿರಿತ್ಯತಃ ।
ನಿಸ್ಸಾರ್ಯೋರು6 ಧರೇತ್ ಪಾತ್ರಂ ಏಕೇತಿ7 ರಸಹೋಮಕಃ ॥
8ಮಹೀತ್ಯಾಚ್ಛಾದಯೇದ್ಗರ್ಭಮಷ್ಟೌ ಮಂತ್ರಾಃ ಪ್ರಕೀರ್ತಿತಾಃ ॥

**ಅನುವಾಕದಲ್ಲಿರುವ ಮಂತ್ರಸಂಖ್ಯೆ-8**

---

## ॥ ಏಕಾದಶೋಽನುವಾಕಃ ॥

ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ ।
ಉಕ್ಥಂ ಮದಶ್ಚ ಶಸ್ಯತೇ ॥

---

ಇದಮ್ । ವಾಮ್ । ಆಸ್ಯೇ । ಹವಿಃ । ಪ್ರಿಯಮ್ । ಇಂದ್ರಾಬೃಹಸ್ಪತೀ ಇತೀಂದ್ರಾ-ಬೃಹಸ್ಪತೀ । ಉಕ್ಥಮ್ । ಮದಃ । ಚ । ಶಸ್ಯತೇ ॥

---

ಈ ಹನ್ನೊಂದನೆಯ ಅನುವಾಕದಲ್ಲಿ ಕಾಮ್ಯೇಷ್ಟಿಯ ಯಾಜ್ಯಾ-ಪುರೋನುವಾಕ್ಯಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಇದಂ ವಾಮಾ...ಶಸ್ಯತೇ ॥ | ಶತ್ರುವನ್ನು ಗೆಲ್ಲಬಯಸುವ ರಾಜನ್ಯನಿಗೆ ವಿಹಿತವಾದ ಐಂದ್ರಾಬಾರ್ಹಸ್ಪತ್ಯೇಷ್ಟಿಯಲ್ಲಿನ ಪುರೋನುವಾಕ್ಯೆ. |

---

✦ಇಂದ್ರಾಬೃಹಸ್ಪತೀ=ಎಲೈ! ಇಂದ್ರ-ಬೃಹಸ್ಪತಿ ದೇವತೆಗಳೇ! ಇದಮ್=ಈ; ಪ್ರಿಯಮ್ ಹವಿಃ=[ನಿಮಗೆ] ಪ್ರಿಯವಾದ [ಚರುರೂಪವಾದ] ಹವಿಸ್ಸನ್ನು; ಯಥಾ=[ಸೋಮಯಾಗದಲ್ಲಿ] ಹೇಗೆ; ಉಕ್ಥಮ್=ದೇವತೆಗಳಿಗೆ ಪ್ರಿಯವಾದ ಶಸ್ತ್ರವೂ; ಮದಃ ಚ ಶಸ್ಯತೇ=ಸಂತೋಷಕರವಾದ ಪ್ರತಿಗರವೂ ಹೇಳಲ್ಪಡುತ್ತದೆಯೋ; ತಥಾ=ಹಾಗೆ; ವಾಮ್ ಆಸ್ಯೇ=ನಿಮ್ಮ ಬಾಯಿಯಲ್ಲಿ; ಜುಹೋಮಿ= ಸಮರ್ಪಿಸುತ್ತೇನೆ.

---

ಇಂದ್ರಾಬೃಹಸ್ಪತಿಗಳೇ! ಸೋಮಯಾಗದಲ್ಲಿ ಉಕ್ಥ-ಶಸ್ತ್ರವನ್ನೂ, ಪ್ರತಿಗರವನ್ನೂ ದೇವತೆಗಳ ಪ್ರೀತಿಗಾಗಿ ಪ್ರಯೋಗಿಸುವಂತೆ ಈ ಚರುಯಾಗದಲ್ಲಿ ನಿಮ್ಮ ಪ್ರೀತಿಗಾಗಿ

ಅಯಂ ವಾಂ ಪರಿಷಿಚ್ಯತೇ ಸೋಮ ಇಂದ್ರಾಬೃಹಸ್ಪತೀ । ಚಾರುರ್ಮದಾಯ ಪೀತಯೇ ॥ ಅಸ್ಮೇ ಇಂದ್ರಾಬೃಹಸ್ಪತೀ ರಯಿಂ ಧತ್ತಗ್ಂ ಶತಗ್ವಿನಮ್ । ಅಶ್ವಾವಂತಗ್ಂ ಸಹಸ್ರಿಣಮ್ ॥

---

ಅಯಮ್ । ವಾಮ್ । ಪರೀತಿ । ಸಿಚ್ಯತೇ । ಸೋಮಃ । ಇಂದ್ರಾಬೃಹಸ್ಪತೀ ಇತೀಂದ್ರಾ-ಬೃಹಸ್ಪತೀ ॥ ಚಾರುಃ । ಮದಾಯ । ಪೀತಯೇ ॥ ಅಸ್ಮೇ ಇತಿ । ಇಂದ್ರಾಬೃಹಸ್ಪತೀ ಇತೀಂದ್ರಾ-ಬೃಹಸ್ಪತೀ । ರಯಿಮ್ । ಧತ್ತಮ್ । ಶತಗ್ವಿನಮಿತಿ ಶತ-ಗ್ವಿನಮ್ ॥ ಅಶ್ವಾವಂತಮಿತ್ಯಶ್ವ-ವಂತಮ್ । ಸಹಸ್ರಿಣಮ್ ॥

---

| ಮಂತ್ರ | ವಿನಿಯೋಗ |
|---|---|
| ಅಯಂ...ಪೀತಯೇ ॥ | ಈ ಇಷ್ಟಿಯ ಯಾಜ್ಯಾನುವಾಕ್ಯೆ.<br>ವಿಕಲ್ಪಿತ ಪುರೋನುವಾಕ್ಯೆ – ಭ.ಭಾ.ಭಾ |
| ಅಸ್ಮೇ...ಸಹಸ್ರಿಣಮ್ ॥ | ವಿಕಲ್ಪಿತವಾದ ಪುರೋನುವಾಕ್ಯೆ. |

---

✦**ಇಂದ್ರಾಬೃಹಸ್ಪತೀ**=ಇಂದ್ರಾಬೃಹಸ್ಪತಿಗಳೇ! **ಸೋಮಃ**=ಸೋಮದಂತೆ ಪ್ರಿಯವಾದ; **ಚಾರುಃ**=ಮನೋಹರವಾದ; **ಅಯಮ್**=ಈ ಚರುವು; **ವಾಮ್**=ನಿಮಗಾಗಿ; **ಮದಾಯ**=ಸಂತೋಷಕ್ಕಾಗಿ; **ಪೀತಯೇ**=ಪಾನಕ್ಕಾಗಿ[ಸೋಮರಸವು ಸಮರ್ಪಿಸಲ್ಪಡುವಂತೆ] **ಪರಿಷಿಚ್ಯತೇ**=ಅಗ್ನಿಯಲ್ಲಿ ತ್ಯಾಗ ಮಾಡಲ್ಪಡುತ್ತದೆ. ✦**ಇಂದ್ರಾಬೃಹಸ್ಪತೀ**=ಎಲೈ! ಇಂದ್ರಾಬೃಹಸ್ಪತಿಗಳೇ! **ಅಸ್ಮೇ**=ನಮಗೆ; **ಶತಗ್ವಿನಮ್**=ನೂರಾರು ಸಂಖ್ಯೆಯ ಗೋವುಗಳುಳ್ಳ; **ಅಶ್ವಾವಂತಮ್**=ಹಲವು ಕುದುರೆಗಳಿಂದ ಕೂಡಿರುವ; **ಸಹಸ್ರಿಣಮ್**=ಸಾವಿರಾರು ಸಂಖ್ಯೆಯ ಮುತ್ತು, ರತ್ನ ಮೊದಲಾದವುಗಳಿಂದ ಕೂಡಿದ/ಗಜಾದಿಗಳುಳ್ಳ; **ರಯಿಮ್**=ಐಶ್ವರ್ಯಸಂಪತ್ತಿಯನ್ನು; **ಧತ್ತಮ್**=ಕೊಡಿರಿ.

**ಬೃಹಸ್ಪತಿರ್ನಃ ಪರಿಪಾತು ಪಶ್ಚಾದುತೋತ್ತರಸ್ಮಾ-ದಧರಾದಘಾಯೋಃ । ಇಂದ್ರಃ ಪುರಸ್ತಾದುತ ಮಧ್ಯತೋ ನಃ ಸಖಾ ಸಖಿಭ್ಯೋ ವರಿವಃ ಕೃಣೋತು ॥**

---

ಬೃಹಸ್ಪತಿಃ । ನಃ । ಪರೀತಿ । ಪಾತು । ಪಶ್ಚಾತ್ । ಉತ । ಉತ್ತರಸ್ಮಾದಿತ್ಯುತ್-ತರಸ್ಮಾತ್ । ಅಧರಾತ್ । ಅಘಾಯೋರಿತ್ಯಘ-ಯೋಃ ॥ ಇಂದ್ರಃ । ಪುರಸ್ತಾತ್ । ಉತ । ಮಧ್ಯತಃ । ನಃ । ಸಖಾ । ಸಖಿಭ್ಯ ಇತಿ ಸಖಿ-ಭ್ಯಃ । ವರಿವಃ । ಕೃಣೋತು ॥

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತಿಃ...ಕೃಣೋತು ॥ | ವೈಕಲ್ಪಿಕವಾದ ಇನ್ನೊಂದು ಪುರೋನುವಾಕ್ಯೆ/ಯಾಜ್ಯಾನುವಾಕ್ಯೆ.-ಭ.ಭಾ.ಭಾ |

---

✦ಬೃಹಸ್ಪತಿಃ=ಬೃಹಸ್ಪತಿದೇವನು; ನಃ=ನಮ್ಮನ್ನು; **ಪಶ್ಚಾತ್**=ಪಶ್ಚಿಮದಿಕ್ಕಿನಲ್ಲಿರುವ; **ಅಘಾಯೋಃ**=ನಮ್ಮ ನಾಶವನ್ನು ಅಪೇಕ್ಷಿಸುವ ಶತ್ರುವಿನಿಂದ; **ಪರಿಪಾತು**=ರಕ್ಷಿಸಲಿ. **ಉತ**=ಮತ್ತು; **ಉತ್ತರಸ್ಮಾತ್**=ಉತ್ತರದಿಕ್ಕಿನಲ್ಲಿರುವ; **ಅಧರಾತ್**=ಕೆಳಭಾಗದಲ್ಲಿರುವ/ದಕ್ಷಿಣದಿಕ್ಕಿನಲ್ಲಿರುವ; ಅಘಾಯೋಃ=ಶತ್ರುವಿನಿಂದ; ಪರಿಪಾತು=[ನಮ್ಮನ್ನು]ರಕ್ಷಿಸಲಿ. **ಇಂದ್ರಃ**=ಇಂದ್ರದೇವನು; **ಪುರಸ್ತಾತ್**=ಪೂರ್ವದಿಕ್ಕಿನಲ್ಲಿರುವ; **ಉತ**=ಮತ್ತು; **ಮಧ್ಯತಃ**=ಮಧ್ಯಭಾಗದಲ್ಲಿರುವ [ಶತ್ರುವಿನಿಂದ] **ನಃ**=ನಮ್ಮನ್ನು; ಪರಿಪಾತು=ಕಾಪಾಡಲಿ; **ಸಖಾ**=ಸ್ನೇಹಿತನಾದ ಇಂದ್ರನು; **ಸಖಿಭ್ಯಃ**=ಮಿತ್ರರಾದ ಯಜಮಾನರಿಗೆ; **ವರಿವಃ**=ಧನವನ್ನು; **ಕೃಣೋತು**=ಕೊಡಲಿ.

---

ಈ ಚರುರೂಪವಾದ ಹವಿಸ್ಸನ್ನು ಹೋಮ ಮಾಡುತ್ತೇನೆ.

ದೇವತೆಗಳು ಸೋಮಪಾನವನ್ನು ಅಪೇಕ್ಷಿಸುತ್ತಾರೆ. ಈ ಚರುರೂಪ ಹವಿಸ್ಸು ದೇವತೆಗಳಿಗೆ ಪ್ರಿಯವಾಗಿಯೂ ಮನೋಹರವಾಗಿಯೂ ಇದೆ. ಇದನ್ನು ಇಂದ್ರಾಬೃಹಸ್ಪತಿಗಳ

# ವಿ ತೇ ವಿಷ್ವಗ್ವಾತಜೂತಾಸೋ ಅಗ್ನೇ ಭಾಮಾಸ[ಭಾಮಾಸಃ (೩೨)ಶುಚೇ]ಶ್ಶುಚೇ ಶುಚಯಶ್ಚರಂತಿ । ತುವಿಮ್ರಕ್ಷಾಸೋ ದಿವ್ಯಾ ನವಗ್ವಾ ವನಾ ವನಂತಿ ಧೃಷತಾ ರುಜಂತಃ ॥

---

ವೀತಿ । ತೇ । ವಿಷ್ವಕ್ । ವಾತಜೂತಾಸ ಇತಿ ವಾತ-ಜೂತಾಸಃ । ಅಗ್ನೇ । ಭಾಮಾಸಃ । (೩೨)। ಶುಚೇ । ಶುಚಯಃ । ಚರಂತಿ ॥ ತುವಿಮ್ರಕ್ಷಾಸ ಇತಿ ತುವಿ-ಮ್ರಕ್ಷಾಸಃ । ದಿವ್ಯಾಃ । ನವಗ್ವಾಃ । ವನಾ । ವನಂತಿ । ಧೃಷತಾ । ರುಜಂತಃ ॥

---

| ಮಂತ್ರ | ವಿನಿಯೋಗ |
|---|---|
| ವಿ ತೇ...ರುಜಂತಃ ॥ | *ವಿವಿಚೀಷ್ಟಿಯ ಪುರೋನುವಾಕ್ಯೆ |

---

✦**ಶುಚೇ ಅಗ್ನೇ**=ಪ್ರಜ್ವಲಿಸುವ, ಪರಿಶುದ್ಧನಾದ ಅಗ್ನಿಯೇ! **ತೇ**=ನಿನ್ನ; **ಶುಚಯಃ**= ಜ್ವಾಲೆಗಳು; **ವಿಷ್ವಕ್**=ಎಲ್ಲ ಕಡೆಗಳಲ್ಲಿಯೂ; **ವಾತಜೂತಾಸಃ**=ವಾಯುವಿನಿಂದ ಪ್ರೇರಿತವಾಗಿ; **ವಿ ಚರಂತಿ**=ಸಂಚರಿಸುತ್ತವೆ. [ಅವು] **ಭಾಮಾಸಃ**=ಬೇರೆ ಅಗ್ನಿಗಳ ಸಂಪರ್ಕದಿಂದ ಕೋಪಗೊಳ್ಳುವ ಸ್ವಭಾವವುಳ್ಳವುಗಳು; **ತುವಿಮ್ರಕ್ಷಾಸಃ**=ಹಲವ ರನ್ನು/ಎಲ್ಲವನ್ನೂ ಶುದ್ಧಿಗೊಳಿಸತಕ್ಕವುಗಳು; **ದಿವ್ಯಾಃ**=ದೇವಲೋಕದಲ್ಲಿ ಇರತಕ್ಕ ವುಗಳು; **ನವಗ್ವಾಃ**=ಹೊಸಹೊಸತಾದ/ನಿತ್ಯನೂತನವಾದ ಗಮನವುಳ್ಳವುಗಳು; **ಧೃಷತಾ ರುಜಂತಃ**=ಬಲಾತ್ಕಾರದಿಂದ ಅಗ್ನಿಗಳ ಮಿಶ್ರಣದೋಷವನ್ನು ಹೋಗಲಾಡಿ ಸತಕ್ಕವುಗಳು. [ಇಂತಹ ನಿನ್ನ ಜ್ವಾಲೆಗಳು] **ವನಾ ವನಂತಿ**=ಅಪೇಕ್ಷಣೀಯವಾದ ನಾವು ಕೊಡುವ ಹವಿಸ್ಸನ್ನು ಸ್ವೀಕರಿಸಲಿ.

---

ತೃಪ್ತಿಗಾಗಿ ಅವರ ಮುಖದಲ್ಲಿ ಸಮರ್ಪಿಸುತ್ತೇನೆ. ಇದರಿಂದ ತೃಪ್ತರಾದ ಆ ದೇವತೆಗಳು ನಮ್ಮ ಕಾಮನೆಗಳನ್ನು ಈಡೇರಿಸಲಿ.

---

* ಯಜಮಾನನ ಅಗ್ನಿಗಳಿಗೆ ಲೌಕಿಕವಾದ ಅಗ್ನಿಗಳ ಅಥವಾ ಇತರ ಯಜಮಾನರ ಅಗ್ನಿಗಳ ಸಂಪರ್ಕವಾದರೆ ಪ್ರಾಯಶ್ಚಿತ್ತವಾಗಿ ವಿಹಿತವಾಗಿರುವ ಇಷ್ಟಿ.

ತ್ವಾಮಗ್ನೇ ಮಾನುಷೀರೀಡತೇ ವಿಶೋ ಹೋತ್ರಾವಿದಂ ವಿವಿಚಿಗ್ಂ ರತ್ನಧಾತಮಮ್ । ಗುಹಾ ಸಂತಗ್ಂ ಸುಭಗ ವಿಶ್ವದರ್ಶತಂ ತುವಿಷ್ಮಣಸಗ್ಂ ಸುಯಜಂ ಘೃತಶ್ರಿಯಮ್ ॥

---

ತ್ವಾಮ್ । ಅಗ್ನೇ । ಮಾನುಷೀಃ । ಈಡತೇ । ವಿಶಃ । ಹೋತ್ರಾವಿದಮಿತಿ ಹೋತ್ರಾ-ವಿದಮ್ । ವಿವಿಚಿಮಿತಿ ವಿ-ವಿಚಿಮ್ । ರತ್ನಧಾತಮಮಿತಿ ರತ್ನ-ಧಾತಮಮ್ ॥ ಗುಹಾ । ಸಂತಮ್ । ಸುಭಗೇತಿ ಸು-ಭಗ । ವಿಶ್ವದರ್ಶತಮಿತಿ ವಿಶ್ವ-ದರ್ಶತಮ್ । ತುವಿಷ್ಮಣಸಮ್ । ಸುಯಜಮಿತಿ ಸು-ಯಜಮ್ । ಘೃತಶ್ರಿಯಮಿತಿ ಘೃತ-ಶ್ರಿಯಮ್ ॥

---

| ಮಂತ್ರ | ವಿನಿಯೋಗ |
|---|---|
| ತ್ವಾಮಗ್ನೇ...ಘೃತಶ್ರಿಯಮ್ ॥ | ಮೇಲಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

✦**ಅಗ್ನೇ**=ಅಗ್ನಿದೇವನೇ! **ಸುಭಗ**=ಮಹಾಭಾಗ್ಯಶಾಲಿಯಾದವನೇ! **ಹೋತ್ರಾವಿದಮ್**=ಹೋಮವಿಶೇಷರಹಸ್ಯವನ್ನು ತಿಳಿದಿರುವ; **ವಿವಿಚಿಮ್**=ಮಿಶ್ರಣಗೊಂಡ ಅಗ್ನಿಗಳನ್ನು ಬೇರ್ಪಡಿಸಲು ಸಮರ್ಥನಾದ; **ರತ್ನಧಾತಮಮ್**=ರತ್ನಾದಿಧನಗಳನ್ನು ಕೊಡುವವನಾದ; **ಗುಹಾಸಂತಮ್**=ಗೋಪ್ಯವಾದ ಮಂತ್ರ/ಸ್ಥಾನ/ಗಳಲ್ಲಿ ಇರುವ; **ವಿಶ್ವದರ್ಶತಮ್**=ಎಲ್ಲವನ್ನೂ ಪ್ರಕಾಶಪಡಿಸುವ; **ತುವಿಷ್ಮಣಸಮ್**=ಉದಾರವಾದ ಮನಸ್ಸುಳ್ಳ; **ಸುಯಜಮ್**=ಚೆನ್ನಾಗಿ ಯಜ್ಞಗಳಿಂದ ಆರಾಧಿಸಲ್ಪಡುವ; **ಘೃತಶ್ರಿಯಮ್**=ತುಪ್ಪವನ್ನು ಸೇವಿಸುವ; **ತ್ವಾಮ್**=ನಿನ್ನನ್ನು; **ಮಾನುಷೀಃ ವಿಶಃ**=ಮಾನವರಾದ.ಪ್ರಜೆಗಳು; **ಈಡತೇ**=ಬಗೆಬಗೆಯಾಗಿ ಸ್ತುತಿ ಮಾಡುತ್ತಾರೆ.

---

ಹೇ! ಇಂದ್ರಾಬೃಹಸ್ಪತಿಗಳೇ! ಹೆಚ್ಚಿನ ಗೋವು, ಅಶ್ವ ಮತ್ತು ರತ್ನಗಳ ಸಂಪತ್ತನ್ನು ಕರುಣಿಸಿರಿ. ಬೃಹಸ್ಪತಿದೇವನು ನಮ್ಮನ್ನು ಎಲ್ಲ ದಿಕ್ಕುಗಳಿಂದಲೂ ಒದಗಿ ಬರುವ

**ಧಾತಾ ದದಾತು ನೋ ರಯಿಮೀಶಾನೋ ಜಗತಸ್ಪತಿಃ ।**

**ಸ ನಃ ಪೂರ್ಣೇನ ವಾವನತ್ ॥**

---

ಧಾತಾ । ದದಾತು । ನಃ । ರಯಿಮ್ । ಈಶಾನಃ । ಜಗತಃ । ಪತಿಃ ॥ ಸಃ । ನಃ ।
ಪೂರ್ಣೇನ । ವಾವನತ್ ॥

---

| ಮಂತ್ರ | ವಿನಿಯೋಗ |
|---|---|
| ಧಾತಾ ದದಾತು...ವಾವನತ್ ॥ | ದೇವಿಕಾಹವಿಸ್ಸುಗಳಲ್ಲಿ ಮೊದಲನೆಯದಾದ ಧಾತೃದೇವತಾಕವಾದ ದ್ವಾದಶಕಪಾಲಪುರೋಡಾಶಯಾಗದ ಪುರೋನುವಾಕ್ಯೆ. |

---

✦**ಧಾತಾ**=ಜಗತ್ತನ್ನು ಧರಿಸಿರುವ; **ಈಶಾನಃ**=ಪರಮೇಶ್ವರನಾದ; **ಜಗತಃ ಪತಿಃ**= ವಿಶ್ವದ ಪಾಲಕನಾದ; [ಧಾತೃದೇವನು] **ನಃ**=ನಮಗೆ; **ರಯಿಮ್**=ಧನವನ್ನು; **ದದಾತು**=ಕೊಡಲಿ; **ಸಃ**=ಆ ದೇವನು; **ನಃ**=ನಮ್ಮನ್ನು; **ಪೂರ್ಣೇನ**= ಸಂಪೂರ್ಣವಾದ ವಿವಿಧ ಧನಸಮೃದ್ಧಿಯಿಂದ; **ವಾವನತ್**=ಯುಕ್ತರನ್ನಾಗಿ ಮಾಡಲಿ.

---

ಶತ್ರುಗಳಿಂದ ರಕ್ಷಿಸಲಿ. ಇಂದ್ರನು ಸ್ನೇಹಿತನಂತೆ ಮಿತ್ರರಾದ ಯಜಮಾನರಿಗೆ ಪರಿಚಾರಕಸಂಪತ್ತಿನೊಡನೆ ಸಮಸ್ತಸಂಪತ್ತನ್ನೂ ನೀಡಿ ಅನುಗ್ರಹಿಸಲಿ.

ಈ ಮಂತ್ರದಲ್ಲಿ ಬೃಹಸ್ಪತಿಯನ್ನೂ, ಇಂದ್ರನನ್ನೂ ಬೇರೆ ಬೇರೆಯಾಗಿ ಪ್ರಾರ್ಥಿಸಿ, ರಕ್ಷಣೆಯನ್ನು ಕೋರಲಾಗಿದೆ.

ಅಗ್ನಿಯು ಸರ್ವಶುದ್ಧನು. ಸರ್ವಶೋಧಕನು. ಆತನು ಅಗ್ನಿಮಿಶ್ರಣದಿಂದ ಕೋಪಿಸದೆ ನಮ್ಮ ಹವಿಸ್ಸನ್ನು ಸ್ವೀಕರಿಸಿ ಮಿಶ್ರಣದೋಷವನ್ನು ಹೋಗಲಾಡಿಸಲಿ. ನಮ್ಮ ಅಭೀಷ್ಟವನ್ನೀಯಲಿ.

ಅಗ್ನಿದೇವನೇ! ನೀನು ಮಹಾಭಾಗ್ಯಶಾಲಿಯು. ಸರ್ವಜ್ಞನು. ಸರ್ವಶಕ್ತನು. ನಿನ್ನನ್ನು ಮಾನವರು ಬಗೆ ಬಗೆಯಾಗಿ ಸ್ತುತಿಸುತ್ತಾರೆ. ಸೇವಿಸುತ್ತಾರೆ. ಅಂತಹ ಮಹಾಪ್ರಭಾವಶಾಲಿಯಾದ ನಿನಗೆ ಹವ್ಯವನ್ನು ಅರ್ಪಿಸುತ್ತೇವೆ. ನೀನು ನಮ್ಮ ದೋಷಗಳನ್ನು ಹೋಗಲಾಡಿಸು. ನಮ್ಮ ಕಾಮನೆಗಳನ್ನು ಪೂರ್ಣಗೊಳಿಸು.

ಧಾತಾ ಪ್ರಜಾಯಾ ಉತ ರಾಯ ಈಶೇ ಧಾತೇದಂ ವಿಶ್ವಂ ಭುವನಂ ಜಜಾನ। ಧಾತಾ ಪುತ್ರಂ ಯಜಮಾನಾಯ ದಾತಾ [ದಾತಾ(೩೩)] ತಸ್ಮಾ ಉ ಹವ್ಯಂ ಘೃತವದ್ವಿಧೇಮ॥

---

ಧಾತಾ । ಪ್ರಜಾಯಾ ಇತಿ ಪ್ರ-ಜಾಯಾಃ । ಉತ । ರಾಯಃ । ಈಶೇ । ಧಾತಾ । ಇದಮ್ । ವಿಶ್ವಮ್ । ಭುವನಮ್ । ಜಜಾನ ॥ ಧಾತಾ । ಪುತ್ರಮ್ । ಯಜಮಾನಾಯ । ದಾತಾ ।(೩೩)। ತಸ್ಮೈ । ಉ । ಹವ್ಯಮ್ । ಘೃತವದಿತಿ ಘೃತ-ವತ್ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಧಾತಾ ಪ್ರಜಾಯಾಃ...ವಿಧೇಮ ॥ | ಇದೇ ಇಷ್ಟಿಯ ಯಾಜ್ಯಾನುವಾಕ್ಯೆ. |

---

✦ಧಾತಾ=ಧಾತೃದೇವನು; ಪ್ರಜಾಯಾಃ=ಪುತ್ರಾದಿ ಪ್ರಜೆಗಳಿಗೆ; ಉತ=ಮತ್ತು; ರಾಯಃ=ಧನಕ್ಕೆ; ಈಶೇ=ಸ್ವಾಮಿಯಾಗಿದ್ದಾನೆ. ಧಾತಾ=ಧಾತೃವು; ಇದಮ್=ಈ; ವಿಶ್ವಮ್ ಭುವನಮ್=ಎಲ್ಲ ಪ್ರಾಣಿಸಮೂಹವನ್ನೂ; ಜಜಾನ=ಉತ್ಪತ್ತಿಮಾಡಿರುತ್ತಾನೆ. ಧಾತಾ=ಧಾತೃದೇವನು; ಯಜಮಾನಾಯ=ಯಜಮಾನನಿಗೆ; ಪುತ್ರಮ್ ದಾತಾ=ಮಕ್ಕಳನ್ನು ಕೊಡುವವನು. ತಸ್ಮೈ ಉ=ಆ ಧಾತೃದೇವನಿಗೇ; ಘೃತವತ್ ಹವ್ಯಮ್=ಆಜ್ಯಯುಕ್ತವಾದ ಹವಿಸ್ಸನ್ನು/ಪುರೋಡಾಶವನ್ನು; ವಿಧೇಮ=ಸಮರ್ಪಿಸುತ್ತೇವೆ.

---

ಧಾತೃದೇವನು ಲೋಕಧಾರಕನು, ಒಡೆಯನು. ವಿಶ್ವಪಾಲಕನು. ಅವನು ನಮಗೆ ಧನವನ್ನೂ ಸಂಪೂರ್ಣೈಶ್ವರ್ಯವನ್ನೂ ಕೊಡಲಿ.

ಧಾತೃದೇವನು ಪ್ರಜೆಗಳಿಗೂ,ಧನಕ್ಕೂ ಸ್ವಾಮಿಯಾಗಿರುತ್ತಾನೆ. ವಿಶ್ವವನ್ನು ಉತ್ಪತ್ತಿ

ಧಾತಾ ದದಾತು ನೋ ರಯಿಂ ಪ್ರಾಚೀಂ

ಜೀವಾತುಮಕ್ಷಿತಾಮ್ । ವಯಂ ದೇವಸ್ಯ ಧೀಮಹಿ

ಸುಮತಿಗ್ಂ ಸತ್ಯರಾಧಸಃ ॥

---

ಧಾತಾ । ದದಾತು । ನಃ । ರಯಿಮ್ । ಪ್ರಾಚೀಮ್ । ಜೀವಾತುಮ್ । ಅಕ್ಷಿತಾಮ್ ॥

ವಯಮ್ । ದೇವಸ್ಯ । ಧೀಮಹಿ । ಸುಮತಿಮಿತಿ ಸು-ಮತಿಮ್ । ಸತ್ಯರಾಧಸ ಇತಿ

ಸತ್ಯ-ರಾಧಸಃ ॥

---

| ಮಂತ್ರ | ವಿನಿಯೋಗ |
|---|---|
| ಧಾತಾ ದದಾತು ನಃ...ರಾಧಸಃ ॥ | ಇದೇ ಯಾಗದ ವೈಕಲ್ಪಿಕ ಪುರೋನುವಾಕ್ಯೆ. |

---

✦**ಧಾತಾ**=ಧಾತೃದೇವನು; **ನಃ**=ನಮಗೆ; **ಪ್ರಾಚೀಮ್**=ಹೆಚ್ಚಾಗಿ ನಮಗೆ ಅನುಕೂಲ ವಾಗಿರುವ; **ಜೀವಾತುಮ್ ಅಕ್ಷಿತಾಮ್**=ಜೀವನಕ್ಕೆ ಸಾಕಾಗಿರುವ ಕ್ಷಯವಿಲ್ಲದ; **ರಯಿಮ್ ದದಾತು**=ಧನವನ್ನು ಕೊಡಲಿ. **ಸತ್ಯರಾಧಸಃ**=ಯಜ್ಞದಿಂದ ಆ ದೇವನನ್ನು ಆರಾಧಿಸುವ/ಸತ್ಯಧನವುಳ್ಳ ಧಾತೃದೇವನ; **ವಯಮ್**=ನಾವು; **ದೇವಸ್ಯ**=ಧಾತೃ ದೇವನ; **ಸುಮತಿಮ್**=ಒಳ್ಳೆಯ ಮಂಗಲಕರವಾದ ಬುದ್ಧಿಯನ್ನು; **ಧೀಮಹಿ**= ಪ್ರಾರ್ಥಿಸುತ್ತೇವೆ.

---

ಮಾಡಿದವನೂ ಅವನೇ. ಯಜಮಾನನಿಗೆ ಪುತ್ರಸಂಪತ್ತನ್ನು ನೀಡುವವನೂ ಅವನೇ. ಅವನಿಗೇ ಈ ಘೃತಪೂರ್ಣವಾದ ಪುರೋಡಾಶವನ್ನು ಸಮರ್ಪಿಸುತ್ತೇವೆ.

ಆ ಧಾತೃದೇವನು ನಮಗೆ ಅನುಕೂಲವಾಗಿರುವ, ಜೀವನಕ್ಕೆ ಸಾಕಾಗುವ, ಅಕ್ಷಯವಾದ ಧನವನ್ನು ಕೊಡಲಿ. ಯಾಗದಿಂದ ಧಾತೃದೇವನನ್ನು ಆರಾಧಿಸುವ ನಾವು ಆ ದೇವನು ಅನುಗ್ರಹಪೂರ್ಣವಾದ ಒಳ್ಳೆಯ ಬುದ್ಧಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇವೆ.

**ಧಾತಾ ದದಾತು ದಾಶುಷೇ ವಸೂನಿ ಪ್ರಜಾಕಾಮಾಯ ಮೀಢುಷೇ ದುರೋಣೇ । ತಸ್ಮೈ ದೇವಾ ಅಮೃತಾ ಸ್ಸಂವ್ಯಯಂತಾಂ ವಿಶ್ವೇ ದೇವಾಸೋ ಅದಿತಿಸ್ಸಜೋಷಾಃ ॥**

---

ಧಾತಾ । ದದಾತು । ದಾಶುಷೇ । ವಸೂನಿ । ಪ್ರಜಾಕಾಮಾಯೇತಿ ಪ್ರಜಾ–ಕಾಮಾಯ । ಮೀಢುಷೇ । ದುರೋಣ ಇತಿ ದುಃ–ಓನೇ ॥ ತಸ್ಮೈ । ದೇವಾಃ । ಅಮೃತಾಃ । ಸಮಿತಿ । ವ್ಯಯಂತಾಮ್ । ವಿಶ್ವೇ । ದೇವಾಸಃ । ಅದಿತಿಃ । ಸಜೋಷಾ ಇತಿ ಸ–ಜೋಷಾಃ ॥

---

| ಮಂತ್ರ | ವಿನಿಯೋಗ |
|---|---|
| ಧಾತಾ...ಸಜೋಷಾಃ ॥ | ಈ ಯಾಗದ ವೈಕಲ್ಪಿಕ ಯಾಜ್ಯಾನುವಾಕ್ಯೆ. |

---

✦**ಧಾತಾ**=ಧಾತೃದೇವನು; **ದಾಶುಷೇ**=[ಆಜ್ಯಸಿಕ್ತವಾದ ಹವಿಸ್ಸನ್ನು] ಸಮರ್ಪಿಸಿರುವ; **ಪ್ರಜಾಕಾಮಾಯ**=ಪುತ್ರರನ್ನು ಅಪೇಕ್ಷಿಸುವ; **ದುರೋಣೇ**=ಸ್ವಗೃಹದಲ್ಲಿ; **ಮೀಢುಷೇ**=[ದೇವತೆಗಳನ್ನು ಆಜ್ಯಾದಿ] ಹವಿಸ್ಸುಗಳಿಂದ ಆರಾಧಿಸುವ ಯಜಮಾನನಿಗೆ; **ವಸೂನಿ**=ಧನಾದಿಗಳನ್ನು; **ದದಾತು**=ಕೊಡಲಿ; **ತಸ್ಮೈ**=ಆ ಯಜಮಾನನಿಗೆ; **ಅಮೃತಾಃ**=ಮರಣರಹಿತರಾದ; **ದೇವಾಃ**=ದೇವತೆಗಳು; [(ವಸೂನಿ ದದತು)= ಧನಗಳನ್ನು ಕೊಡಲಿ] **ವಿಶ್ವೇ ದೇವಾಸಃ**=ವಿಶ್ವೇ ದೇವಗಣಗಳೂ; **ಸಜೋಷಾಃ**= ಸಮಾನಪ್ರೀತಿಯುಳ್ಳ; **ಅದಿತಿಃ**=ಅದಿತಿದೇವಿಯೂ; **ಸಂವ್ಯಯಂತಾಮ್**= [ಯಜಮಾನನ ಗೃಹದಲ್ಲಿ] ಒಟ್ಟಿಗೆ ಇರಲಿ/ಇದ್ದು ಅನುಗ್ರಹಿಸಲಿ.

---

**ದೇವತೆಗಳಿಗೆ ಹವ್ಯವನ್ನು ಸಮರ್ಪಿಸಿದ ಯಜಮಾನನಿಗೆ ಧಾತೃದೇವನೂ, ಮರಣರಹಿತರಾದ ದೇವತೆಗಳೂ, ವಿಶ್ವೇದೇವರೂ, ಸಮಾನಪ್ರೀತಿಯುಳ್ಳ ಅದಿತಿಯೂ, ಧನಾದಿಸಂಪತ್ತನ್ನೂ ಕೊಡಲಿ. ಯಜಮಾನನ ಮನೆಯಲ್ಲಿ ಇರಲಿ, ಅವನ ಕಾಮನೆಗಳನ್ನು ಅನುಗ್ರಹಿಸಲಿ.**

ಅನು ನೋಽದ್ಯಾನುಮತಿರ್ಯಜ್ಞಂ ದೇವೇಷು ಮನ್ಯತಾಮ್ ।

ಅಗ್ನಿಶ್ಚ ಹವ್ಯವಾಹನೋ ಭವತಾಂ ದಾಶುಷೇ ಮಯಃ ॥

---

ಅನ್ವಿತಿ । ನಃ । ಅದ್ಯ । ಅನುಮತಿರಿತ್ಯನು-ಮತಿಃ । ಯಜ್ಞಮ್ । ದೇವೇಷು ।

ಮನ್ಯತಾಮ್ ॥ ಅಗ್ನಿಃ । ಚ । ಹವ್ಯವಾಹನ ಇತಿ ಹವ್ಯ-ವಾಹನಃ । ಭವತಾಮ್ ।

ದಾಶುಷೇ । ಮಯಃ ॥

---

| ಮಂತ್ರ | ವಿನಿಯೋಗ |
|---|---|
| ಅನು ನೋ...ಮಯಃ ॥ | ದೇವಿಕಾಹವಿಸ್ಸುಗಳಲ್ಲಿ ಎರಡನೆಯದಾದ ಅನುಮತಿಚರುವಿನ ಪುರೋನುವಾಕ್ಯೆ. |

---

✦ಅನುಮತಿಃ*=ಅನುಮತಿದೇವಿಯು; ಅದ್ಯ=ಈಗ/ಈ ದಿನ; ನಃ=ನಮ್ಮ; ಯಜ್ಞಮ್=ಯಾಗವನ್ನು; ದೇವೇಷು=ದೇವತೆಗಳಲ್ಲಿ; ಅನು ಮನ್ಯತಾಮ್= ಪ್ರಶಂಸಿಸಲಿ/ದೇವತೆಗಳಿಗಾಗಿ ಅನುಮತಿಸಲಿ. ಹವ್ಯವಾಹನಃ=ದೇವತೆಗಳಿಗೆ ಹವ್ಯ ವನ್ನು ಒಯ್ಯುವ; ಅಗ್ನಿಃ ಚ=ಅಗ್ನಿದೇವನೂ,ಅನುಮತಿದೇವಿಯೂ; ದಾಶುಷೇ= [ದೇವತೆಗಳಿಗೆ ಹವಿಸ್ಸನ್ನು] ಕೊಡುವ ಯಜಮಾನನಿಗೆ; ಮಯಃ ಭವತಾಮ್= ಅಗ್ನಿಯು ಸುಖಕರನಾಗಲಿ/ಇಬ್ಬರೂ ಸುಖಕರರಾಗಲಿ.

---

ಅನುಮತಿದೇವಿಯು ನಮ್ಮ ಯಜ್ಞವನ್ನು ದೇವತೆಗಳಲ್ಲಿ ಪ್ರಶಂಸಿಸಲಿ. ಅಗ್ನಿಯೂ ಅನುಮತಿದೇವಿಯೂ ಹವಿಸ್ಸನ್ನು ನೀಡುವ ಯಜಮಾನನಿಗೆ ಸುಖಕರರಾಗಲಿ.

---

* 'ಕಲಾಹೀನೇ ಸಾಽನುಮತಿಃ ಪೂರ್ಣೇ ರಾಕಾ ನಿಶಾಕರೇ' ಎಂಬ ಕೋಶವಚನದಂತೆ ಕಲಾ ಹೀನನಾಗಿರುವ ಚಂದ್ರನುಳ್ಳ ಪೂರ್ಣಿಮೆಯು ಅನುಮತಿ. ಪೂರ್ಣಚಂದ್ರನುಳ್ಳ ಪೂರ್ಣಿಮೆಯು ರಾಕಾ. ಈ ಮುಂದಿನ ಮಂತ್ರಗಳಲ್ಲಿ ಆ ಅಭಿಮಾನಿದೇವತೆಗಳನ್ನು ಅನುಮತಿ, ರಾಕಾ ಎಂದು ಹೇಳಲಾಗಿದೆ. 'ಭವತಾಮ್' ಎಂಬ ದ್ವಿವಚನವಿರುವುದರಿಂದ ಅಗ್ನಿಯೂ, ಅನುಮತಿಯೂ ಎಂದು ವಿವರಿಸಲಾಗಿದೆ. 'ಭವತಾಮ್' ಎಂಬ ಛಾಂದಸಪ್ರಯೋಗದಿಂದ ಸಾಯಣರು ಅಗ್ನಿಯು ಸುಖಕರನಾಗಲಿ ಎಂದು ವಿವರಿಸಿರುತ್ತಾರೆ.

ಅನ್ವಿದನುಮತೇ ತ್ವಂ [(ಇಳ)]ಮನ್ಯಾಸೈ ಶಂ ಚ ನಃ ಕೃಧಿ ।

ಕ್ರತ್ವೇ ದಕ್ಷಾಯ ನೋ ಹಿನು ಪ್ರ ಣ ಆಯೂಗ್ಂಷಿ ತಾರಿಷಃ ॥

ಅನುಮನ್ಯತಾಮನುಮನ್ಯಮಾನಾ ಪ್ರಜಾವಂತಗ್ಂ ರಯಿ

ಮಕ್ಷೀಯಮಾಣಮ್ ।

---

ಅನ್ವಿತಿ । ಇತ್ । ಅನುಮತ ಇತ್ಯನು-ಮತೇ । ತ್ವಮ್ । ಮನ್ಯಾಸೈ । ಶಮ್ । ಚ । ನಃ ।

ಕೃಧಿ ॥ ಕ್ರತ್ವೇ । ದಕ್ಷಾಯ । ನಃ । ಹಿನು । ಪ್ರೇತಿ । ನಃ । ಆಯೂಗ್ಂಷಿ । ತಾರಿಷಃ ॥

ಅನ್ವಿತಿ । ಮನ್ಯತಾಮ್ । ಅನುಮನ್ಯಮಾನೇತ್ಯನು-ಮನ್ಯಮಾನಾ । ಪ್ರಜಾವಂತಮಿತಿ

ಪ್ರಜಾ-ವಂತಮ್ । ರಯಿಮ್ । ಅಕ್ಷೀಯಮಾಣಮ್ ॥

---

| ಮಂತ್ರ | ವಿನಿಯೋಗ |
|---|---|
| ಅನ್ವಿದನುಮತೇ...ತಾರಿಷಃ ॥ | ಅನುಮತಿಚರುಯಾಗದ ಯಾಜ್ಯಾನುವಾಕ್ಯೆ. |
| ಅನುಮನ್ಯತಾಮ್...ಯಚ್ಛತು ॥ | ಈ ಯಾಗದ ವೈಕಲ್ಪಿಕವಾದ ಪುರೋನುವಾಕ್ಯೆ. |

---

✦**ಅನುಮತೇ**=ಅನುಮತಿದೇವಿಯೇ! **ತ್ವಮ್**=ನೀನು; **ಅನು ಇತ್ ಮನ್ಯಾಸೈ**= ಸರ್ವ ಪ್ರಕಾರಗಳಿಂದಲೂ ಯಾಗವನ್ನು ಅನುಮತಿಸು; **ನಃ**=ನಮಗೆ; **ಶಮ್ ಚ ಕೃಧಿ**=ಸುಖ ವನ್ನೂ ಉಂಟುಮಾಡು; **ನಃ ಕ್ರತ್ವೇ ದಕ್ಷಾಯ**=ನಮ್ಮ ಫಲವನ್ನು ಕೊಡಲು ಸಮರ್ಥ ವಾದ ಯಜ್ಞದಲ್ಲಿ/ಕ್ರತುವಿಗಾಗಿ; **ಹಿನು**=ಪ್ರೀತಿಯುಕ್ತಳಾಗಿರು;/ಯಾಗಕ್ಕಾಗಿ ನಮ್ಮನ್ನು ಪ್ರೇರಿಸು; **ನಃ**=ನಮಗೆ; **ಆಯೂಗ್ಂಷಿ**=ಆಯುಸ್ಸನ್ನು; **ಪ್ರ ತಾರಿಷಃ**=ಹೆಚ್ಚಿಸು. ✦**ಅನುಮನ್ಯಮಾನಾ**=ಎಲ್ಲವನ್ನೂ ಅನುಮತಿಸುವ ಅನುಮತಿದೇವಿಯು; **ಪ್ರಜಾ ವಂತಮ್**=ಪುತ್ರಾದಿಸಹಿತವಾದ; **ಅಕ್ಷೀಯಮಾಣಮ್**=ನಾಶವಿಲ್ಲದೇ ವೃದ್ಧಿಹೊಂದು ತ್ತಲೇ ಇರುವ; **ರಯಿಮ್**=ಧನವನ್ನು; **ಅನುಮನ್ಯತಾಮ್**=ನಮ್ಮ ವಿಷಯದಲ್ಲಿ ಅನುಗ್ರಹಿಸಲಿ;

**ತಸ್ಯೈ ವಯಗ್ಂ ಹೇಡಸಿ ಮಾಽಪಿ ಭೂಮ ಸಾ ನೋ ದೇವೀ ಸುಹವಾ ಶರ್ಮ ಯಚ್ಛತು ॥ ಯಸ್ಯಾಮಿದಂ ಪ್ರದಿಶಿ ಯದ್ವಿರೋಚತೇಽನುಮತಿಂ ಪ್ರತಿ ಭೂಷಂತ್ಯಾಯವಃ ।**

---

ತಸ್ಯೈ । ವಯಮ್ । ಹೇಡಸಿ । ಮಾ । ಅಪೀತಿ । ಭೂಮ । ಸಾ । ನಃ । ದೇವೀ । ಸುಹವೇತಿ ಸು-ಹವಾ । ಶರ್ಮ । ಯಚ್ಛತು ॥ ಯಸ್ಯಾಮ್ । ಇದಮ್ । ಪ್ರದಿಶೀತಿ ಪ್ರ-ದಿಶಿ । ಯತ್ । ವಿರೋಚತ ಇತಿ ವಿ-ರೋಚತೇ । ಅನುಮತಿಮಿತ್ಯನು-ಮತಿಮ್ । ಪ್ರತೀತಿ । ಭೂಷಂತಿ । ಆಯವಃ ॥

---

| ಮಂತ್ರ | ವಿನಿಯೋಗ |
|---|---|
| ಯಸ್ಯಾಮಿದಂ...ಯಚ್ಛತು ॥ | ಇದೇ ಯಾಗದ ವೈಕಲ್ಪಿಕ ಯಾಜ್ಯೆ. |

---

**ವಯಮ್**=ನಾವು; **ತಸ್ಯೈ**=ಆ ದೇವಿಯ; **ಹೇಡಸಿ ಅಪಿ ಮಾ ಭೂಮ**=ಕೋಪದಲ್ಲಿ ಅಥವಾ ಔದಾಸೀನ್ಯದಲ್ಲಿ ಇಲ್ಲದಿರುವಂತಾಗಲಿ/ಅನುಗ್ರಹಬುದ್ಧಿಯಲ್ಲಿಯೇ ಇರುವಂತಾಗಲಿ. **ಸಾ ಸುಹವಾ ದೇವೀ**=ಅಂತಹ ಸುಲಭವಾಗಿ ಆಹ್ವಾನಿಸಲು ಶಕ್ಯಳಾಗಿರುವ ಆ ಅನುಮತಿದೇವಿಯು; **ನಃ ಶರ್ಮ ಯಚ್ಛತು**=ನಮಗೆ ಸುಖವನ್ನು ಕೊಡಲಿ; ✦**ಯತ್ ಇದಮ್**=ಯಾವ ಈ ಪ್ರಪಂಚವು; **ವಿರೋಚತೇ**=ವಿವಿಧರೂಪಗಳಿಂದ ಪ್ರಕಾಶಿಸುತ್ತದೆಯೋ; [ಇಂತಹ ಜಗತ್ತು] **ಪ್ರದಿಶಿ**=ಮಾರ್ಗದರ್ಶಕಳಾದ/ಆಜ್ಞೆಯನ್ನು ಮಾಡುವ; **ಯಸ್ಯಾಮ್**=ಯಾವ ಅನುಮತಿದೇವಿಯಲ್ಲಿ ಇದೆಯೋ; **ಅನುಮತಿಮ್**=ಆ ಅನುಮತಿದೇವಿಯನ್ನು; **ಆಯವಃ**=ಸೇವಿಸಲು ಬರುವ ಯಜಮಾನರು; **ಪ್ರತಿಭೂಷಂತಿ**=ಹವ್ಯಾದಿಗಳಿಂದ ಅಲಂಕರಿಸುತ್ತಾರೆ/ಸೇವಿಸುತ್ತಾರೆ.

---

ಹೇ! ಅನುಮತಿದೇವಿಯೇ! ನೀನು ನಮ್ಮ ಯಾಗಕ್ಕೆ ಅನುಮತಿಯನ್ನು ನೀಡು. ನಮ್ಮ

ಯಸ್ಯಾ ಉಪಸ್ಥ ಉರ್ವಂತರಿಕ್ಷಗ್ಂ ಸಾ ನೋ ದೇವೀ ಸುಹವಾ ಶರ್ಮ ಯಚ್ಛತು ॥[(೩೫)]॥ ರಾಕಾಮಹಗ್ಂ ಸುಹವಾಗ್ಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ ।

---

ಯಸ್ಯಾಃ । ಉಪಸ್ಥ ಇತ್ಯುಪ-ಸ್ಥಃ । ಉರು । ಅಂತರಿಕ್ಷಮ್ । ಸಾ । ನಃ । ದೇವೀ । ಸುಹವೇತಿ ಸು-ಹವಾ । ಶರ್ಮ । ಯಚ್ಛತು ।(೩೫)। ರಾಕಾಮ್ । ಅಹಮ್ । ಸುಹವಾಮಿತಿ ಸು-ಹವಾಮ್ । ಸುಷ್ಟುತೀತಿ ಸು-ಸ್ತುತೀ । ಹುವೇ । ಶೃಣೋತು । ನಃ । ಸುಭಗೇತಿ ಸು-ಭಗಾ । ಬೋಧತು । ತ್ಮನಾ ॥

---

| ಮಂತ್ರ | ವಿನಿಯೋಗ |
|---|---|
| ರಾಕಾಮಹಂ...ಉಕ್ಥ್ಯಮ್ ॥ | ದೇವಿಕಾಹವಿಸ್ಸುಗಳಲ್ಲಿ ಮೂರನೆಯ ಹವಿಸ್ಸಿನ ಪುರೋನುವಾಕ್ಯೆ. |

---

**ಯಸ್ಯಾಃ ಉಪಸ್ಥಃ**=ಯಾವ ಸರ್ವವ್ಯಾಪಿಯಾದ ದೇವಿಯ ಶರೀರೈಕದೇಶವು; **ಉರು ಅಂತರಿಕ್ಷಮ್**=ವಿಶಾಲವಾದ ಅಂತರಿಕ್ಷವಾಗಿದೆಯೋ; **ಸುಹವಾ**=ಸುಲಭವಾಗಿ ಕರೆಯಬಹುದಾದ; **ಸಾ ದೇವೀ**=ಆ ಅನುಮತಿದೇವಿಯು; **ನಃ ಶರ್ಮ ಯಚ್ಛತು**=ನಮಗೆ ಸುಖವನ್ನು ಕೊಡಲಿ.✦**ಅಹಮ್**=ನಾನು; **ಸುಹವಾಮ್**= ನಮ್ಮ ಆಹ್ವಾನವನ್ನು ಸುಲಭವಾಗಿ ಅಂಗೀಕರಿಸುವ; **ರಾಕಾಮ್**=ರಾಕಾದೇವಿಯನ್ನು; **ಸುಷ್ಟುತೀ**=ಒಳ್ಳೆಯ ಸ್ತುತಿಯಿಂದ; **ಹುವೇ**=ಕರೆಯುತ್ತೇನೆ. **ಸುಭಗಾ**=ಸೌಭಾಗ್ಯಯುಕ್ತಳಾದ ಆ ರಾಕಾದೇವಿಯು; **ನಃ ಶೃಣೋತು**=ನಮ್ಮ ಕರೆಯನ್ನು ಕೇಳಲಿ; **ತ್ಮನಾ**=ತಾನಾಗಿಯೇ **ಬೋಧತು**=ನಮ್ಮ ಅಭಿಪ್ರಾಯವನ್ನು ತಿಳಿಯಲಿ.

---

ಯಜ್ಞದ ವಿಷಯದಲ್ಲಿ ಒಲವನ್ನು ತೋರಿಸು. ನಮಗೆ ದೀರ್ಘಾಯುಸ್ಸನ್ನು ಕರುಣಿಸು.

ಎಲ್ಲವನ್ನೂ ಅನುಮತಿಸುವ ಅನುಮತಿದೇವಿಯು ಪುತ್ರಾದಿಗಳನ್ನೂ ಅಕ್ಷಯವಾದ ಸಂಪತ್ತನ್ನೂ ಅನುಗ್ರಹಿಸಲಿ. ನಾವು ಅವಳ ಅನುಗ್ರಹಬುದ್ಧಿಯಲ್ಲಿಯೇ ಇರೋಣ.

**ಸೀವ್ಯತ್ವಪಸ್ಸೂಚ್ಯಾಽಚ್ಛಿದ್ಯಮಾನಯಾ ದದಾತು ವೀರಗ್ಂ ಶತದಾಯಮುಕ್ಥ್ಯಮ್ ॥ ಯಾಸ್ತೇ ರಾಕೇ ಸುಮತಯ ಸ್ಸುಪೇಶಸೋ ಯಾಭಿರ್ದದಾಸಿ ದಾಶುಷೇ ವಸೂನಿ ।**

---

ಸೀವ್ಯತು । ಅಪಃ । ಸೂಚ್ಯಾ । ಅಚ್ಛಿದ್ಯಮಾನಯಾ । ದದಾತು । ವೀರಮ್ । ಶತದಾಯಮಿತಿ ಶತ-ದಾಯಮ್ । ಉಕ್ಥ್ಯಮ್ ॥ ಯಾಃ । ತೇ । ರಾಕೇ । ಸುಮತಯ ಇತಿ ಸು-ಮತಯಃ । ಸುಪೇಶಸ ಇತಿ ಸು-ಪೇಶಸಃ । ಯಾಭಿಃ । ದದಾಸಿ । ದಾಶುಷೇ । ವಸೂನಿ ॥

---

| ಮಂತ್ರ | ವಿನಿಯೋಗ |
| --- | --- |
| ಯಾಸ್ತೇ ರಾಕೇ...ರರಾಣಾ ॥ | ದೇವಿಕಾಹವಿಸ್ಸುಗಳಲ್ಲಿ ಮೂರನೆಯ ಹವಿಸ್ಸಿನ ಯಾಜ್ಯಾನುವಾಕ್ಯೆ. |

---

**ಅಚ್ಛಿದ್ಯಮಾನಯಾ**=ವಿಚ್ಛೇದವಿಲ್ಲದ/ಯಾವಾಗಲೂ ಇರುವ; **ಸೂಚ್ಯಾ**=ಒಂದು ಗೂಡಿಸುವ ಸೂಜಿಯಂತೆ ಇರುವ ಅನುಗ್ರಹಬುದ್ಧಿಯಿಂದ; **ಅಪಃ ಸೀವ್ಯತು**=ನಮ್ಮ ಕರ್ಮಗಳನ್ನು ನಿರ್ದೋಷಗಳನ್ನಾಗಿ ಮಾಡಲಿ. **ಶತದಾಯಮ್**=ನೂರಾರು ವಸ್ತುಗಳನ್ನು ದಾನ ಮಾಡುವ; **ಉಕ್ಥ್ಯಮ್**=ಶಸ್ತ್ರ-ಸ್ತೋತ್ರಾದಿಯುಕ್ತವಾದ ಯಾಗಗಳನ್ನು ಅನುಷ್ಠಿಸುವ; **ವೀರಮ್**=ಸತ್ಪುತ್ರನನ್ನು; **ದದಾತು**=ರಾಕಾದೇವಿಯು ಕೊಡಲಿ. ✦**ರಾಕೇ**=ರಾಕಾದೇವಿಯೇ! **ತೇ ಯಾಃ**=ನಿನ್ನ ಯಾವ; **ಸುಮತಯಃ**=ಒಳ್ಳೆಯ ಅನುಗ್ರಹಬುದ್ಧಿಗಳೂ; **ಸುಪೇಶಸಃ**=ಒಳ್ಳೆಯ ಕಾರ್ಯಗಳು ಇವೆಯೋ; **ಯಾಭಿಃ**=ಯಾವ ಅನುಗ್ರಹಬುದ್ಧಿ ಮತ್ತು ಒಳ್ಳೆಯ ಕಾರ್ಯಗಳಿಂದ; **ದಾಶುಷೇ**=[ದೇವತೆಗಳಿಗೆ ಹವಿಸ್ಸನ್ನು] ಸಮರ್ಪಿಸುವ ಯಜಮಾನನಿಗೆ; **ವಸೂನಿ ದದಾಸಿ**=ಧನಸಂಪತ್ತನ್ನು ಕೊಡುತ್ತೀಯೋ;

---

ಅವಳ ಕೋಪಕ್ಕಾಗಲೀ, ಔದಾಸೀನ್ಯಕ್ಕಾಗಲೀ ಗುರಿಯಾಗದಿರೋಣ. ಸುಲಭವಾಗಿ ಆಹ್ವಾನಿಸಬಹುದಾದ ಅನುಮತಿದೇವಿಯು ನಮಗೆ ಸುಖವನ್ನು ನೀಡಲಿ.

ತಾಭಿರ್ನೋ ಅದ್ಯ ಸುಮನಾ ಉಪಾಗಹಿ ಸಹಸ್ರಪೋಷಗ್ಂ

ಸುಭಗೇ ರರಾಣಾ ॥

---

ತಾಭಿಃ । ನಃ । ಅದ್ಯ । ಸುಮನಾ ಇತಿ ಸು–ಮನಾಃ । ಉಪಾಗಹೀತ್ಯುಪ–ಆಗಹಿ ।

ಸಹಸ್ರಪೋಷಮಿತಿ ಸಹಸ್ರ–ಪೋಷಮ್ । ಸುಭಗ ಇತಿ ಸು–ಭಗೇ । ರರಾಣಾ ॥

---

ತಾಭಿಃ=ಆ ಬುದ್ಧಿ ಮತ್ತು ಕಾರ್ಯಗಳಿಂದ ಕೂಡಿದವಳಾಗಿ; ಅದ್ಯ=ಈಗ/ಈ ಯಜ್ಞದಲ್ಲಿ; ನಃ=ನಮ್ಮ ಬಳಿಗೆ; ಸುಮನಾಃ=ಸೌಮನಸ್ಯವುಳ್ಳವಳಾಗಿ/ಸೌಮನಸ್ಯವನ್ನು ಕೊಡುವವಳಾಗಿ; ಉಪಾಗಹಿ=ಬಾ. ಸುಭಗೇ=ಸೌಭಾಗ್ಯವುಳ್ಳವಳೇ! ಸಹಸ್ರಪೋಷಮ್ ರರಾಣಾ=ಸಾವಿರಾರು ಸಂಖ್ಯೆಯ ದನಗಳ ಪುಷ್ಟಿಯನ್ನು ಕೊಡುವವಳಾಗಿ ಬಾ.

---

ಈ ವಿವಿಧರೂಪಗಳಿಂದ ಕೂಡಿರುವ ಜಗತ್ತು ಅನುಮತಿದೇವಿಯ ಆಜ್ಞಾಧೀನವಾಗಿದೆ. ಯಜಮಾನರು ಆ ದೇವಿಯನ್ನು ಹವ್ಯಾದಿಗಳಿಂದ ಆರಾಧಿಸುತ್ತಾರೆ. ಈ ವಿಶಾಲವಾದ ಅಂತರಿಕ್ಷವು ಸರ್ವವ್ಯಾಪಿಯಾದ ಅನುಮತಿಯ ಶರೀರದ ಒಂದು ಭಾಗವೇ ಆಗಿದೆ. ಸುಲಭವಾಗಿಯೇ ಭಕ್ತರ ಆಹ್ವಾನವನ್ನು ಮನ್ನಿಸುವ ಆ ದೇವಿಯು ನಮಗೆ ಸುಖವನ್ನು ಕೊಡಲಿ.

ರಾಕಾದೇವಿಯನ್ನು ಸುಲಭವಾಗಿ ಆಹ್ವಾನಿಸಬಹುದು. ಆಕೆಯು ನಮ್ಮ ಒಳ್ಳೆಯ ಸ್ತುತಿಯನ್ನು ಕೇಳಲಿ. ತಾನೇ ನಮ್ಮ ಆಶಯವನ್ನು ತಿಳಿಯಲಿ. ಸೂಜಿಯಿಂದ ಹರಿದಿರುವ ಬಟ್ಟೆಯನ್ನು ಹೊಲೆಯುವಂತೆ ದೋಷಗಳನ್ನು ಸರಿಪಡಿಸಬಲ್ಲ ಸೂಕ್ಷ್ಮಬುದ್ಧಿಯಿಂದ ನಮ್ಮ ಯಾಗವನ್ನು ನಿರ್ದೋಷವನ್ನಾಗಿ ಮಾಡಲಿ. ನಮಗೆ ದಾತೃವಾದ ಯಾಗಶೀಲನಾದ ಮಗನನ್ನು ಕೊಡಲಿ.

ಸೌಭಾಗ್ಯಯುಕ್ತಳಾದ ರಾಕಾದೇವಿಯೇ! ನೀನು ಒಳ್ಳೆಯ ಅನುಗ್ರಹಬುದ್ಧಿಯುಳ್ಳವಳು. ಒಳ್ಳೆಯ ಕಾರ್ಯವನ್ನು ಮಾಡತಕ್ಕವಳು. ಯಜಮಾನನಿಗೆ ಸಂಪತ್ತನ್ನು ಕೊಡುವವಳು. ಈ ನಮ್ಮ ಯಜ್ಞದಲ್ಲಿ ಅನುಗ್ರಹಬುದ್ಧಿಯುಳ್ಳ ನೀನು ಸರ್ವವಿಧಪುಷ್ಟಿಯನ್ನು ಕರುಣಿಸುತ್ತಾ, ನಮ್ಮ ಬಳಿಗೆ ಬಾ.

# *ಸಿನೀವಾಲಿ *ಯಾ ಸುಪಾಣಿಃ ।

ಸಿನೀವಾಲಿ । ಯಾ । ಸುಪಾಣಿರಿತಿ ಸು-ಪಾಣಿಃ ॥

| ಮಂತ್ರ | ವಿನಿಯೋಗ |
|---|---|
| *ಸಿನೀವಾಲಿ...ದಿದಿಡ್ಢಿ ನಃ ॥ | ಸಿನೀವಾಲಿಚರುಯಾಗದ ಪುರೋನುವಾಕ್ಯೆ. |

ಸಿನೀವಾಲಿ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ । ಜುಷಸ್ವ ಹವ್ಯಮಾಹುತಂ ಪ್ರಜಾಂ ದೇವಿ ದಿದಿಡ್ಢಿ ನಃ ॥

ತಾತ್ಪರ್ಯ:-ಸಿನೀವಾಲಿಯೇ! ನೀನು ದೇವತೆಗಳ ಸೋದರಿ. ಪೃಥುಜಘನವುಳ್ಳವಳು. ನಾವು ಕೊಟ್ಟ ಹವ್ಯವನ್ನು ಸ್ವೀಕರಿಸು. ನಮ್ಮ ಪ್ರಜೆಯನ್ನು ವೃದ್ಧಿಪಡಿಸು.

| ಮಂತ್ರ | ವಿನಿಯೋಗ |
|---|---|
| *ಯಾ ಸುಪಾಣಿಃ...ಜುಹೋತನ ॥ | ಸಿನೀವಾಲಿಚರುಯಾಗದ ಯಾಜ್ಯಾನುವಾಕ್ಯೆ. |

ಯಾ ಸುಪಾಣಿಃ ಸ್ವಂಗುರಿಸ್ಸುಷೂಮಾ ಬಹುಸೂವರೀ । ತಸ್ಯೈ ವಿಶ್ಪತ್ನಿಯೈ ಹವಿಃ ಸಿನೀವಾಲ್ಯೈ ಜುಹೋತನ ॥

ತಾತ್ಪರ್ಯ:-ಸಿನೀವಾಲಿಯೇ! ನೀನು ಒಳ್ಳೆಯ ಕೈಗಳುಳ್ಳವಳು. ಒಳ್ಳೆಯ ಬೆರಳುಗಳುಳ್ಳವಳು. ಒಳ್ಳೆಯ ಪ್ರಸವವುಳ್ಳವಳು, ಹಲವು ಮಕ್ಕಳುಳ್ಳವಳು. ಅಂತಹ ಪ್ರಜಾಪಾಲಕಳಾದ ಸಿನೀವಾಲಿದೇವಿಗೆ ಹವಿಸ್ಸನ್ನು ಸಮರ್ಪಿಸುತ್ತೇವೆ.

* ಈ ಎರಡು ಮಂತ್ರಗಳ ಪ್ರತೀಕಪಾಠವು ಇಲ್ಲಿದೆ. ಮಂತ್ರಗಳ ಪೂರ್ಣಪಾಠವು ತೈ.ಸಂ.3.1.11 ರಲ್ಲಿದೆ. ಪದಶಃ ಅರ್ಥವನ್ನು ಅಲ್ಲಿ ನೀಡಲಾಗಿದೆ. ಇಲ್ಲಿ ತಾತ್ಪರ್ಯವನ್ನು ಮಾತ್ರ ಕೊಟ್ಟಿದೆ.

ಕುಹೂಮಹಗ್ಂ ಸುಭಗಾಂ ವಿದ್ಮನಾಪಸಮಸ್ಮಿನ್,
ಯಜ್ಞೇ ಸುಹವಾಂ ಜೋಹವೀಮಿ । ಸಾ ನೋ ದದಾತು
ಶ್ರವಣಂ ಪಿತೃಣಾಂ ತಸ್ಯಾಸ್ತೇ ದೇವಿ ಹವಿಷಾ ವಿಧೇಮ ॥

---

ಕುಹೂಮ್ । ಅಹಮ್ । ಸುಭಗಾಮಿತಿ ಸು-ಭಗಾಮ್ । ವಿದ್ಮನಾಪಸಮಿತಿ ವಿದ್ಮನ-ಅಪಸಮ್ । ಅಸ್ಮಿನ್ನ್ । ಯಜ್ಞೇ । ಸುಹವಾಮಿತಿ ಸು-ಹವಾಮ್ । ಜೋಹವೀಮಿ ॥ ಸಾ । ನಃ । ದದಾತು । ಶ್ರವಣಮ್ । ಪಿತೃಣಾಮ್ । ತಸ್ಯಾಃ । ತೇ । ದೇವಿ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಕುಹೂಮಹಂ...ವಿಧೇಮ ॥ | ದೇವಿಕಾಹವಿಸ್ಸುಗಳಲ್ಲಿ ಐದನೆಯ ಕುಹೂ ಚರುವಿನ ಪುರೋನುವಾಕ್ಯೆ. |

---

✦ಅಹಮ್=ನಾನು; ಅಸ್ಮಿನ್ ಯಜ್ಞೇ=ಈ ಯಜ್ಞದಲ್ಲಿ; ಸುಭಗಾಮ್=ಒಳ್ಳೆಯ ಭಾಗ್ಯವತಿಯಾದ; ವಿದ್ಮನಾಪಸಮ್=ನಮ್ಮ ಕರ್ಮಗಳನ್ನು ತಿಳಿದಿರುವ; ಸುಹವಾಮ್ =ಸುಲಭವಾಗಿ ಆಹ್ವಾನಿಸಬಹುದಾದ; ಕುಹೂಮ್=ಕುಹೂದೇವಿಯನ್ನು; ಜೋಹ ವೀಮಿ=ಹೆಚ್ಚಾಗಿ ಆಹ್ವಾನಿಸುತ್ತೇನೆ. ಸಾ=ಆ ದೇವಿಯು; ನಃ=ನಮಗೆ; ಪಿತೃಣಾಮ್ ಶ್ರವಣಮ್=ಪಿತೃದೇವತೆಗಳು ಕೇಳುವ/ಕೇಳಿ ಸಂತೋಷಪಡುವ ಯಶಸ್ಸನ್ನು; ದದಾತು=ಕೊಡಲಿ. ತಸ್ಯಾಃ ದೇವಿ=ಅಂತಹ ಕುಹೂದೇವಿಯೇ! ತೇ ಹವಿಷಾ ವಿಧೇಮ=ನಿನಗೆ ಹವಿಸ್ಸನ್ನು ಸಮರ್ಪಿಸಿ ಸೇವಿಸುತ್ತೇವೆ.

---

ಕುಹೂದೇವಿಯು ಸೌಭಾಗ್ಯವುಳ್ಳವಳು. ನಮ್ಮ ಕಾರ್ಯಗಳನ್ನು ತಿಳಿದವಳು. ಸುಲಭವಾಗಿ ಕರೆಯಲು ಶಕ್ಯಳಾದವಳು. ಆ ದೇವಿಯನ್ನು ಈ ಯಜ್ಞದಲ್ಲಿ ಮತ್ತೆ ಮತ್ತೆ ಆಹ್ವಾನಿಸುತ್ತೇನೆ. ಆ ದೇವಿಯು ನಮ್ಮ ಹಿಂದಿನವರು ಕೇಳಿ ಸಂತೋಷಿಸುವಂತಹ

**ಕುಹೂರ್ದೇವಾನಾಮಮೃತಸ್ಯ ಪತ್ನೀ ಹವ್ಯಾ ನೋ ಅಸ್ಯ ಹವಿಷಶ್ಚಿಕೇತು । ಸಂ ದಾಶುಷೇ ಕಿರತು ಭೂರಿ ವಾಮಗ್ಂ ರಾಯಸ್ಪೋಷಂ ಚಿಕಿತುಷೇ ದಧಾತು ॥೩೬-11॥**

**ಭಾಮಾಸೋ ದಾತಾ ತ್ವಮಂತರಿಕ್ಷಗ್ಂ ಸಾ ನೋ ದೇವೀ ಸುಹವಾ ಶರ್ಮ ಯಚ್ಛತು ಶ್ರವಣಂ ಚತುರ್ವಿಗ್ಂಶತಿಶ್ಚ ॥**

---

**ಕುಹೂಃ । ದೇವಾನಾಮ್ । ಅಮೃತಸ್ಯ । ಪತ್ನೀ । ಹವ್ಯಾ । ನಃ । ಅಸ್ಯ । ಹವಿಷಃ । ಚಿಕೇತು ॥ ಸಮಿತಿ । ದಾಶುಷೇ । ಕಿರತು । ಭೂರಿ । ವಾಮಮ್ । ರಾಯಃ । ಪೋಷಮ್ । ಚಿಕಿತುಷೇ । ದಧಾತು ॥**

---

| ಮಂತ್ರ | ವಿನಿಯೋಗ |
|---|---|
| **ಕುಹೂಃ...ದಧಾತು ॥** | **ಕುಹೂಚರುವಿನ ಯಾಜ್ಯಾನುವಾಕ್ಯೆ.** |

---

✦**ದೇವಾನಾಮ್**=ದೇವತೆಗಳಿಗೆ; **ಅಮೃತಸ್ಯ**=ಅಮೃತದಂತೆ ಪ್ರಿಯವಾದ ಯಾಗ ಹವಿಸ್ಸುಗಳ; **ಪತ್ನೀ**=ಪಾಲಕಳಾದ; **ಹವ್ಯಾ**=ಆಹ್ವಾನಾರ್ಹಳಾದ; **ಕುಹೂಃ**=ಈ ಕುಹೂದೇವಿಯು; **ನಃ**=ನಮ್ಮ; **ಅಸ್ಯ ಹವಿಷಃ**=ಈ ಹವಿಸ್ಸಿನ ಸಾರವನ್ನು; **ಚಿಕೇತು**=ತಿಳಿಯಲಿ; **ದಾಶುಷೇ**=ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗೆ; **ಭೂರಿ ವಾಮಮ್**=ಅಪೇಕ್ಷಣಿಯವಾದ ಹೆಚ್ಚಾದ ಧನವನ್ನು/ಪಾರಲೌಕಿಕವಾದ ಫಲವನ್ನು; **ಸಮ್ ಕಿರತು**=ಚೆನ್ನಾಗಿ ಕೊಡಲಿ. **ಚಿಕಿತುಷೇ**=ನಿನ್ನ ಮಹಿಮೆಯನ್ನು ತಿಳಿದ ಯಜಮಾನನಿಗೆ; **ರಾಯಸ್ಪೋಷಮ್ ದಧಾತು**=ಧನಪುಷ್ಟಿಯನ್ನು ನೆಲೆಗೊಳಿಸಲಿ.

---

ಯಶಸ್ಸನ್ನು ನಮಗೆ ಕೊಡಲಿ. ನಾವು ಆಕೆಗೆ ಹವಿಸ್ಸನ್ನು ಸಮರ್ಪಿಸುತ್ತೇವೆ.

ಕುಹೂದೇವಿಯು ದೇವತೆಗಳಿಗೆ ಪ್ರಿಯವಾದ ಅಮೃತದಂತಿರುವ ಹವಿಸ್ಸನ್ನು ರಕ್ಷಿಸತಕ್ಕವಳು. ಆಹ್ವಾನಾರ್ಹಳು. ಆಕೆಯು ಈ ಹವಿಸ್ಸಿನ ಸಾರವನ್ನು ತಿಳಿಯಲಿ. ಹವಿಸ್ಸನ್ನು ಕೊಡುವ ಯಜಮಾನನಿಗೆ ಅಪೇಕ್ಷಿತವಾದ ಐಹಿಕವಾದ, ಪಾರಲೌಕಿಕವಾದ ಫಲಗಳನ್ನು ಕೊಡಲಿ. ನಿನ್ನ ಮಹಿಮೆಯನ್ನು ತಿಳಿದ ಯಜಮಾನನಿಗೆ ಸರ್ವವಿಧವಾದ ಸಂಪತ್ತಿನ ಪುಷ್ಟಿಯನ್ನೂ ಉಂಟುಮಾಡಲಿ.

ಅಗ್ನೇ ತೇಜಸ್ವಿನ್ವಾಯುರ್ವಸವಸ್ತ್ವೃತದ್ವಾ ಅಪಾಂ ವಾಯುರಸಿ ಪ್ರಾಣೋ ನಾಮ ದೇವಾ ವೈ ಯದ್ಯಜ್ಞೇನ ನ ಪ್ರಜಾಪತಿರ್ದೇವಾಸುರಾನಾಯುರ್ದಾ ಏತಂ ಯುವಾನಗ್‌ಂ ಸೂರ್ಯೋ ದೇವ ಇದಂ ವಾಮೇಕಾದಶ ||11||

ಅಗ್ನೇ ತೇಜಸ್ವಿನ್ವಾಯುರಸಿ ಛಂದಸಾಂ ವೀರ್ಯಂ ಮಾತರಂ ಚ ಷಟ್ತ್ರಿಗ್‌ಂಶತ್ ||36||

ಅಗ್ನೇ ತೇಜಸ್ವಿಞ್ಚಿಕಿತುಷೇ ದಧಾತು ||

---

*ವಿವಿಚಮದ್ಯಾಗದ ಮತ್ತು ದೇವಿಕಾಹವಿಸ್ಸಿನ ಮೂರನೆಯ ಯಾಜ್ಯಾನುವಾಕ್ಯೆಯ ಪ್ರತೀಕವನ್ನು ಸಂಗ್ರಹಕಾರರು ಸೂಚಿಸಿಲ್ಲ.

# ವಿನಿಯೋಗಸಂಗ್ರಹ

ಭವೇದಿದಂ1-4 ವಾಮಿತ್ಯೈಂದ್ರಾಬಾರ್ಹಸ್ಪತ್ಯೇ ಚತುಷ್ಟಯಂ।
5-6ವಿ ತೇ ವಿವಿಚಿಮದ್ಯಾಗೇ7-10ಧಾತೇತ್ಯೇತಚ್ಚತುಷ್ಟಯಮ್ ॥
ದೇವಿಕಾಸ್ವಾದ್ಯಯಾಗೇ ಸ್ಯಾದನ್ವಿತ್ಯನುಮತೇ ಚರೌ11-14।
ಚತುಷ್ಟಯಂ ಸ್ಯಾದ್ರಾಕಾಂ ತು15-16 ರಾಕಾದೇವ್ಯಾಶ್ಚರೌ ತಥಾ ॥
ಸಿನೀ17 ಯಾಸು18 ಸಿನೀವಾಲ್ಯಾಃ ಕುಹೂಂ19 ಕುಹೂಶ್ಚ20 ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ–20

## ಅನುವಾಕದ ವಿಶೇಷವಿಷಯಗಳು

### ಅ)ಛಂದಸ್ಸು

| ಮಂತ್ರ | ಛಂದಸ್ಸು |
|---|---|
| ೧) ಇದಂ ವಾಮಾ...ಶಸ್ಯತೇ ॥ | ಗಾಯತ್ರೀ |
| ೨) ಅಯಂ...ಪೀತಯೇ ॥ | ಗಾಯತ್ರೀ |
| ೩) ಅಸ್ಮೇ...ಸಹಸ್ರಿಣಮ್ ॥ | ಗಾಯತ್ರೀ |
| ೪) ಬೃಹಸ್ಪತಿಃ...ಕೃಣೋತು ॥ | ತ್ರಿಷ್ಟುಪ್ |
| ೫) ವಿ ತೇ...ರುಜಂತಃ ॥ | ತ್ರಿಷ್ಟುಪ್ |
| ೬) ತ್ವಾಮಗ್ನೇ...ಘೃತಶ್ರಿಯಮ್ ॥ | ತ್ರಿಷ್ಟುಪ್ |
| ೭) ಧಾತಾ ದದಾತು...ವಾವನತ್ ॥ | ಗಾಯತ್ರಿ |

೮) ಧಾತಾ ಪ್ರಜಾಯಾಃ...ವಿಧೇಮ ॥ ತ್ರಿಷ್ಟುಪ್

೯) ಧಾತಾ ದದಾತು ನಃ...ರಾಧಸಃ ॥ ಅನುಷ್ಟುಪ್

೧೦) ಧಾತಾ...ಸಜೋಷಾಃ ॥ ತ್ರಿಷ್ಟುಪ್

೧೧) ಅನು ನೋ...ಮಯಃ ॥ ಅನುಷ್ಟುಪ್

೧೨)ಅನ್ವಿದನುಮತೇ...ತಾರಿಷಃ ॥ ಅನುಷ್ಟುಪ್

೧೩) ಅನುಮನ್ಯತಾಮ್...ಯಚ್ಛತು ॥ ತ್ರಿಷ್ಟುಪ್

೧೪) ಯಸ್ಯಾಮಿದಂ...ಯಚ್ಛತು ॥ ಜಗತೀ

೧೫) ರಾಕಾಮಹಂ...ಉಕ್ಥ್ಯಮ್ ॥ ಜಗತೀ

೧೬) ಯಾಸ್ತೇ ರಾಕೇ...ರರಾಣಾ ॥ ಜಗತೀ

೧೭) ಸಿನೀವಾಲಿ...ದಿದಿಡ್ಢಿ ನಃ ॥ ಅನುಷ್ಟುಪ್

೧೮) ಯಾ ಸುಪಾಣಿಃ...ಜುಹೋತನ ॥ ಅನುಷ್ಟುಪ್

೧೯) ಕುಹೂಮಹಂ...ವಿಧೇಮ ॥ ತ್ರಿಷ್ಟುಪ್

೨೦) ಕುಹೂಃ...ದಧಾತು ॥ ತ್ರಿಷ್ಟುಪ್

# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – 1**

(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ, ಯಜ್ಞಗಳ ಪರಿಚಯ)

**ಸಂಪುಟ – 2**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 3**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 3–4–5 ಪ್ರಪಾಠಕಗಳು

**ಸಂಪುಟ – 4**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 6–7–8 ಪ್ರಪಾಠಕಗಳು)

**ಸಂಪುಟ – 5**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 6**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 3–4 ಪ್ರಪಾಠಕಗಳು)

**ಸಂಪುಟ – 7**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 5–6 ಪ್ರಪಾಠಕಗಳು)

**ಸಂಪುಟ – 8**

ತೈತ್ತಿರೀಯ ಸಂಹಿತೆ

(ತೃತೀಯ ಕಾಂಡ 1–2–3 ಪ್ರಪಾಠಕಗಳು)

ಪ್ರತಿಗಳಿಗೆ :

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ.)**

31, ಪಂಪಮಹಾಕವಿರಸ್ತೆ, ಬೆಂಗಳೂರು–560 004

ದೂರವಾಣಿ : 26677852



ತೈತ್ತಿರೀಯ ಸಂಹಿತೆ